# ಮಾಕಸ್ಸನ ಸಾಹಸ ಚರಿತ್ರೆ.



## ಮೂರನೇ ಭಾಗ.

ಬೂಕರ್ ಟಿ. ವಾಷಿಂಗ್‌ಟನ್‌ರವರ ಚರಿತ್ರೆ, ವಿದ್ಯಾರ್ಥಿಕರಭೂಷಣ,
ಪರಂತಪವಿಜಯ, ಅರ್ಥಸಾಧನ, ಹರಿಶ್ಚಂದ್ರ ಚರಿತ್ರೆ,
ಚೋರಗ್ರಹಣತಂತ್ರ ಮೊದಲಾದ ಪುಸ್ತಕಗಳ
ಗ್ರಂಥಕರ್ತರಾದ

ಪ್ರೊ. ಎಂ. ವೆಂಕಟಕೃಷ್ಣಯ್ಯನವರಿಂದ

ರಚಿಸಲ್ಪಟ್ಟದ್ದು.






[Price Re 1—4—0.] [ಕ್ರಯ ೧—೪—೦

# ಟೆಲಿಮಾಕಸ್ಸನ ಚರಿತ್ರೆ.

---

ಈ ಚರಿತ್ರೆಯ ಮೂರನೇ ಭಾಗವು ಈಗ ಮುದ್ರಿಸಲ್ಪಟ್ಟಿರುವುದು. ಈ ಗ್ರಂಥವು ಪ್ರಭುಗಳು ಯಾವ ರೀತಿಯಲ್ಲಿ ಪ್ರಭುತ್ವವನ್ನು ನಡೆಸಿದರೆ ಕೃತಕೃತ್ಯರಾಗುವರೋ, ಸತ್ಯವೂ, ಧರ್ಮವೂ ಹೇಗೆ ಉದ್ಧರಿಸಲ್ಪಟ್ಟರೆ ದೇವರ ಪ್ರಸನ್ನತೆಯು ಉಂಟಾಗುವುದೋ, ಶುಭಕರ್ಮಗಳಿಗೆ ಶುಭಫಲಗಳು ಹೇಗೆ ಬರುವುವೋ, ಅಶುಭಕರ್ಮಗಳಿಗೆ ಅಶುಭಫಲವು ಹೇಗೆ ತಪ್ಪುವುದಿಲ್ಲವೋ, ಯುಕ್ತಾಯುಕ್ತ ವಿಹೀನರಾಗಿ, ಹೊನ್ನು, ಹೆಣ್ಣು, ಮಣ್ಣುಗಳ ಮೇಲಿನ ಆಶೆಯಿಂದ ಮಾಡಬಾರದ ಕೆಲಸಗಳನ್ನು ಮಾಡತಕ್ಕವರು ಪರಿಣಾಮದಲ್ಲಿ ನರಕಯಾತನೆಯನ್ನು ಹೇಗೆ ಅನುಭವಿಸಬೇಕಾಗುವುದೋ, ಈ ಕಷ್ಟವು ಅದೃಶ್ಯವಾದ ಲೋಕಾಂತರದಲ್ಲಿ ಮಾತ್ರವೇ ಅಲ್ಲದೆ, ಈ ಲೋಕದಲ್ಲಿಯೇ ಹೇಗೆ ಸಂಭವಿಸುವುದೋ ಇವುಗಳು ನಿರೂಪಿಸಲ್ಪಟ್ಟು, ಟೆಲಿಮಾಕಸ್ಸನು ದುಷ್ಟನಿಗ್ರಹ, ಶಿಷ್ಟಪರಿಪಾಲನದ ಏರ್ಪಾಡುಗಳನ್ನು ಮಾಡಿ, ತಂದೆಯು ಎಲ್ಲಿಯೂ ಸಿಕ್ಕದೆ ಇದ್ದದ್ದರಿಂದ ಲೋಕಾಂತರದಲ್ಲಿರುವನೋ ಏನೋ ಎಂದು ಸ್ವರ್ಗಕ್ಕೆ ಪ್ರಯಾಣವನ್ನು ಮಾಡಿ, ದಾರಿಯಲ್ಲಿ ನರಕವನ್ನು ನೋಡಿ, ಯಮಧರ್ಮನಿಂದ ಸತ್ಕರಿಸಲ್ಪಟ್ಟು, ಎಲ್ಲರೂ ಅವರವರ ಮನೋವಾಕ್ಕರ್ಮಗಳಿಗನುಸಾರವಾದ ಫಲವನ್ನು ಹೇಗೆ ಹೊಂದುವರೋ ಅದನ್ನು ಸಾಕ್ಷಾತ್ತಾಗಿ ನೋಡಿ, ತಂದೆಯು ಬದುಕಿರುವನೆಂಬದಾಗಿಯೂ, ಅವನು ಭೂಮಿಯ ಮೇ... ಇರುವನೆಂಬದಾಗಿಯೂ ಹೇಗೆ ಗೊತ್ತುಮಾಡಿಕೊಂಡನೋ ಆ ಕಥಾ... ಈ ಮೂರನೇ ಭಾಗದಲ್ಲಿ ಪೂರೈಸಿರುವುದು. ನಾಲ್ಕನೇ ಭಾಗದಲ್ಲಿ ಪಾರ್ಥಿವ ಶರೀರದಲ್ಲಿ ಇವನು ಸ್ವರ್ಗಾರೋಹಣವನ್ನು ಮಾಡಿದ್ದು..., ಅವರ ಭೂಮಿಗೆ ಬಂದು, ಇಥಾಕಾ ಪಟ್ಟಣಕ್ಕೆ ಹೋಗಿ, ಶತ್ರುಗಳನ್ನು... ಪಟ್ಟ ತಂದೆತಾಯಿಗಳನ್ನು ಹೇಗೆ ಸತ್ಕರಿಸಿದನೋ, ಅವರಿಂದ ರಾ...ನಾಯ ಹಿಂತಿ... ಸಹಾಯದಿಂದ ...ಸಿ ಹೇಗೆ ಶಕಾಪುರುಷನಾದನೋ ಈ ವಿಷಯಗಳು ನಾ... ...ಯಿತು. ಹೀಗಿ... ನಿರೂಪಿಸಲ್ಪಡುವುವು. ಶೀಘ್ರದಲ್ಲಿಯೇ ಈ ಭಾಗ... ...ಉವನೋ ವಸ್ತುತಃ ...ಕೆಂದು ಸಂಕಲ್ಪವು ಮಾಡಲ್ಪಟ್ಟದೆ. ...ನು. ಮಾರನೇ ದಿವಸ ...ಡು, ಅವನಿಗೆ ಏಕಾಂತವಾಗಿ

ಮೈಸೂರು }
22—7—1922 }

# ಟೆಲಿಮಾಕಸ್ಸನ ಚರಿತ್ರೆ.

## ಮೂರನೆಯ ಭಾಗ.

ಮಿತ್ರಮಂಡಲಿಯವರು ಡೇರಾಗಳನ್ನು ಹಾಕಿಕೊಂಡರು. ಸ್ಯಾಲೆಂಟ್ ಪಟ್ಟಣದ ಮೈದಾನದಲ್ಲಿ ಅವರೆಲ್ಲರೂ ತಮ್ಮ ತಮ್ಮ ಬಿಡಾರಗಳಲ್ಲಿ ಭೋಜನಾದಿಗಳನ್ನು ತೀರಿಸಿಕೊಂಡು, ವಿಶ್ರಾಂತಿಯನ್ನು ಹೊಂದುವುದಕ್ಕೆ ಉಪಕ್ರಮಿಸಿದರು. ಇವರೆಲ್ಲರೂ ವಿಶ್ರಾಂತಿ ಸುಖವನ್ನು ಅನುಭವಿಸುತ್ತಿದ್ದಾಗ, ಅಡ್ರಾಸ್ಟಸ್ಸನೂ, ಅವನ ಕಡೆಯವರೂ ಈ ದೇಶವನ್ನು ಆಕ್ರಮಿಸಬೇಕೆಂಬ ಅಭಿನಿವೇಶದಿಂದ ಏಕಾಂತವಾಗಿ ಸ್ಯಾಲೆಂಟ್ ಪಟ್ಟಣವನ್ನು ಪ್ರವೇಶಿಸಿದರು. ಎಲ್ಲೆಲ್ಲಿಯೂ ಡೇರಾಗಳು ಹಾಕಲ್ಪಟ್ಟಿದ್ದವು. ಪಟ್ಟಣವೆಲ್ಲಾ ಅಲಂಕರಿಸಲ್ಪಟ್ಟಿತ್ತು. ಪಟ್ಟಣದ ರಕ್ಷಣೆಗೆ ಬೇಕಾದ ಸೌಲಭ್ಯಗಳೆಲ್ಲಾ ಮಾಡಲ್ಪಟ್ಟಿದ್ದವು. ಇವುಗಳನ್ನೆಲ್ಲಾ ನೋಡಿಕೊಂಡು, ಸಿಬಿರವನ್ನು ಏಕಾಂತವಾಗಿ ಪ್ರವೇಶಿಸಿದರು. ಲಕ್ಷಾಂತರ ಸೈನಿಕರು ಅವರವರ ಬಿಡಾರಗಳಲ್ಲಿ ನಿದ್ರೆಮಾಡುತ್ತಿರುವುದನ್ನು ನೋಡಿದರು. ಆಯುಧಶಾಲೆಗಳನ್ನು ಪ್ರವೇಶಿಸಿದರು. ಶಸ್ತ್ರಾಸ್ತ್ರಗಳು ಮೊದಲೂ ಕೊನೆಯಿಲ್ಲದಂತೆ ಶೇಖರಿಸಲ್ಪಟ್ಟಿದ್ದವು. ಮದ್ದೂ, ಗುಂಡೂ ಮೊದಲಾದವುಗಳು ರಾಸಿಹಾಕಲ್ಪಟ್ಟಿದ್ದ ಮ್ಯಾಗಜೈನುಗಳಿಗೆ (ಮನೆಗಳಿಗೆ) ಬೀಗಗಳು ಹಾಕಿ ಮೊಹರಾಗಿದ್ದವು. ಕಾವಲುಗಾರರು ಬಿಚ್ಚುಕತ್ತಿ ಪಹರೆಯಲ್ಲಿ ಇದ್ದದ್ದನ್ನು ದೂರದಿಂದ ನೋಡಿ, ಅವರ ದೃಷ್ಟಿಪಥಕ್ಕೆ ಬೀಳದಂತೆ ಬೇರೆ ಪ್ರದೇಶಗಳಿಗೆ ಹೊರಟರು. ಸ್ಯಾಲೆಂಟ್ ಪಟ್ಟಣವನ್ನೆಲ್ಲಾ ಕೂಡಿದ ಮಟ್ಟಿಗೂ ಅಜಮಾಯಿಷಿ ಮಾಡಿದರು. ತರುವಾಯ ಹಿಂತಿರುಗಿದರು. ಇಡುಮಿನಿಯಸ್ಸನು ಈ ಮಿತ್ರಮಂಡಲಿಯವರ ಸಹಾಯದಿಂದ ಅಜೇಯನಾಗಬಹುದೆಂದು ಅಡ್ರಾಸ್ಟಸ್ಸನಿಗೆ ಭಯವುಂಟಾಯಿತು. ಹೀಗಿದ್ದಾಗ್ಯೂ ಇಡುಮಿನಿಯಸ್ಸನು ಹೇಗೆ ಅಜೇಯನಾಗಿ ಕಾಣುವನೋ ವಸ್ತುತಃ ಹಾಗಿರುವುದಿಲ್ಲವೆಂದು ಮೆಂಟರನು ತಿಳಿದುಕೊಂಡಿದ್ದನು. ಮಾರನೇ ದಿವಸ ಮೆಂಟರನು ಇಡುಮಿನಿಯಸ್ಸನನ್ನು ಬರಮಾಡಿಕೊಂಡು, ಅವನಿಗೆ ಏಕಾಂತವಾಗಿ ಹೇಳಿದ್ದೇನಂದರೆ:—

"ನಿನಗೆ ಸಂಭವಿಸಿದ್ದ ವಿಪತ್ತುಗಳು ದೈವಯೋಗದಿಂದ ತಪ್ಪಿರುವುವು. ಸ್ಕ್ಯಾರ್ಲೆಟ್ ಪಟ್ಟಣವು ರಕ್ಷಿಸಲ್ಪಟ್ಟಿತು. ನಿನ್ನ ದೇಶವನ್ನು ಅತ್ಯುತ್ತಮ ಸ್ಥಿತಿಗೆ ತರುವುದು ನಿನ್ನ ಕೆಲಸವಾಗಿರುವುದು. ನಿನ್ನ ಪ್ರಜೆಗಳ ಕ್ಷೇಮಕ್ಕೆ ನೀನು ಜವಾಬ್ದಾರನು. ಮೈನಾಸನ ಧರ್ಮಗಳನ್ನು ಅನುಸರಿಸಿದರೆ, ನೀನು ಕೃತಾರ್ಥನಾಗುವಿ. ಅವನ ಕೀರ್ತಿಗೆ ಕಳಂಕ ಉಂಟಾಗತಕ್ಕ ಕೆಲಸಗಳಲ್ಲಿ ನೀನು ಆಸಕ್ತನಾಗಬಾರದು. ಸತ್ಯವನ್ನು ಉದ್ಧರಿಸುವುದು ನಿನಗೆ ಮುಖ್ಯ ಕರ್ತವ್ಯ. ಸ್ತುತಿಪಾಠಕರ ಮರಳು ಮಾತುಗಳಿಗೆ ಬೆರಗಾಗಬೇಡ. ನೀನು ಅಷ್ಟೈಶ್ವರ್ಯ ಸಂಪನ್ನನೆಂಬದಾಗಿಯೂ, ನೀನು ಕುಬೇರನಿಗೂ, ಈಶ್ವರನಿಗೂ ಸಮಾನನೆಂಬದಾಗಿಯೂ ಹೊಗಳತಕ್ಕವರು ಬೇಕಾದ ಹಾಗೆ ಇರುತ್ತಾರೆ. ಅವರ ಸ್ತುತಿಯು ನಿಜವೆಂದು ನಂಬಬೇಡ. ಪ್ರಭುಗಳಿಗೆ ಹಿತಕರವಾದ ಮಾತುಗಳನ್ನು ನಿರ್ದಾಕ್ಷಿಣ್ಯವಾಗಿ ಹೇಳತಕ್ಕವರು ದೊರೆಯುವುದು ಅಪೂರ್ವ. ಹಾಗೆ ಹೇಳಿದರೆ, ಕೇಳತಕ್ಕ ಪ್ರಭುಗಳೂ ಅಪೂರ್ವ. ಮೈನಾಸನ ಧರ್ಮಗಳಲ್ಲಿ ನನಗೆ ಇರುವ ವಿಶ್ವಾಸವು ಅಪರಿಮಿತವಾಗಿರುವುದು. ನೀನು ಅವನ ವಂಶಸ್ಥನಾದದ್ದರಿಂದ, ವಾಸ್ತವಾಂಶವನ್ನು ನಿನಗೆ ತಿಳಿಸುವುದು ನನ್ನ ಕರ್ತವ್ಯ. ನಿನಗೆ ಅನಿಷ್ಟವಾಗಿದ್ದಾಗ್ಯೂ, ವಾಸ್ತವಾಂಶವು ನಿರ್ಭಯವಾಗಿ ಹೇಳಲ್ಪಡಬೇಕು. ಅದನ್ನು ಹೇಳುವುದರಲ್ಲಿಯೂ ಮೃದುವಚನಗಳಿಂದ ಹೇಳಲ್ಪಡುವುದು ಆವಶ್ಯಕ. ಕೆಲವು ಸಂದರ್ಭಗಳಲ್ಲಿ ವಾಸ್ತವಾಂಶವು ಎಂಥಾ ಮೃದುವಚನಗಳಿಂದ ಹೇಳಲ್ಪಟ್ಟಾಗ್ಯೂ, ನಿರಂಕುಶವಾಗಿ ಬದುಕಿದವರಿಗೆ ಅದು ಕ್ಲೇಶಕರವಾಗಿ ಪರಿಣಮಿಸುವುದು. ಆದಾಗ್ಯೂ ನಿನ್ನ ನ್ಯೂನಾತಿರಿಕ್ತಗಳನ್ನು ನಿನಗೆ ತಿಳಿಸುವುದು ಆವಶ್ಯಕವಾಗಿರುವುದು. ಈ ಕೆಲಸವನ್ನು ಮಾಡುವುದಕ್ಕೆ ನನಗೆ ಅಪ್ರತಿಹತವಾದ ಹಕ್ಕಿರುವುದು. ನಿನ್ನಿಂದ ಆಗತಕ್ಕ ಪ್ರಯೋಜನವೇನೂ ನನಗೆ ಇಲ್ಲ. ನಾನು ನಿನ್ನ ಪ್ರಜೆಗಳಲ್ಲಿ ಸೇರಿದವನಲ್ಲ. ನಿನ್ನ ಬಂಧುವೂ ಅಲ್ಲ. ಅಪ್ರಾರ್ಥಿತವಾಗಿ ನಾನು ನಿನ್ನ ದೇಶಕ್ಕೆ ಬಂದಿರುವೆನು. ಮೈನಾಸನ ಸಂತತಿಯವನೆಂದು ನಿನ್ನಲ್ಲಿ ಅನುರಕ್ತನಾಗಿರುವೆನು. ನಿನ್ನ ನ್ಯೂನಾತಿರಿಕ್ತಗಳಿಂದ ಉಂಟಾಗಿದ್ದ ಅನರ್ಥಗಳನ್ನು ನಿವಾರಣೆ ಮಾಡಿರುವೆನು. ಈ ವಿಷಯವನ್ನೆಲ್ಲಾ ನೀನು ತಿಳಿದುಕೊಂಡಿದ್ದೀಯೆ. ಆದುದರಿಂದ ನಿನ್ನ ಕ್ಷೇಮಾರ್ಥವಾದ ಕೆಲವು ಉಪದೇಶಗಳನ್ನು ಮಾಡಿ, ಇಲ್ಲಿಂದ ಪ್ರಯಾಣ ಮಾಡಬೇಕೆಂದು ನಾನು ಉದ್ದೇಶ ಮಾಡಿರುತ್ತೇನೆ. ನಿನ್ನ ನ್ಯೂನಾತಿರಿಕ್ತಗಳನ್ನು ತಿಳಿದುಕೊಳ್ಳುವುದಕ್ಕೆ

ಇಷ್ಟವಿದ್ದರೆ ಹೇಳುತ್ತೇನೆ" ಈ ರೀತಿಯಲ್ಲಿ ಮೆಂಟರನು ಹೇಳಲು, ಇಡುಮಿಾನಿಯಸ್ಸನು ಸ್ವಲ್ಪ ಅಸಮಾಧಾನವನ್ನೂ, ಸ್ವಲ್ಪ ಕಳವಳವನ್ನೂ ಹೊಂದಿ ಹೇಳಿದ್ದೇನಂದರೆ:—

"ಎಲೈ ಮೆಂಟರನೇ ನೀನು ಹೇಳಿದ್ದೆಲ್ಲಾ ನಿಜ. ದೈವಯೋಗದಿಂದ ನನಗೆ ಸನ್ನಿಹಿತವಾಗಿದ್ದ ವಿಪತ್ತುಗಳನ್ನು ನೀನು ತಪ್ಪಿಸಿದೆ. ಇದಕ್ಕಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಅದು ಸ್ವಲ್ಪವಾಗಿಯೇ ಇರುವುದು. ಅದನ್ನು ಹೇಳಿ ಪ್ರಯೋಜನವಿಲ್ಲ. ಪ್ರಭುಪದವಿಯು ಬಹಳ ದೊಡ್ಡದೆಂಬದಾಗಿಯೂ, ಅದು ಕೇವಲ ಅಪೇಕ್ಷಣೀಯವಾದದ್ದೆಂಬದಾಗಿಯೂ ಅಜ್ಞಾನಿಗಳು ತಿಳಿದುಕೊಳ್ಳುವರು. ಪ್ರಭುಗಳ ಕರ್ತವ್ಯವನ್ನೂ, ಜವಾಬ್ದಾರಿಯ ಭಾರವನ್ನೂ ತಿಳಿದುಕೊಂಡವರು ಪ್ರಭುತ್ವವು ಅಪೇಕ್ಷಣೀಯವೆಂದು ಎಂದಿಗೂ ಹೇಳಲಾರರು. ನಾನು ಸರ್ವಜ್ಞನೆಂಬದಾಗಿಯೂ, ನಾನು ದೇವರಿಗೆ ಸಮಾನನೆಂಬದಾಗಿಯೂ, ನನ್ನ ಸೇವೆಯಿಂದ ಸಕಲರೂ ಕೃತಾರ್ಥರಾಗುವರೆಂಬದಾಗಿಯೂ ಸ್ತುತಿಪಾಠಕರು ಹೇಳುವುದನ್ನು ಕೇಳಿ, ನಾನು ನಿಜವೆಂದು ಭಾವಿಸುವುದಕ್ಕೂ ಉಪಕ್ರಮಿಸಿದ್ದೆನು. ಅದು ಮಿಥ್ಯೆಯೆಂದು ಈಗ ಗೊತ್ತಾಗುವುದಕ್ಕೆ ಉಪಕ್ರಮವಾಗಿದೆ. ದುಷ್ಟ ಪಕ್ಷಿಗಳೂ, ಮೃಗಗಳೂ ಹೆಣಗಳನ್ನು ಕಿತ್ತುಕೊಂಡು ತಿನ್ನುವುವು. ಜೀವವುಳ್ಳ ಪ್ರಭುಗಳನ್ನು ಸ್ತುತಿಪಾಠಕರು ಕಿತ್ತುಕೊಂಡು ತಿನ್ನುವರು. ಹಾಗೆ ಮಾಡುವುದು ಮಾತ್ರವೇ ಅಲ್ಲದೆ, ಅವರಿಗೆ ದೇವತ್ವವನ್ನು ಕಲ್ಪಿಸಿ, ಮನುಷ್ಯಾಧಮರಿಗಿಂತಲೂ ಕಡೆಯಾಗಿ ಮಾಡುವರು. ಈ ವಿಷಯವನ್ನು ನಾನು ತಿಳಿದುಕೊಳ್ಳುವ ಸಂಭವವೇ ಬರುತ್ತಿರಲಿಲ್ಲ. ಇದಕ್ಕೋಸ್ಕರ ದೇವರೇ ನಿನ್ನನ್ನು ನನ್ನ ಬಳಿಗೆ ಕಳುಹಿಸಿರುವನು. ನನ್ನ ದೋಷಗಳು ನನಗೆ ಗೊತ್ತಾಗುವುದಿಲ್ಲ. ನಿರ್ಭಯವಾಗಿ ಅವುಗಳನ್ನು ತಿಳಿಸಿ, ನನ್ನನ್ನು ಕೃತಾರ್ಥನನ್ನಾಗಿ ಮಾಡು. ನೀನು ನನ್ನ ದೇಶಕ್ಕೆ ಬಂದು, ನನ್ನನ್ನೂ, ನನ್ನ ದೇಶವನ್ನೂ ರಕ್ಷಿಸಿದೆ. ನಿನ್ನ ಆಜ್ಞೆಗೆ ವಿರೋಧವಾಗಿ ನಡೆದರೆ, ನನಗೆ ಎಂದಿಗೂ ಸದ್ಗತಿಯಾಗುವುದಿಲ್ಲ. ನಿರ್ಭಯವಾಗಿಯೂ, ನಿರ್ದಾಕ್ಷಿಣ್ಯವಾಗಿಯೂ ನನ್ನಲ್ಲಿ ಇರತಕ್ಕ ನ್ಯೂನಾತಿರಿಕ್ತಗಳನ್ನು ನನಗೆ ತಿಳಿಸಿ, ನನ್ನನ್ನು ಉದ್ಧರಿಸಬೇಕು" ಎಂದು ಹೇಳಿ, ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಈ ಮಾತನ್ನು ಕೇಳಿ ಮೆಂಟರನು ಹೇಳಿದ್ದೇನಂದರೆ:—

"ಸ್ತುತಿಪಾಠಕರು ನಿನ್ನನ್ನು ವಂಚಿಸಿರುವರು. ಈ ವಂಚನೆಗೆ ಅವರು ಕಾರಣಭೂತರಲ್ಲ. ಅದಕ್ಕೆ ನೀನೇ ಕಾರಣಭೂತನು. ಪ್ರಭುಗಳು ಸತ್ಯದ

ಲ್ಲಿಯೂ, ಧರ್ಮದಲ್ಲಿಯೂ ಆಸಕ್ತರಾಗಿದ್ದರೆ, ಪ್ರಜೆಗಳು ಸತ್ಯವಾಗಿ ನಡೆಯು ವರು. ಧರ್ಮಿಷ್ಟರಾಗಿರುವರು. ಸತ್ಯವನ್ನೂ, ಧರ್ಮವನ್ನೂ ಯಾರು ಬಿಟ್ಟು ನಡೆಯುವರೋ ಅವರಲ್ಲಿ ಅನುರಾಗವನ್ನು ತೋರಿಸಿದರೆ, ಅಸತ್ಯದಿಂದಲೂ, ಅಧ ರ್ಮದಿಂದಲೂ ಪ್ರಭುಗಳ ಮುಖೋಲ್ಲಾಸ ಮಾಡಿ, ಪ್ರಯೋಜನವನ್ನು ಹೊಂದ ಬೇಕೆಂದು ಜನಗಳು ಪ್ರಯತ್ನ ಮಾಡುವುದೇನೂ ಆಶ್ಚರ್ಯವಲ್ಲ. ಸತ್ಯವಂತರಿಗೆ ನೀನು ಪ್ರೋತ್ಸಾಹ ಮಾಡಿರುತ್ತೀಯೆ. ಅಸತ್ಯವಂತರನ್ನು ನೀನು ದಂಡಿಸಿರು ತ್ತೀಯೆ. ಕೋಪತಾಪಗಳಿಗೆ ನೀನು ಅಧೀನನಾದಾಗ, ಶಾಂತಿಯುಳ್ಳವನಾಗಿರ ಬೇಕೆಂದು ಹೇಳುವುದಕ್ಕೆ ನೀನು ಅವಕಾಶವನ್ನು ಕೊಟ್ಟಿರುತ್ತೀಯೆ. ಅಧರ್ಮ ದಿಂದ ನೀನು ನಡೆದಾಗ, ಇದು ಅಧರ್ಮವೆಂದು ಯಾರಾದರೂ ಹೇಳಿದರೆ, ಅವ ರನ್ನು ಸತ್ಕರಿಸಿರುತ್ತೀಯೆ. ಪ್ರತ್ಯಕ್ಷವಾಗಿ ಸ್ತುತಿಯನ್ನು ಮಾಡತಕ್ಕ ಜನಗ ಳನ್ನು ದಂಡಿಸಿರುತ್ತೀಯೆ. ಅವರು ನಂಬಿಕೆಗೆ ಅರ್ಹರಲ್ಲವೆಂದು ನೀನು ಹೇಳಿರು ತ್ತೀಯೆ. ದೇವತ್ವವನ್ನೂ ಕೂಡ ನಿನಗೆ ಆರೋಪಿಸಿದ ಜನಗಳನ್ನು ನೀನು ಗಡೀ ಪಾರು ಮಾಡಿರುತ್ತೀಯೆ. ಯಥಾರ್ಥವನ್ನು ಹೇಳತಕ್ಕವರಿಗೆ ಬಹುಮಾನವನ್ನು ಮಾಡಿರುತ್ತೀಯೆ. ಇವೆಲ್ಲಾ ನ್ಯಾಯವಾದ ಕೆಲಸಗಳು. ಆದರೆ ಪ್ರಜೆ ಗಳಿಂದ ಬಂದ ದ್ರವ್ಯವನ್ನು ಮನಸ್ವಿ ಖರ್ಚುಮಾಡಿ, ಅರಮನೆಗಳನ್ನೂ, ಪ್ರಾಸಾದಗಳನ್ನೂ, ಉದ್ಯಾನ ವನಗಳನ್ನೂ ಮಾಡಿರುತ್ತೀಯೆ. ನಿನ್ನ ದೇಶವು ಸ್ವರ್ಗವನ್ನು ಹೋಲುವಂತೆ ಮಾಡಿರುತ್ತೀಯೆ. ಇದನ್ನು ನೋಡಿ, ನಿನ್ನನ್ನು ಸ್ತುತಿಪಾಠಕರು ಹೊಗಳುತ್ತಲಿದಾರೆ. ಹೀಗೆ ಮಾಡುವುದಕ್ಕೆ ನೀನು ಉಪಯೋಗಿಸಿದ ದ್ರವ್ಯವು ಪ್ರಜೆಗಳಿಂದ ವಸೂಲ್ಮಾಡಲ್ಪಟ್ಟದ್ದಲ್ಲವೇ ? ಈ ದ್ರವ್ಯ ವನ್ನು ದುಂದುಗಾರಿಕೆಯಿಂದ ಈ ರೀತಿಯಲ್ಲಿ ವ್ಯಯಮಾಡಿದ್ದು ನ್ಯಾಯವಾ ದದ್ದೇ ? ನಿನ್ನ ಪ್ರಜೆಗಳೆಲ್ಲಾ ಅನ್ನವಸ್ತ್ರಗಳನ್ನು ಹೊಂದಿ ನೆಮ್ಮದಿಯಾಗಿರುವ ಸ್ಥಿತಿಯಲ್ಲಿರುತ್ತಾರೆಯೇ ? ಉಪಪನ್ನರು 10 ಮಂದಿ ಇದ್ದರೆ, ಅನುಪಪನ್ನರು 10 ಸಾವಿರ ಮಂದಿ ಇರುವುದಿಲ್ಲವೇ ? ದೇಶದ ಹುಟ್ಟುವಳಿಯು ಪ್ರಥಮತಃ ಪ್ರಜೆಗಳು ಹಿಟ್ಟೂ ಬಟ್ಟೆಯನ್ನಾದರೂ ಹೊಂದುವಂತೆ ಮಾಡುವುದಕ್ಕೆ ವಿನಿಯೋಗಿ ಸಲ್ಪಡಬೇಕಲ್ಲವೇ ? ಪ್ರಜೆಗಳು ಅನ್ನಕ್ಕಿಲ್ಲದೆ ತಾಪತ್ರಯ ಪಡುತ್ತಲಿರುವಾಗ, ಈ ಅರಮನೆಗಳಿಗೂ, ಈ ಪ್ರಾಸಾದಗಳಿಗೂ, ಈ ಅಲಂಕಾರಗಳಿಗೂ ಜನಗಳಿಂದ ಕೊಡಲ್ಪಟ್ಟ ದ್ರವ್ಯವನ್ನು ಮನಸ್ವಿ ಖರ್ಚುಮಾಡಿದರೆ, ಪ್ರಜೆಗಳಲ್ಲಿ ನಿನಗೆ ಅಕ್ಕತ್ರಿ

ಮವಾದ ಅಭಿಮಾನವು ಇರುವುದೆಂದು ಪೂರ್ವಾಪರಜ್ಞರಾದವರ್ಯಾರಾದರೂ ತಿಳಿದು ಕೊಳ್ಳುವರೇ ? ಪ್ರಜೆಗಳಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯು ನಿನಗೆ ಇರುವುದೆಂದು ಸ್ತುತಿಪಾಠಕರು ಹೇಳಿದರೆ, ಅದನ್ನು ಯಾರಾದರೂ ನಂಬುವರೇ ? ನಿನ್ನ ಪ್ರಜೆಗಳಲ್ಲಿ ಪ್ರತಿ ಒಬ್ಬನೂ ಉಪಪನ್ನನಾದರೆ, ಅದು ನಿನ್ನ ಉಪಪನ್ನತೆಯಲ್ಲವೇ ? ಅವನು ದರಿದ್ರನಾದರೆ, ಅದು ನಿನ್ನ ದಾರಿದ್ರ್ಯವಲ್ಲವೇ ? ಅವನಿಗೆ ಹಿಟ್ಟು ಬಟ್ಟೆಗೆ ಅವಕಾಶವಿಲ್ಲದೆ ಹೋದರೆ ನಿನಗೆ ನಷ್ಟವಲ್ಲವೇ ? ಇಂಥಾ ಅನುಪಯುಕ್ತವಾದ ಬಾಬಿಗೆ ವಿನಿಯೋಗಿಸಿದ ದ್ರವ್ಯವನ್ನು ಪ್ರಜೆಗಳಿಗೆ ಬಂಡವಾಳವಾಗಿ ಒದಗಿಸಿ, ಅವರು ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದವುಗಳಲ್ಲಿ ಅವುಗಳನ್ನು ವಿನಿಯೋಗಿಸಿ, ದೇಶದ ಸಂಪತ್ತನ್ನು ಹೆಚ್ಚಿಸುವಂತೆ ಮಾಡಿದರೆ, ಸದರಿ ದ್ರವ್ಯಕ್ಕೆ ಪ್ರತಿಫಲಗಳು ವಿಶೇಷವಾಗಿ ಉಂಟಾಗುವುದಿಲ್ಲವೇ ? ಸಂಪತ್ತು ವಿಶೇಷವಾಗಿ ಹೆಚ್ಚುವುದಿಲ್ಲವೇ ? ನಿನ್ನ ಅರಮನೆಗೂ, ಪ್ರಾಸಾದಗಳಿಗೂ, ಉಪವನಗಳಿಗೂ, ಅಲಂಕಾರಗಳಿಗೂ ವಿನಿಯೋಗಿಸಲ್ಪಟ್ಟ ದ್ರವ್ಯಕ್ಕೆ ಅನುರೂಪವಾದ ಫಲವೇನಾದರೂ ಇರುವುದೇ ? ಈ ರೀತಿಯಲ್ಲಿ ವಿನಿಯೋಗಿಸಲ್ಪಟ್ಟ ದ್ರವ್ಯವು ನಿಪಾತಕ್ಕೆ ಹೇತುವಾದದ್ದಲ್ಲವೇ ? ಪ್ರಜೆಗಳ ಸಂಪತ್ತೇ ನಿನ್ನ ಸಂಪತ್ತೆಂಬದಾಗಿಯೂ, ಪ್ರಜೆಗಳ ಕಷ್ಟವೇ ನಿನ್ನ ಕಷ್ಟವೆಂಬದಾಗಿಯೂ ಭಾವಿಸಿ, ಅದರಂತೆ ಸರ್ಕಾರದ ಹುಟ್ಟುವಳಿಯನ್ನು ವಿನಿಯೋಗಿಸುವುದು ನಿನ್ನ ಕರ್ತವ್ಯವಲ್ಲವೇ ? ಮನಸ್ಸಿಗೆ ಖರ್ಚುಮಾಡುವಂತೆ ನಿನಗೆ ಪ್ರೇರಣೆಯನ್ನು ಮಾಡಿ, ಅದರಲ್ಲಿ ಭಾಗಿಗಳಾಗತಕ್ಕವರು ನಿನ್ನ ಹಿತಚಿಂತಕರೇ ? ಅವರು ದ್ರೋಹಿಗಳಲ್ಲವೇ ? ಈ ಭಾಗದಲ್ಲಿ ಸಾವಕಾಶವಿಲ್ಲದೆ ತಿದ್ದುಪಾಟುಗಳನ್ನು ಮಾಡಿಕೊ. ಹಾಗೆ ಮಾಡುವುದರಲ್ಲಿ ನೀನು ಅಲಸನಾದರೆ, ನಿನ್ನ ಆಲಸ್ಯವು ವಿಷವಾಗಿ ಪರಿಣಮಿಸುವುದು. ಪ್ರತಿಫಲವನ್ನು ಕೊಡತಕ್ಕ ಪಬ್ಲಿಕ್ ವರ್ಕ್ಸ್ ಕೆಲಸಗಳನ್ನು ಬೇಕಾದಷ್ಟು ಮಾಡು. ಭೋಗ್ಯ ವಸ್ತುಗಳ ನಿರ್ಮಾಣಕ್ಕೆ ಸಾಧಕವಾದ ಕೆಲಸಗಳಿಗೆ ದ್ರವ್ಯವನ್ನು ಒದಗಿಸು. ನಿನ್ನ ಸಕಲ ಸಂಪತ್ತನ್ನೂ ಇದಕ್ಕೆ ವಿನಿಯೋಗಿಸು. ಉದ್ಯೋಗವು ಪುರುಷಲಕ್ಷಣ. ನಿನ್ನ ಪ್ರಜೆಗಳೆಲ್ಲರೂ ಉದ್ಯೋಗಿಗಳಾಗುವಂತೆ ನೀನು ಮೇಲ್ಪಂಕ್ತಿಯನ್ನು ಹಾಕು. ಅನ್ನವಸ್ತ್ರಗಳಿಗೆ ಇಲ್ಲದೆ, ನಿನ್ನ ಪ್ರಜೆಗಳಲ್ಲಿ ಯಾರೂ ಇರದಂತೆ ಮಾಡು. ಎಲ್ಲಾ ಸ್ತ್ರೀಪುರುಷರೂ ಅನುರೂಪರಾದ ಪತಿಪತ್ನಿಯರನ್ನು ಹೊಂದಿ, ಅವ್ಯಭಿಚಾರಿಗಳಾಗಿರುವಂತೆ ಏರ್ಪಾಡು ಮಾಡು. ಸಕಲ ಪುರುಷರೂ ಗೃಹಸ್ಥರಾಗಿ,

ಶ್ರೀರಾಮನ ಮೇಲ್ಪಂಗ್ತಿಯನ್ನು ಅನುಸರಿಸುವಂತೆ ಮಾಡು. ಸಕಲ ಸ್ತ್ರೀಯರೂ ಸಾಧ್ವೀಗಳಾಗಿ, ಸಾವಿತ್ರಿಯೂ, ಸೀತೆಯೂ ಹಾಕಿರತಕ್ಕ ಮೇಲ್ಪಂಗ್ತಿಯನ್ನು ಅನುಸರಿಸಿ, ಪತಿವ್ರತಾಶಿರೋಮಣಿಗಳಾಗಿರುವಂತೆ ಮಾಡು. ಪ್ರಜೆಗಳ ಕ್ಷೇಮಾರ್ಥವಾಗಿ ನೀನು ಪ್ರಭುವಾಗಿರುವಿಯೆಂದು ತಿಳಿದುಕೊ. ಅಪ್ರತಿಹತವಾದ ಅಧಿಕಾರವೂ, ಶಕ್ತಿಯೂ ಪ್ರಜೆಗಳ ರಕ್ಷಣಾರ್ಥವಾಗಿ ಜಗದೀಶ್ವರನಿಂದ ನಿನಗೆ ವಹಿಸಲ್ಪಟ್ಟಿರುವುದೆಂದು ಭಾವಿಸು. ಪ್ರಜೆಗಳ ಸುಖವು ನಿನ್ನ ಸುಖವೆಂದು ಭಾವಿಸು. ಪ್ರಜೆಗಳ ಕಷ್ಟವು ನಿನ್ನ ಕಷ್ಟವೆಂದು ಭಾವಿಸು. ನಿನ್ನ ಪ್ರಜೆಗಳಲ್ಲಿ ಎಲ್ಲರೂ ವಿದ್ಯಾವಂತರಾಗಿಯೂ, ಧರ್ಮಿಷ್ಟರಾಗಿಯೂ, ಉದ್ಯೋಗಿಗಳಾಗಿಯೂ ಇರುವಂತೆ ಮಾಡು. ಸಂಪದಭಿವೃದ್ಧಿಗೋಸ್ಕರ ವರ್ಣಧರ್ಮಗಳೂ, ಆಶ್ರಮ ಧರ್ಮಗಳೂ ಹೇಗೆ ಉಂಟಾಗಿರುವುವೋ ಅದನ್ನು ತಿಳಿದುಕೊ. ಈ ಧರ್ಮಗಳನ್ನೆಲ್ಲಾ ಮನಃಪೂರ್ವಕವಾಗಿ ರಕ್ಷಿಸು. ದುಷ್ಟನಿಗ್ರಹ, ಶಿಷ್ಟಪರಿಪಾಲನೆಯು ಹೇಗೆ ನಿನಗೆ ಮುಖ್ಯ ಕರ್ತವ್ಯವೋ ಅದನ್ನು ತಿಳಿದುಕೊ. ಧರ್ಮಗಳನ್ನು ಅತಿಕ್ರಮಿಸಿ ನಡೆದರೆ, ಇಹಪರಗಳೆರಡೂ ಹೇಗೆ ತಪ್ಪುವುವೋ ಅದನ್ನು ಗೊತ್ತುಮಾಡಿಕೊ. ಅಲೆಕ್ಸಾಂಡರನೇ ಮೊದಲಾದ ಪ್ರಭುಗಳು ಪ್ರಪಂಚವನ್ನೆಲ್ಲಾ ಜಯಿಸಿದವರೆಂದು ಸಾರಾಸಾರವಿಹೀನರಾದವರಿಂದ ಹೊಗಳಲ್ಪಡುತ್ತಲಿರುವರು. ಅವರು ದೊಡ್ಡವರೆಂದು ತಿಳಿದುಕೊಳ್ಳಬೇಡ. ಅವರ ದೌರಾತ್ಮ್ಯದಿಂದ ಎಷ್ಟು ರಾಜ್ಯಗಳು ಹಾಳು ಮಾಡಲ್ಪಟ್ಟವೋ, ಎಷ್ಟು ಜನಗಳು ಯುದ್ಧದಲ್ಲಿ ಮಡಿದರೋ, ಎಷ್ಟು ಜನಗಳು ವಿತಂತುಗಳಾದರೋ, ಎಷ್ಟು ಜನಗಳು ಅನಾಥರಾದರೋ, ಸಂಪದಭಿವೃದ್ಧಿ ಕೆಲಸಗಳು ಎಷ್ಟುಮಟ್ಟಿಗೆ ನಿಂತುಹೋದವೋ, ಭೋಗ್ಯವಸ್ತುಗಳ ಬೆಲೆಯು ಎಷ್ಟುಮಟ್ಟಿಗೆ ಹೆಚ್ಚಿತೋ, ಅನ್ನವಸ್ತ್ರಗಳಿಗಿಲ್ಲದೆ ಎಷ್ಟು ಜನಗಳು ಕಷ್ಟಪಡುವ ಸ್ಥಿತಿಯು ಬಂದಿತೋ, ಅನೇಕ ಮಹಾಜನಗಳ ಗೋಳಿಗೆ ಇವರು ಹೇಗೆ ಕಾರಣಭೂತರಾದರೋ ಇವುಗಳನ್ನೆಲ್ಲಾ ಪರ್ಯಾಲೋಚಿಸು. ಇಂಥಾ ದುರಾತ್ಮರಿಗೆ ಇಹಪರಗಳೆರಡೂ ಇರುವುದಿಲ್ಲವೆಂದು ಹಿರಿಯರು ಹೇಳುತ್ತಾರೆ. ಈ ಜನಗಳು ಲೋಕವನ್ನೆಲ್ಲಾ ನಾಶಮಾಡುವ ಪ್ಲೇಗ್, ಕಾಲರಾ, ಇನ್‌ಫ್ಲುಯೆನ್‌ಜಾ ಮೊದಲಾದ ಮಹಾ ರೋಗಗಳಿಗೆ ಶಾಸ್ತ್ರಜ್ಞರು ಹೋಲಿಸುತ್ತಾರೆ. ಇದು ಸಾಧುವೇ ಅಥವಾ ಅಸಾಧುವೇ ಎಂಬುವುದನ್ನು ನೀನು ಪರಿಶೀಲಿಸಿ ತಿಳಿದುಕೊ. ಹಾಗೆ ತಿಳಿದುಕೊಂಡು, ಧರ್ಮದಿಂದ ನಡೆಯುವುದೇ ಅದ್ವೈತಸಿದ್ಧಿಯೆಂದು ಮಹಾತ್ಮರು

ಹೇಳಿರುವರು. ಈ ವಿಷಯಕ್ಕೆ ನಿನ್ನ ಗಮನವು ಕೊಡಲ್ಪಡಲಿ. ಮನೋವಾಕ್ಕರ್ಮಗಳಲ್ಲಿಯೂ ಪರಿಶುದ್ಧನಾಗಿರು. ಪ್ಯೆನಾಸನ ಧರ್ಮಗಳನ್ನು ನೀನು ಅನುಷ್ಠಿಸದಿದ್ದರೆ, ಅವನ ವಂಶಕ್ಕೆ ನೀನು ಕಳಂಕಪ್ರಾಯನಾಗುವೆ. ಅದರಿಂದ ನಿನಗೆ ಅಧೋಗತಿಯು ಬರುವುದು. ಇಂಥಾ ಅಧೋಗತಿಗೆ ನೀನು ಬರದಂತೆ ದೇವರು ನಿನ್ನನ್ನು ರಕ್ಷಿಸಲಿ.'' ಈ ರೀತಿಯಲ್ಲಿ ಇಡುವಿಾಸಿಯಸ್ಸನಿಗೆ ಮೆಂಟರನು ಹಿತೋಪದೇಶವನ್ನು ಮಾಡಿದನು. ಈ ಮಾತುಗಳನ್ನು ಕೇಳಿ, ಇಡುವಿಾಸಿಯಸ್ಸನು ಹೇಳಿದ್ದೇನಂದರೆ :—

“ಎಲೈ ಮೆಂಟರನೇ, ನನ್ನ ಪುಣ್ಯಪರಿಪಾಕದಿಂದ ನೀನು ನನ್ನ ದೇಶಕ್ಕೆ ಬಂದಿರುವಿ. ನನ್ನ ದೇಶವನ್ನೂ, ನನ್ನ ಪ್ರಾಣವನ್ನೂ ನೀನು ರಕ್ಷಿಸಿರುವಿ. ಈ ಎರಡೂ ಮಹತ್ಕಾರ್ಯಗಳೆಂದು ನಾನು ಭಾವಿಸಿಲ್ಲ. ಅನೇಕರು ಪ್ರಭುಗಳಾಗಿ ಭೂಪತಿಗಳೆನಿಸಿಕೊಂಡರು. ಭೂಮಿಗೆ ಕಳಂಕಪ್ರಾಯರಾಗಿ ಇದ್ದು, ದೇಹವನ್ನು ಬಿಟ್ಟಿರುವರು. ಹೊನ್ನು, ಹೆಣ್ಣು, ಮಣ್ಣುಗಳಿಗೆ ಆಶೆಪಟ್ಟು, ಸದ್ಗತಿಯನ್ನು ಕಳೆದುಕೊಂಡಿರುವರು. ಅಂಥಾ ಭೂಪತಿತ್ವದಿಂದ ಪ್ರಯೋಜನವೇನು ? ಅನೇಕ ಪ್ರಭುಗಳು ಪೂರ್ವಾಪರಜ್ಞಾನವಿಲ್ಲದ ದುರ್ಮಂತ್ರಿಗಳನ್ನು ಸೇರಿಸಿಕೊಂಡು, ಅವರ ಸಲಹೆಗಳಂತೆ ನಡೆದು, ಸತ್ಯಕ್ಕೂ, ಧರ್ಮಕ್ಕೂ ವನವಾಸವಾಗುವಂತೆ ಮಾಡಿ, ಅಧೋಗತಿಯನ್ನು ಹೊಂದಿರುವರು. ಅಂಥಾ ಭೂಪತಿಗಳ ಜನ್ಮವು ಜನ್ಮವೇ ? ಗ್ರಾಮಸಿಂಹಗಳ ಜನ್ಮವೂ ಕೂಡ ಇವರ ಜನ್ಮಕ್ಕಿಂತಲೂ ಉತ್ತಮವೆಂದು ನನಗೆ ತೋರುತ್ತದೆ. ನನ್ನ ಪ್ರಾಣವನ್ನು ನೀನು ರಕ್ಷಿಸಿರುವಿ. ನೀನು ಈಗ ಮಾಡಿದ ಹಿತೋಪದೇಶವು ಮಾಡಲ್ಪಡದೆ ಇದ್ದಿದ್ದರೆ, ಆ ಪ್ರಾಣದಿಂದ ಪ್ರಯೋಜನವೇನಾಗುತ್ತಿತ್ತು ? ದುರ್ಮಾರ್ಗಪ್ರವರ್ತಕರು ಎಷ್ಟು ದಿವಸ ಬದುಕಿದರೂ, ಅಷ್ಟೂ ನರಕಕ್ಕೆ ಗುರಿಯಾಗುವರು. ಅಷ್ಟಮದಗಳಿಂದ ಪ್ರತಿನಿವಿಷ್ಠರಾದವರು ಪಾಪರಾಶಿಗಳನ್ನು ಹಾಕಿಕೊಳ್ಳುತ್ತಾರೆ. ಅವುಗಳ ಫಲವನ್ನು ಅವರು ಅನುಭವಿಸಲೇ ಅನುಭವಿಸಬೇಕು. ಇದು ಎಂದಿಗೂ ತಪ್ಪುವುದಿಲ್ಲ. ಅತ್ಯುತ್ಕಟವಾದ ಪುಣ್ಯಪಾಪಗಳ ಫಲವು ಈ ಜನ್ಮದಲ್ಲಿಯೇ ಅನುಭವಿಸಲ್ಪಡಬೇಕಾಗುತ್ತದೆಂದು ಪ್ರಾಜ್ಞರು ಹೇಳುತ್ತಾರೆ. ಸಾಮಾನ್ಯ ಪಾಪಗಳ ಫಲವು ಈ ಜನ್ಮದಲ್ಲಿಯೂ, ಮುಂದಿನ ಜನ್ಮದಲ್ಲಿಯೂ ಅನುಭವಿಸಬೇಕಾಗುತ್ತದೆ. ನಾನು ಬಹಳ ಪಾಪಿಷ್ಠನು. ಪಾಪಸಂಭವನು. ಪಾಪಾತ್ಮನು. ಗೊತ್ತಿಲ್ಲದ ಹಾಗೆ ಪಾಪ

ಕರ್ಮವನ್ನು ಮಾಡಿರುವೆನು. ನೀನು ನಿರ್ದಾಕ್ಷಿಣ್ಯದಿಂದ ಮಾಡಿದ ಹಿತೋಪದೇಶದಿಂದ ಈ ಅತ್ಯಂತ ದುಷ್ಟವಾದ ನನ್ನ ನ್ಯೂನತೆಯು ನನ್ನ ಸ್ಮೃತಿಪಥಕ್ಕೆ ಬಂದಿತು. ನನ್ನ ಭಾಗಕ್ಕೆ ನೀನೇ ಸಾಕ್ಷಾತ್ ಪರಬ್ರಹ್ಮನಾಗಿರುವಿ. ಶ್ರೀರಾಮನಿಗೆ ವಸಿಷ್ಠನು ಲೋಕೋತ್ತರವಾದ ಹಿತೋಪದೇಶವನ್ನು ಮಾಡಿದನೆಂದು ಪೂರ್ವ ದೇಶದವರು ಹೇಳಿಕೊಳ್ಳುತ್ತಾರೆ. ನನ್ನ ಭಾಗಕ್ಕೆ ನೀನು ಪಾಶ್ಚಾತ್ಯ ವಸಿಷ್ಠನಾಗಿ ಪರಿಣಮಿಸಿರುವಿ. ಇದಕ್ಕಾಗಿ ನಾನು ಕೇವಲ ಕೃತಜ್ಞನಾಗಿರುವೆನು. ಪ್ರಭುಗಳಿಗೆ ಪ್ರಥಮ ಕರ್ತವ್ಯವು ಪ್ರಜೆಗಳಲ್ಲಿ ಪ್ರತಿ ಒಬ್ಬರನ್ನೂ ಪುತ್ರನಿರ್ವಿಶೇಷವಾಗಿ ರಕ್ಷಿಸುವುದೆಂದು ಈಗ ನನಗೆ ಸ್ಪಷ್ಟವಾಗಿ ಗೊತ್ತಾಯಿತು. ರಾಜರಂತೆ ಪ್ರಜೆಗಳೂ, ತಂದೆತಾಯಿಗಳಂತೆ ಮಕ್ಕಳೂ, ಗುರುಗಳಂತೆ ಶಿಷ್ಯರೂ ಆಗುವರು. ಸತ್ಸಹವಾಸದಿಂದ ಸದ್ಗತಿಯು ಉಂಟಾಗುವುದು. ದುಸ್ಸಹವಾಸದಿಂದ ದುರ್ಗತಿಯು ಉಂಟಾಗುವುದು. ಈ ವಿಷಯಗಳೆಲ್ಲಾ ನಿನ್ನ ಹಿತೋಪದೇಶದಿಂದ ಗೊತ್ತಾಯಿತು. ಪ್ರಜೆಗಳು ಕಷ್ಟಪಡುತ್ತಿದ್ದರೆ, ಆ ಕಷ್ಟದಲ್ಲಿ ಪ್ರಭುಗಳೂ ಭಾಗಿಗಳಾಗಬೇಕು. ಅವರು ಸುಖಪಡುತ್ತಿದ್ದರೆ, ಆ ಸುಖದಲ್ಲಿ ಪ್ರಭುಗಳು ಭಾಗಿಗಳಾಗಬಹುದು ಎಂಬ ಲೋಕೋತ್ತರವಾದ ಅದ್ವೈತಸಿದ್ಧಿಯೂ ಕೂಡ ನನಗೆ ಗೊತ್ತಾಯಿತು. ವ್ಯಾಸನ ಮರಿಮಗನಾದಾಗ್ಯೂ, ನಾನು ಅವಿದ್ಯೆಯೆಂಬ ಸಾಗರದಲ್ಲಿ ಮುಳುಗಿತೇಲುತ್ತಿದ್ದೆನು. ಅಭಿನವ ವ್ಯಾಸನಾಗಿ ನೀನು ಅವತರಿಸಿ, ನನ್ನ ಅಜ್ಞಾನಾಂಧಕಾರವನ್ನು ಪರಿಹರಿಸಿರುವಿ. ಇದಕ್ಕಾಗಿ ನಾನು ತುಂಬಾ ಕೃತಜ್ಞನಾಗಿದೇನೆ. ಯೂಲಿಸಸ್ಸನ ಪುಣ್ಯೋದಯದಿಂದಲೂ, ಪೆನಿಲೋಪಳ ಪುಣ್ಯೋದಯದಿಂದಲೂ, ಟೆಲಿಮಾಕಸ್ಸನ ಪುಣ್ಯೋದಯದಿಂದಲೂ ನೀನು ಅವರ ಹಿತಚಿಂತಕನಾಗಿಯೂ, ಟೆಲಿಮಾಕಸ್ಸನಿಗೆ ಹಿತೋಪದೇಶಕನಾಗಿಯೂ ದೊರೆತಿರುವಿ. ನನ್ನ ಭಾಗ್ಯಪರಿಪಾಕದಿಂದ ಅಪ್ರಾರ್ಥಿತವಾಗಿ ನನ್ನ ದೇಶಕ್ಕೆ ಬಂದಿರುವಿ. ನೀನೇ ನನ್ನ ಮನೆದೇವರೆಂದು ನಾನು ಭಾವಿಸಿರುವೆನು. ನನ್ನಲ್ಲಿ ಅನೇಕ ತಪ್ಪುಗಳಿವೆ. ಮದಾಂಧತೆಯು ನನ್ನನ್ನು ಕುರುಡನನ್ನಾಗಿ ಮಾಡಿ ಇದೆ. ನೀನು ನನ್ನ ದೇಶವನ್ನು ಬಿಟ್ಟುಹೋಗುವುದಕ್ಕೆ ಮುಂಚೆ, ನನ್ನಲ್ಲಿರತಕ್ಕ ನ್ಯೂನಾತಿರಿಕ್ತಗಳನ್ನೆಲ್ಲಾ ನನಗೆ ತಿಳಿಸಿ, ಮನೋವಾಕ್ಕರ್ಮಗಳಲ್ಲಿಯೂ ಯಾವ ರೀತಿ ನಡೆದುಕೊಂಡರೆ, ವ್ಯಾಸನ ಕುಲಕ್ಕೆ ದೀಪದಂತೆಯಾದರೂ ಪರಿಣಮಿಸುವೆನೋ ಅದನ್ನು ನನಗೆ ಉಪದೇಶಿಸು, ನನ್ನನ್ನು ಕೃತಾರ್ಥನನ್ನಾಗಿ ಮಾಡಿ, ಪ್ರಯಾಣವನ್ನು

ಬೆಳೆಸಬೇಕು" ಈ ರೀತಿಯಲ್ಲಿ ಇಡುಮಿನಿಯಸ್ಸನು ಮೆಂಟರನನ್ನು ಪ್ರಾರ್ಥಿಸಿದನು. ಅದನ್ನು ಕೇಳಿ ಮೆಂಟರನು ಹೇಳಿದ್ದೇನೆಂದರೆ:—

"ಬೀಜವೃಕ್ಷ ನ್ಯಾಯವು ನಿನಗೆ ತಿಳಿದೇ ಇರುವುದು. ಮೈನಾಸನ ವಂಶದಲ್ಲಿ ಹುಟ್ಟಿದವರು ದುರಾತ್ಮರಾಗುವುದು ಅಸಂಭವ. ನಿನಗೆ ಉಂಟಾಗಿರತಕ್ಕ ಪಶ್ಚಾತ್ತಾಪನೇ ಇದಕ್ಕೆ ದೃಷ್ಟಾಂತವಾಗಿರುವುದು. ನಿರಂಕುಶಪ್ರವರ್ತಕರಾದ ಪ್ರಭುಗಳು ಪ್ರಪಂಚಕ್ಕೆ ಕಳಂಕಭೂತರಾಗಿ ಎಷ್ಟೋ ಜನಗಳಿರುವರು. ತಪ್ಪನ್ನು ತೋರಿಸಿದ ಗುರುವನ್ನೂ ಕೂಡ ಅಲೆಗ್ಜಾಂಡರನು ವಧಿಸಿದನು. ನಾನು ಪರಕೀಯನಾಗಿದ್ದಾಗ್ಯೂ, ನಿರ್ದಾಕ್ಷಿಣ್ಯವಾಗಿ ನಿನ್ನ ತಪ್ಪುಗಳನ್ನು ಉದ್ಘಾಟಿಸಿದೆನು. ಇದಕ್ಕೆ ನಿನಗೆ ರೋಷವು ಬರಲಿಲ್ಲ. ನಿನ್ನ ತಪ್ಪುಗಳನ್ನು ನೀನು ಒಪ್ಪಿಕೊಂಡಿರುತ್ತೀಯೆ. ಸತ್ಪುರುಷನಾಗಬೇಕೆಂದು ನಿಷ್ಕರ್ಷಿಸಿರುತ್ತೀಯೆ. ಮೈನಾಸನ ಕುಲಕ್ಕೆ ಕಳಂಕಪ್ರಾಯನಾಗಕೂಡದೆಂದು ಭಾವಿಸಿರುತ್ತೀಯೆ. ಮೈನಾಸನ ಗುಣಾತಿಶಯಗಳು ಪರಂಪರೆಯಾಗಿ ನಿನಗೆ ಪ್ರಾಪ್ತವಾಗಿರುವುದೆಂದು ಇದರಿಂದಲೇ ಗೊತ್ತಾಗುತ್ತದೆ. ಇದಕ್ಕಾಗಿ ನಾನು ತುಂಬಾ ಸಂತೋಷಿಸುತ್ತೇನೆ. ನೀನು ಕೃತಕೃತ್ಯನಾಗುವುದಕ್ಕೆ ಅನೇಕ ಉಪಾಯಗಳುಂಟು. ಧರ್ಮಿಷ್ಠರಲ್ಲಿ ಅಗ್ರಗಣ್ಯನಾದವನು ಯೂಲಿಸಸ್ಸನು. ಸಾಧ್ವೀಗಳಲ್ಲಿ ಶಿರೋಮಣಿಯಾದವಳು ಪೆನಿಲೋಪಳು. ತಂದೆತಾಯಿಗಳ ಗುಣಾತಿಶಯಗಳನ್ನು ಪರಿಪೂರ್ಣವಾಗಿ ಹೊಂದಿ, ಮೂರ್ತೀಭವಿಸಿದ ಸದ್ಗುಣಸ್ವರೂಪನಾದವನು ಟೆಲಿಮಾಕಸ್ಸನು. ದೈವಯೋಗದಿಂದ ನಾವಿಬ್ಬರೂ ನಿನಗೆ ಸಹಾಯ ಮಾಡುವುದಕ್ಕೋಸ್ಕರ ಬಂದೆವು. ಸಹಾಯವನ್ನು ಮಾಡಿದೆವು. ನಿನ್ನ ಪ್ರತಿಕಕ್ಷಿಗಳು ನಿನ್ನಲ್ಲಿ ವೈರವನ್ನು ಬಿಡುವಂತೆ ಮಾಡಲ್ಪಟ್ಟರು. ಯೂಲಿಸಸ್ಸನು ಬದುಕಿದ್ದರೆ, ಅವನಿಗೆ ಸಹಾಯವನ್ನು ಮಾಡಿ, ಅವನ ದೇಶದಲ್ಲಿ ಅವನನ್ನು ಪ್ರತಿಷ್ಠಿಸುವುದು ನಮ್ಮ ಕರ್ತವ್ಯ. ಅವನು ಕಾಲಾಧೀನನಾಗಿದ್ದರೆ, ಸದರಿ ಸಂಸ್ಥಾನಕ್ಕೆ ಟೆಲಿಮಾಕಸ್ಸನು ಪ್ರಭುವಾಗುವಂತೆ ಮಾಡಿ, ಪೆನಿಲೋಪಳ ಶೋಕನಿವಾರಣೆಯನ್ನು ಮಾಡಬೇಕು. ಈ ಕೆಲಸ ಮಾಡುವುದಕ್ಕೆ ಸೈನ್ಯಗಳೂ, ಇತರ ಸಂಪತ್ತುಗಳೂ ಆವಶ್ಯಕ. ಇವುಗಳನ್ನೆಲ್ಲಾ ಪಡೆಯುವುದಕ್ಕೆ ಒಂದು ಉಪಾಯವುಂಟು. ನೆಸ್ಟರನೇ ಮೊದಲಾದವರಿಗೆ ಸಹಾಯ ಮಾಡಿ, ಡಾನಿಯರ್ಕರನ್ನು ನಿಗ್ರಹಿಸೋಣ. ಅನಂತರ ಅವರ ಸಹಾಯವನ್ನೂ

ಪಡೆದು, ಯೂಲಿಸಸ್ ಅಥವಾ ಟೆಲಿಮಾಕಸ್ಸನಿಗೆ ಸಹಾಯ ಮಾಡೋಣ. ಹೀಗೆ ಮಾಡಿದರೆ ನಮ್ಮ ಉದ್ದೇಶವು ನೆರವೇರುವುದು" ಈ ರೀತಿಯಲ್ಲಿ ಮೆಂಟರನು ಹೇಳಿದ ಕೂಡಲೆ, ಇದು ಸಾಧ್ಯವೆಂದು ಇಡುಮಿನಿಯಸ್ಸನಿಗೆ ತೋರಿತು. ತನ್ನ ದೌರ್ಬಲ್ಯವನ್ನು ಆಚ್ಛಾದಿಸಿಕೊಳ್ಳುವುದಕ್ಕೆ ಇದು ಒಳ್ಳೆಯ ಉಪಾಯವೆಂದು ಗೊತ್ತಾಯಿತು. ಆದಾಗ್ಯೂ ಇಥಾಕಾ ಪಟ್ಟಣಕ್ಕೆ ಸೈನ್ಯಗಳನ್ನು ಕಳುಹಿಸುವುದು ಸಾಧ್ಯವೇ ? ಯೂಲಿಸಸ್ ಅಥವಾ ಟೆಲಿಮಾಕಸ್ಸನಿಗೆ ಸಹಾಯ ಮಾಡುವುದು ಸಾಧ್ಯವೇ ? ಎಂಬ ಸಂದೇಹವು ಇಡುಮಿನಿಯಸ್ಸನಿಗೆ ಉಂಟಾಯಿತು. ಈ ವಿಷಯವನ್ನು ಅವನು ಮೆಂಟರನಿಗೆ ಸೂಚಿಸಿದನು. ಅದಕ್ಕೆ ಮೆಂಟರನು ಹೇಳಿದ್ದೇನಂದರೆ:—

"ನೀನು ಅಶಕ್ತನೆಂದು ತಿಳಿದುಕೊಳ್ಳಬೇಡ. ಧರ್ಮದಿಂದ ನಡೆಯತಕ್ಕವರಿಗೆ ದೇವರ ಪ್ರಸನ್ನತೆಯು ಉಂಟಾಗುವುದು. ದೇವರ ಪ್ರಸನ್ನತೆಯುಳ್ಳವರಿಗೆ ಯಾವ ಸಹಾಯ ತಾನೇ ದೊರೆಯುವುದಿಲ್ಲ ? ಸಂದೇಹವನ್ನು ಬಿಡು. ವ್ಯಾಪಾರಕ್ಕೋಸ್ಕರ ನಿನ್ನ ದೇಶದಿಂದ ಅನೇಕ ಹಡಗುಗಳು ಎಪಿರಸ್ ಪಟ್ಟಣಕ್ಕೆ ಹೊರಡುವುದರಲ್ಲಿವೆ. ಈ ಪಟ್ಟಣಕ್ಕೆ ಬರತಕ್ಕ ವ್ಯಾಪಾರದ ಪದಾರ್ಥಗಳಿಗೆ ನೀನು ಬಲವಾದ ಸುಂಕವನ್ನು ಹಾಕಿರುತ್ತೀಯೆ. ಈಗ ಆ ಸುಂಕವನ್ನು ತೆಗೆದುಹಾಕು. ದೇಶಾಂತರದ ವರ್ತಕರು ಪೂರ್ವದಂತೆ ಬರುವುದರಲ್ಲಿ ಆಸಕ್ತರಾಗುವರು. ಈ ವರ್ತಕಮಂಡಲಿಯವರು ಯೂಲಿಸಸ್ಸನ ಸಲಹೆಯನ್ನು ಪಡೆಯಬೇಕೆಂದು ಪ್ರಯತ್ನಮಾಡುತ್ತಲಿದ್ದರೆಂದು ತಿಳಿಯಬರುತ್ತದೆ. ಒಂದು ವೇಳೆ ಈ ವರ್ತಕರ ಜತೆಯಲ್ಲಿ ಯೂಲಿಸಸ್ಸನೂ ಕೂಡ ಬರುವ ಸಂಭವವುಂಟು. ಅವನು ಬಂದರೆ ಸಂತೋಷ. ಅವನು ಬರದಿದ್ದರೂ, ಈ ಸುಂಕವನ್ನು ತೆಗೆದುಹಾಕಿದ್ದರಿಂದ ಅವರು ಸಂತುಷ್ಟರಾಗುವರು. ಅವರ ಸಹಾಯವನ್ನು ನಾವು ಪಡೆಯಬಹುದು. ಈಗ ನಿನ್ನ ಪ್ರತಿಕಕ್ಷಿಗಳಿಗೆ ಸಹಾಯ ಮಾಡಿ, ಅವರ ಶತ್ರುಗಳಾದ ಡಾಸಿಯರ್ಕರನ್ನು ನಿಗ್ರಹಿಸೋಣ. ಹೀಗೆ ಮಾಡಿದ ಕೂಡಲೆ, ನಿನ್ನ ಪ್ರತಿಕಕ್ಷಿಗಳು ನಿನ್ನ ಸನ್ಮಿತ್ರರಾಗುವರು. ಅವರ ಸಹಾಯವನ್ನೂ ಪಡೆದು, ಟೆಲಿಮಾಕಸ್ಸನಿಗೆ ಸಹಾಯ ಮಾಡುವುದಕ್ಕೋಸ್ಕರ ನಾವೆಲ್ಲರೂ ಹೊರಡಬಹುದು. ಶತ್ರುಗಳನ್ನು ನಿಗ್ರಹಿಸಿ, ನಿನ್ನ ಸಹಾಯವನ್ನೂ, ನೆಸ್ಟರನೇ ಮೊದಲಾದ ಮಿತ್ರಮಂಡಲಿಯವರ ಸಹಾಯವನ್ನೂ ಪಡೆದು, ಸತ್ಯಪರಾಕ್ರಮನಾದ ಟೆಲಿಮಾಕಸ್ಸನು ಇಥಾಕಾ ದ್ವೀಪದ

ಕಡೆಗೆ ಬರುತ್ತಾನೆಂಬ ವರ್ತಮಾನವನ್ನು ಕೇಳಿದ ಕೂಡಲೆ, ಪೆನಿಲೋಪಳ ಪಾತಿವ್ರತ್ಯಭಂಗವನ್ನು ಮಾಡಬೇಕೆಂದು ಸದರಿ ದ್ವೀಪಕ್ಕೆ ಹೋಗಿ ಸೇರಿರತಕ್ಕ ಧೊರೆಗಳು ಭಗ್ನಮನೋರಥರಾಗಿ, ಪ್ರಾಣರಕ್ಷಣೆಯಲ್ಲಿ ಆಸಕ್ತರಾಗಿ ಹೊರಟು ಹೋಗುವ ಸ್ಥಿತಿಯು ಬರುವುದು. ಯುದ್ಧದ ಸಂಭವವೇ ಇರುವುದಿಲ್ಲ. ಶತ್ರುಗಳು ತಾವಾಗಿಯೇ ಓಡಿಹೋಗುವರು. ಟೆಲಿಮಾಕಸ್ಸನ ಉಪಕಾರಕ್ಕೆ ಪ್ರತ್ಯುಪಕಾರ ಮಾಡಿದಂತಾಗುವುದು. (ನೆಸ್ಟರನೇ ಮೊದಲಾದ ಮಿತ್ರಮಂಡಲಿಯವರಿಗೂ ಸಹಾಯ ಮಾಡಿದಂತಾಗುವುದು)'' ಈ ರೀತಿಯಲ್ಲಿ ಮೆಂಟರನು ಹೇಳಲು, ಇಡುಮಿನಿಯುಸ್ಸನಿಗೆ ಬಹಳ ಸಂತೋಷವಾಯಿತು. ಮೆಂಟರನನ್ನು ಕುರಿತು ಅವನು ಹೇಳಿದ್ದೇನಂದರೆ:—

"ಪ್ರಭುತ್ವ ಮಾಡತಕ್ಕವರಿಗೆ ಅನೇಕ ಸಂದರ್ಭಗಳಲ್ಲಿ ಹೇಗೆ ನಡೆದುಕೊಳ್ಳಬೇಕೋ ಅದು ಗೊತ್ತಾಗುವುದಿಲ್ಲ. ಕಣ್ಣಿದ್ದಾಗ್ಯೂ ಅವರಿಗೆ ಕಾಣುವುದಿಲ್ಲ. ಕಿವಿಯಿದ್ದಾಗ್ಯೂ ಕೇಳುವುದಿಲ್ಲ. ಬುದ್ಧಿಯಿದ್ದಾಗ್ಯೂ ತಮ್ಮ ಕೆಲಸದ ಪರಿಣಾಮ ಫಲವನ್ನು ಸರಿಯಾಗಿ ಯೋಚಿಸಿ ತಿಳಿದುಕೊಳ್ಳುವ ಶಕ್ತಿಯು ಇರುವುದಿಲ್ಲ. ಇಂಥಾ ಶಕ್ತಿಯುಳ್ಳ ನಿನ್ನಂಥಾ ಸಚಿವಶಿಖಾಮಣಿಗಳು ಯಾರಿಗೆ ದೊರೆಯುವರೋ ಅವರು ಪುಣ್ಯವಂತರು. ನನ್ನ ಭಾಗ್ಯಪರಿಪಾಕದಿಂದ ನಿನ್ನ ಸಹಾಯವು ನನಗೆ ದೊರೆಯಿತು. ಯುದ್ಧಕ್ಕೆ ಅವಕಾಶ ಕೊಡದೆ, ನನ್ನ ಶತ್ರುಗಳನ್ನು ನನ್ನ ಮಿತ್ರರಾಗುವಂತೆ ಮಾಡಿದೆ. ಅವರ ಇಷ್ಟಾರ್ಥವನ್ನು ಸಲ್ಲಿಸಿ, ಟೆಲಿಮಾಕಸ್ಸನ ಉಪಕಾರಕ್ಕೆ ಪ್ರತ್ಯುಪಕಾರವು ನಡೆಯುವಂತೆ ಸಲಹೆಯನ್ನು ಕೊಟ್ಟಿರುವಿ. ಈ ವಿಷಯದಲ್ಲಿ ನೀನು ಯೋಚಿಸಿರುವಂತೆ ನಡೆಯುವುದು, ಇದರಲ್ಲಿ ಸಂದೇಹವೇನೂ ತೋರುವುದಿಲ್ಲ. ಎಷ್ಟು ಕೋಟಿ ಸೈನ್ಯವಿದ್ದರೆ ತಾನೆ ಏನು ಪ್ರಯೋಜನ ? ಯುದ್ಧದಲ್ಲಿ ಒಬ್ಬರೂ ಸಾಯದಂತೆ, ಒಂದು ತೊಟ್ಟು ರಕ್ತವೂ ಚೆಲ್ಲಲ್ಪಡದಂತೆ ದಿಗ್ವಿಜಯೋಪಾಯವನ್ನು ಮಾಡಿರುವ ನಿನ್ನ ಶಕ್ತಿಯು ಅದ್ಭುತವಾದದ್ದು. ಪ್ರಭುಗಳು ಪ್ರಾಯಕವಾಗಿ ಉನ್ಮತ್ತರು. ಸಮರ್ಥರಾದ ಸಚಿವರ ಗುಣಾತಿಶಯಗಳನ್ನು ತಿಳಿದುಕೊಳ್ಳುವುದಕ್ಕೂ ಅಸಮರ್ಥರಾಗಿರುವರು. ಸ್ತುತಿಪಾಠಕರಲ್ಲಿ ಅವರಿಗೆ ಇರುವ ಪ್ರೀತಿಯು ದೀರ್ಘದರ್ಶಿಗಳಾದ ಯಥಾರ್ಥವಾದಿಗಳಲ್ಲಿ ಇರುವುದು ಅಪೂರ್ವ. ನನ್ನ ಅವಸ್ಥೆಯು ಹೀಗೆಯೇ ಆಗಿತ್ತು. ದುರಾತ್ಮರಾದ ಸ್ತುತಿಪಾಠಕರ ಮಾತನ್ನು ನಂಬಿ ನಾನು ನೆಸ್ಟರೇ ಮೊದಲಾದ ಮಿತ್ರಮಂಡಲಿಯ

ವರೊಡನೆ ವಿರೋಧವನ್ನು ಬೆಳೆಸಿದೆನು. ನೀನೂ, ಟೆಲಿಮಾಕಸ್ಸೂ ದೈವಯೋಗದಿಂದ ಬಂದಿರಿ. ನಿಮ್ಮನ್ನೂ ಕೂಡ ನಿರಾಕರಿಸುವಂತೆ ಈ ದುರಾತ್ಮರು ನನಗೆ ದುರುಪದೇಶವನ್ನು ಮಾಡಿದರು. ಆದರೆ ನೀವು ಅಮಾನುಷ ಸ್ವಭಾವವುಳ್ಳವರು. ನನ್ನಂಥಾ ಅಲ್ಪಜ್ಞನಿಗೂ ಕೂಡ ನಿಮ್ಮ ಮಹಿಮೆಯು ಗೊತ್ತಾಗುವಂತೆ ಮಾಡಿದಿರಿ. ಅಯೋಗ್ಯನಾದ ನನ್ನನ್ನು ಯೋಗ್ಯನಾಗುವಂತೆಯೂ, ನೈನಾಸನ ಸಂತತಿಗೆ ಕಳಂಕಪ್ರಾಯನಾಗದಂತೆಯೂ ಮಾಡಿದಿರಿ. ಇದಕ್ಕೆ ನಾನು ಎಷ್ಟು ಕೃತಜ್ಞನಾಗಿರಬೇಕೋ ಅಷ್ಟು ಕೃತಜ್ಞನಾಗಿರುವುದು ಅಸಾಧ್ಯ. ಆದಾಗ್ಯೂ ಬದುಕಿರುವವರೆಗೂ ನಿಮ್ಮ ಉಪಕಾರವನ್ನು ನಾನು ಮರೆಯುವುದಿಲ್ಲ." ಈ ರೀತಿಯಲ್ಲಿ ಇಡುಮಿನಿಯಸ್ಸನು ಹೇಳಿದ ಕೂಡಲೆ, ಮೆಂಟರನು ಸಮಾಧಾನೋಕ್ತಿಗಳಿಂದ ಅವನನ್ನು ಸನ್ಮಾನಿಸಿ, ನೆಸ್ಟರನೇ ಮೊದಲಾದವರ ಬಳಿಗೆ ಹೋದನು. ನೆಸ್ಟರನನ್ನು ಕುರಿತು ಮೆಂಟರನು ಹೇಳಿದ್ದೇನಂದರೆ:—

"ಇಡುಮಿನಿಯಸ್ಸನ ಗುಣಾತಿಶಯಗಳನ್ನು ನೀನೂ, ನಿನ್ನ ಮಿತ್ರಮಂಡಲಿಯವರೂ ಸರಿಯಾಗಿ ತಿಳಿದುಕೊಂಡಿರಲಿಲ್ಲ. ದೈವಯೋಗದಿಂದ ಅವನ ಗುಣಾತಿಶಯಗಳು ನಿಮಗೆ ತಿಳಿಯುವಂತಾಯಿತು. ನಿಮಗೆ ಉಂಟಾಗಿದ್ದ ದ್ವೇಷವು ಹೋಯಿತು. ನೀವು ಮಿತ್ರರಾದಿರಿ. ಇದು ನನಗೆ ತುಂಬಾ ಸಂತೋಷವನ್ನುಂಟುಮಾಡಿರುವುದು. ನಿಮ್ಮ ಶತ್ರುಗಳಾದ ಡಾನಿಯರ್‌ರು ನಮಗೂ ಶತ್ರುಗಳು. ಅವರನ್ನು ನಿಗ್ರಹಿಸುವುದು ನಿಮಗೆ ಹೇಗೆ ಕರ್ತವ್ಯವೋ ನಮಗೂ ಹಾಗೆ ಕರ್ತವ್ಯವಾಗಿರುವುದು. ಟೆಲಿಮಾಕಸ್ಸನು ಅವರನ್ನು ನಿಗ್ರಹಿಸುವುದರಲ್ಲಿ ದಕ್ಷನಾದವನು. ಅವನನ್ನೂ, ಮಹಾಪರಾಕ್ರಮಶಾಲಿಗಳಾದ ಈ ಕ್ರೀಟ್ ದ್ವೀಪದ ಯೋಧರನ್ನೂ ನಿಮ್ಮ ಸಹಾಯಾರ್ಥವಾಗಿ ಇಡುಮಿನಿಯಸ್ಸನು ಕಳುಹಿಸುವನು. ಇವರು ನಿಮಗೆ ಸಹಾಯವನ್ನು ಮಾಡುವರು. ಇವರ ಸಹಾಯದಿಂದ ನಿಮಗೆ ದಿಗ್ವಿಜಯವಾಗುವುದು. ಇವರ ಮೇಲ್ಪಂಗ್ತಿಯನ್ನು ನೋಡಿ ನಿಮ್ಮ ಯೋಧರೆಲ್ಲಾ ಸತ್ಯಪರಾಕ್ರಮವುಳ್ಳವರಾಗುವರು. ನಿಮ್ಮ ಸೈನಿಕರಿಗೆ ಧರ್ಮವಾದ ಕೀರ್ತಿಯಲ್ಲಿ ಆಸಕ್ತಿಯೂ, ಕಷ್ಟಗಳನ್ನು ಸಹಿಸುವುದರಲ್ಲಿ ಅಸಾಧಾರಣವಾದ ಶಕ್ತಿಯೂ, ಮರಣದಲ್ಲಿ ತಿರಸ್ಕಾರವೂ, ಸಂಗ್ರಾಮರಹಸ್ಯಗಳಲ್ಲಿ ಅಸಾಧಾರಣವಾದ ಕೌಶಲ್ಯವೂ ಉಂಟಾಗುವುವು. ನಿಮಗೆ ದಿಗ್ವಿಜಯವಾಗುವ ಭಾರವನ್ನು ಟೆಲಿಮಾಕಸ್ಸನು ವಹಿಸಿರುವನು. ಶತ್ರು

ಗಳನ್ನು ನಿಗ್ರಹಿಸಿದ ತರುವಾಯ ಯೂಲಿಸಸ್ಸನ ಮಗನ ಮೆಹನತ್ತಿಗೆ ಅನುರೂಪ ವಾದ ಮರ್ಯಾದೆಯಿಂದ ನೀವು ಕಳುಹಿಸುವ ಸಂಭವವು ಉಂಟಾಗಲೆಂದು ನಾನು ಕೋರುತ್ತೇನೆ" ಎಂದು ಹೇಳಿದನು. ಈ ಮಾತನ್ನು ಕೇಳಿ ನೆಸ್ಟರನು ಹೇಳಿದ್ದೇ ನಂದರೆ:—

"ಎಲೈ ಮೆಂಟರನೇ, ನಿನ್ನ ಶಕ್ತಿಯು ಅಮಾನುಷವಾದದ್ದು. ಇಡು ಮಿನಿಯಸ್ಸನನ್ನು ಸಂಹರಿಸಬೇಕೆಂಬ ಉದ್ದೇಶದ್ದಿಂದ ಮಿತ್ರಮಂಡಲಿಯವರಾದ ನಾವೆಲ್ಲರೂ ಬದ್ಧದೀಕ್ಷೆಯುಳ್ಳವರಾಗಿ ಇಲ್ಲಿಗೆ ಬಂದೆವು. ಅವನ ಪುಣ್ಯಪರಿಪಾ ಕದಿಂದಲೋ ಅಥವಾ ಉಭಯ ಕಕ್ಷಿಗಳ ಭಾಗ್ಯಪರಿಪಾಕದಿಂದಲೋ ನೀನೂ, ಟೆಲಿ ಮಾಕಸ್ಸನೂ ಈ ಯುದ್ಧವನ್ನು ತಪ್ಪಿಸುವುದಕ್ಕೆ ಮಧ್ಯಸ್ಥರಾದ ರಾಯಭಾರಿಗಳಾ ದಿರಿ. ಈ ವಿಷಯದಲ್ಲಿ ನೀವು ಪ್ರವರ್ತಿಸದಿದ್ದರೆ, ಭಯಂಕರವಾದ ಯುದ್ಧವು ಪ್ರಾಪ್ತವಾಗುತ್ತಿತ್ತು. ಕೋಟ್ಯಂತರ ಜನಗಳು ಮಡಿಯುತ್ತಿದ್ದರು. ಅನೇಕ ಕುಟುಂಬಗಳು ನಾಶವಾಗುತ್ತಿದ್ದವು. ಅಸಾಧಾರಣವಾದ ರಾಜತಂತ್ರದಿಂದ ಈ ಯುದ್ಧವನ್ನು ನಿಲ್ಲಿಸಿದಿರಿ. ನಮಗೆ ರಾಜಿಯನ್ನು ಮಾಡಿಸಿದಿರಿ. ನಮ್ಮ ಪದ ವಿಗೆ ಅನುರೂಪವಾದ ಸತ್ಕಾರವನ್ನು ಮಾಡಿಸಿದಿರಿ. ಈಗ ನಮ್ಮ ಶತ್ರುಗಳನ್ನು ನಿಗ್ರಹಿಸುವುದಕ್ಕೆ ಇಡುಮಿನಿಯಸ್ಸನು ತನ್ನ ಸೈನಿಕರಲ್ಲಿ ಪರಾಕ್ರಮಶಾಲಿಗಳಾದ ವರನ್ನು ಕಳುಹಿಸುವಂತೆ ಮಾಡಿ, ಲೋಕೈಕವೀರನಾದ ಟೆಲಿಮಾಕಸ್ಸನ ಸಹಾಯ ವನ್ನೂ ಕೂಡ ನೀನು ಕೊಟ್ಟಿರುತ್ತೀಯೆ. ಇದಕ್ಕಾಗಿ ನಾವೆಲ್ಲರೂ ಅತ್ಯಂತ ಕೃತಜ್ಞರಾಗಿದೇವೆ" ಎಂದು ಹೇಳಿದನು. ಅನಂತರ ನೆಸ್ಟರನೇ ಮೊದಲಾದ ಮಿತ್ರ ಮಂಡಲಿಯವರಿಗೂ, ಅವರ ಸೈನ್ಯಗಳಿಗೂ ಸಂತರ್ಪಣೆಗಳೂ, ಉಡಿಗೆರೆಗಳೂ, ಅನೇಕ ವಿಧವಾದ ಬಹುಮಾನಗಳೂ ಮಾಡಲ್ಪಟ್ಟವು. ತರುವಾಯ ಇಡುಮಿನಿ ಯಸ್ಸನು ನೆಸ್ಟರನೇ ಮೊದಲಾದವರನ್ನು ಕುರಿತು ಅಯ್ಯಾ ನೆಸ್ಟರನೇ ಪಾಶ್ಚಾತ್ಯ ಭೀಷ್ಮನೆಂದು ನಿನಗೆ ಉಂಟಾಗಿರತಕ್ಕ ಕೀರ್ತಿಯು ದಿಗಂತವಿಶ್ರಾಂತವಾಗಿದೆ. ನೀನು ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನು. ಈ ಯುದ್ಧವು ಉಪಕ್ರಮವಾಗಿ ದ್ದರೆ, ನಮ್ಮ ಉಭಯತ್ರರಿಗೂ ಬಹಳ ನಷ್ಟವಾಗುತ್ತಿತ್ತು. ದೈವಯೋಗದಿಂದ ಮೆಂಟರನೂ, ಟೆಲಿಮಾಕಸ್ಸನೂ ಈ ಯುದ್ಧವು ನಡೆಯದಂತೆ ಮಾಡಿ, ನಮ್ಮಲ್ಲಿ ಸೌಹಾರ್ದವೂ, ಪರಸ್ಪರ ಪ್ರೀತಿಯೂ ಉಂಟಾಗುವಂತೆ ಮಾಡಿದರು. ಇದ ಕ್ಕಾಗಿ ಇವರಿಗೆ ತುಂಬಾ ಕೃತಜ್ಞನಾಗಿರುವೆನು. ನೀವೂ ಹಾಗೆಯೇ ಇರುವಿರೆಂದು

ನನಗೆ ತೋರುತ್ತದೆ. ಅದು ಹಾಗಿರಲಿ. ಈಗ ನಾನೂ ನಿಮ್ಮಲ್ಲಿ ಒಬ್ಬನಾಗಿರುವೆನು. ನಿಮ್ಮ ಶತ್ರುಗಳೇ ನನ್ನ ಶತ್ರುಗಳು. ನಿಮ್ಮ ಮಿತ್ರರೇ ನನ್ನ ಮಿತ್ರರು. ಡಾನಿಯರ್ಸರನ್ನು ನಿಗ್ರಹಿಸುವುದಕ್ಕೋಸ್ಕರ ನನ್ನ ಸೈನಿಕರಲ್ಲಿ ಪರಾಕ್ರಮಶಾಲಿಗಳಾದವರನ್ನು ಕಳುಹಿಸಬೇಕೆಂದು ಮೆಂಟರನು ಆಜ್ಞೆಮಾಡಿರುವನು. ಈ ಆಜ್ಞೆಯಂತೆ ನಡೆಯಬೇಕೆಂದು ಸೈನ್ಯಕ್ಕೆ ಅಪ್ಪಣೆಯು ಕೊಡಲ್ಪಟ್ಟಿರುವುದು. ಈ ಸೈನ್ಯಕ್ಕೆ ಅಧಿಪತಿಯಾಗಿ ನಿಮ್ಮ ಜೊತೆಯಲ್ಲಿ ಹೋಗಿ, ನಿಮ್ಮ ಶತ್ರುಗಳನ್ನು ಮಿತ್ರರನ್ನಾಗಿ ಮಾಡಬೇಕು. ಹತೋಟಿಗೆ ಬರದಿದ್ದರೆ, ಅವರನ್ನು ನಿಗ್ರಹಿಸಬೇಕು ಎಂದು ಮೆಂಟರನು ಟೆಲಿಮಾಕಸ್ಸನಿಗೆ ಆಜ್ಞೆಮಾಡಿರುವನು. ಈತನ ಆಜ್ಞೆಯಲ್ಲಿ ನನ್ನ ಸೈನ್ಯವು ಇಡಲ್ಪಟ್ಟಿರುವುದು. ಇವರು ನಿನ್ನ ಜೊತೆಯಲ್ಲಿ ಬರುವರು. ಇವರಿಂದ ನಿಮಗೆ ದಿಗ್ವಿಜಯವಾಗಲೆಂದು ನಾನು ಕೋರುತ್ತೇನೆ" ಎಂದು ಹೇಳಿದನು. ಅದನ್ನು ಕೇಳಿ, ಅತ್ಯಂತ ಸಂತುಷ್ಟನಾಗಿ, ನೆಸ್ಟರನು ಹೇಳಿದ್ದೇನೆಂದರೆ:—

"ಎಲೈ ಇಡುಮಿನಾನಿಯಸ್ಸನೇ, ಎಲೈ ಮೆಂಟರೇ, ನಮ್ಮ ಅಭಿಷೇಣವು ಇಂಥಾ ಶುಭಸಂಧಾನವನ್ನು ಹೊಂದಿದ್ದಕ್ಕೋಸ್ಕರ ನಾವು ಅತ್ಯಂತ ಸಂತುಷ್ಟರಾಗಿದೇವೆ. ಎಲೈ ಇಡುಮಿನಾನಿಯಸ್ಸನೇ, ನಮ್ಮ ಶತ್ರುಗಳನ್ನು ನಿಗ್ರಹಿಸುವುದಕ್ಕೋಸ್ಕರ ನೀನು ಮಾಡಿರುವ ಸಹಾಯಕ್ಕೆ ನಾವು ತುಂಬಾ ಕೃತಜ್ಞರಾಗಿದೇವೆ. ಎಲೈ ಮೆಂಟರೇ, ಇಡುಮಿನಾನಿಯಸ್ಸನ ಸೈನ್ಯಕ್ಕೆ ಅಧಿಪತಿಯಾಗಿ, ನಮ್ಮ ಸಹಾಯಕ್ಕೋಸ್ಕರ ಟೆಲಿಮಾಕಸ್ಸನನ್ನು ಕಳುಹಿಸಿದ್ದಕ್ಕೋಸ್ಕರ ನಾವು ತುಂಬಾ ಸಂತುಷ್ಟರಾಗಿರುತ್ತೇವೆ. ಎಲೈ ಟೆಲಿಮಾಕಸ್ಸನೇ, ಇಡುಮಿನಾನಿಯಸ್ಸನ ಸೈನ್ಯಕ್ಕೆ ನೀನು ಅಧಿಪತಿಯಾಗಿ ಮಾಡಲ್ಪಟ್ಟಿರುವೆ. ನಮ್ಮ ಉಭಯ ಸೈನ್ಯಗಳಿಗೂ ಸೇನಾನಾಯಕನಾಗಿ ಇರಬೇಕೆಂದು ನಾವು ಪ್ರಾರ್ಥಿಸುತ್ತೇವೆ. ನಾವು ಮಾಡತಕ್ಕದ್ದು ಧರ್ಮಯುದ್ಧ. ಡಾನಿಯರ್ಸರು ಧರ್ಮವಾಗಿ ನಡೆದುಕೊಳ್ಳುವುದಕ್ಕೆ ಒಪ್ಪಿದರೆ ಸಮಾಧಾನವಾಗಲಿ. ತಪ್ಪಿದರೆ ಅವರು ನಿಗ್ರಹಿಸಲ್ಪಡಲಿ. ಯೂಲಿಸಸ್ಸನ ಮಗನ ಸಹಾಯವು ನಮಗೆ ದೊರೆತ ಮೇಲೆ ವಿಜಯಲಕ್ಷ್ಮೀ ಪ್ರಸನ್ನತೆಯು ಉಂಟಾಯಿತೆಂದು ನಾವು ಭಾವಿಸುತ್ತೇವೆ" ಎಂದು ಹೇಳಿ, ಇಡುಮಿನಾನಿಯಸ್ಸನಿಗೂ, ಮೆಂಟರಿಗೂ ಸತ್ಕಾರಗಳನ್ನು ಮಾಡಿ, ಉಡಿಗೆರೆಗಳನ್ನು ಕೊಟ್ಟು, ಇವರ ಅಪ್ಪಣೆಯನ್ನು ತೆಗೆದುಕೊಂಡು, ಸ್ಪ್ಯಾರ್ಟ್ ಪಟ್ಟಣದಿಂದ ಪ್ರಯಾಣವನ್ನು ಮಾಡಿದರು.

ನೆಸ್ಟರ್ ಮೊದಲಾದ ಮಿತ್ರಮಂಡಲಿಯ ಪ್ರಭುಗಳೂ, ಯೋಧರೂ ಮೆಂಟರನ ಅದ್ಭುತವಾದ ಶಕ್ತಿಯನ್ನು ನೋಡಿ ಆಶ್ಚರ್ಯ ಪಟ್ಟರು. ಟೆಲಿಮಾಕಸ್ಸನು ಡಾನಿಯರ್‌ರೊಡನೆ ಯುದ್ಧಮಾಡುವ ಸಂಭವವು ಬಂದದ್ದಕ್ಕೋಸ್ಕರ ಸಂತುಷ್ಟನಾಗಿದ್ದಾಗ್ಯೂ, ಮೆಂಟರನೊಡನೆ ಅವನ ವಿಯೋಗದಿಂದ ವ್ಯಸನವುಳ್ಳವನಾಗಿದ್ದನು. ಮಿತ್ರಮಂಡಲಿಯವರೆಲ್ಲಾ ಒಬ್ಬೊಬ್ಬರಾಗಿ ಮೆಂಟರು ಮತ್ತು ಇಡುಮಿನಿಯಸ್‌ರವರಿಂದ ಅಪ್ಪಣೆಯನ್ನು ತೆಗೆದುಕೊಂಡರು. ಕೊನೆಗೆ ಟೆಲಿಮಾಕಸ್ಸನು ಇಡುಮಿನಿಯುಸ್ಸನ ಅಪ್ಪಣೆಯನ್ನು ಪಡೆದುಕೊಂಡು, ಮೆಂಟರನ ಎದುರಿಗೆ ಮೌನದಿಂದ ನಿಂತನು. ಅವನ ಕಣ್ಣುಗಳಿಂದ ಶೋಕಜಲವು ಧಾರಾಸಂಪಾತವಾಗಿ ಸುರಿಯುವುದಕ್ಕೆ ಉಪಕ್ರಮವಾಯಿತು. ಮೆಂಟರನನ್ನು ಕುರಿತು ಟೆಲಿಮಾಕಸ್ಸನು ಹೇಳಿದ್ದೇನೆಂದರೆ:—

"ಲೋಕೈಕವೀರನೆಂಬ ಬಿರುದನ್ನು ಸಂಪಾದಿಸುವುದರಲ್ಲಿ ನನಗೆ ವಿಶೇಷ ಅಭಿಲಾಷೆಯು ಇರುವುದಿಲ್ಲ. ನಿನ್ನ ಸಾನ್ನಿಧ್ಯದಲ್ಲಿ ಇದ್ದುಕೊಂಡು, ನಿನ್ನ ಹಿತೋಪದೇಶ ರೂಪವಾದ ಅಮೃತಪಾನವನ್ನು ಮಾಡುತ್ತಲಿರುವುದರಲ್ಲಿ ನನಗೆ ತುಂಬಾ ಅಭಿಲಾಷೆಯು ಇರುವುದು. ಈ ಅಭಿಲಾಷೆಯ ಭಂಗಕ್ಕೆ ಮೊದಲು ಈಜಿಪ್ಷರ್‌ರು ಕಾರಣಭೂತರಾದರು. ಬಹು ಕಾಲದವರೆಗೂ ವಿಯೋಗ ದುಃಖವನ್ನು ಅನುಭವಿಸಿದೆನು. ಈಗ ಇನ್ನೊಂದು ವಿಯೋಗ ದುಃಖವು ಬಂದಿರುವುದು. ನಿನ್ನ ಆಜ್ಞೆಯು ಅನುಲ್ಲಂಘನೀಯವಾದದ್ದು. ಅದನ್ನು ಶಿರಸಾ ವಹಿಸಿರುವೆನು. ನಿನ್ನಂತೆಯೇ ನೆಸ್ಟರನೂ ನನ್ನಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯನ್ನು ಇಟ್ಟಿರುವನು. ಅವನೇ ನೀನೆಂದು ಭಾವಿಸಿಕೊಂಡು, ಅವನ ಆಜ್ಞೆಯಂತೆ ನಡೆದು, ಪುನಃ ನಿನ್ನ ಸಂದರುಶನಕ್ಕೆ ಬರುವೆನು, ಅನುಜ್ಞೆಯಾಗಬೇಕು" ಎಂದು ಹೇಳಿ, ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಮೆಂಟರನು ಟೆಲಿಮಾಕಸ್ಸನನ್ನು ಆಲಿಂಗಿಸಿಕೊಂಡು, ಯೂಲಿಸಸ್ಸನ ಮಗನಾಗಿ, ಸಕಲ ವಿದ್ಯಾವಿಶಾರದನಾಗಿ, ಲೋಕವ್ಯವಹಾರಜ್ಞಾನವುಳ್ಳವನಾಗಿ, ಪಾಮರರಂತೆ ವ್ಯಸನಪಡುವುದು ನಿನಗೆ ಕರ್ತವ್ಯವಲ್ಲ. ದೇಶಕಾಲವರ್ತಮಾನದ ಸಂಯೋಗಗಳಿಂದ ಜನಗಳು ಒಬ್ಬರೊಡನೆ ಒಬ್ಬರು ಸೇರುವರು. ಸಂದರ್ಭಗಳಲ್ಲಿ ವ್ಯತ್ಯಾಸವಾದ ಕೂಡಲೆ, ಅವರವರ ಕರ್ತವ್ಯವನ್ನು ಮಾಡುವುದಕ್ಕೆ ಅವರು ಹೊರಟು ಹೋಗುವರು. ದೈವಾಜ್ಞೆಯಿಂದ ಪುನಃ ಸೇರುವುದು, ವಿಯೋಗವಾ

ಗುವುದೂ ಉಂಟು. ಈ ವಿಷಯಗಳೆಲ್ಲಾ ನಿನಗೆ ಗೊತ್ತೇ ಇರುವುದು. ದೀರ್ಘದರ್ಶಿಗಳಾದ ನಿನ್ನಂಥಾವನಿಗೆ ಇಂಥಾ ವಿಯೋಗ ದುಃಖವು ಬರಬಾರದು. ತಂದೆಯೇ ಮಗನಾಗಿ ಹುಟ್ಟುವನು. ಯೂಲಿಸಸ್ಸೇ ಟೆಲಿಮಾಕಸ್ಸನಾಗಿ ಹುಟ್ಟಿರುವನು. ಟೆಲಿಮಾಕಸ್ಸನಲ್ಲಿ ಯೂಲಿಸಸ್ಸನ ಗುಣಾತಿಶಯಗಳು ಮೂರ್ತೀಭವಿಸಿರುವುದೆಂದು ಲೋಕಕ್ಕೆ ಗೊತ್ತಾಗುವುದಕ್ಕೋಸ್ಕರ ಜಗದೀಶ್ವರನ ಮಹಿಮೆಯಿಂದ ಈ ಉಭಯ ಸೈನ್ಯಗಳಿಗೂ ಅಧಿಪತಿಯಾಗುವ ಸಂಭವವು ಉಂಟಾಗಿರುವುದು. ಇದಕ್ಕಾಗಿ ಸಂತೋಷಪಡು. ಸರ್ವೇಶ್ವರನನ್ನು ಇದಕ್ಕಾಗಿ ವಂದಿಸು. ನಿನ್ನ ಕರ್ತವ್ಯವನ್ನು ನಿನಗೆ ಸಹಜವಾದ ಶ್ರದ್ಧೆಯಿಂದ ಮಾಡು. ಮೆಂಟರನ ಬೋಧೆಯಿಂದ ಲಭ್ಯವಾಗುವ ಪ್ರಯೋಜನಕ್ಕಿಂತಲೂ ಯೂಲಿಸಸ್ಸನ ಮಹಿಮೆಯಿಂದ ನಿನಗೆ ಉಂಟಾಗಿರತಕ್ಕ ಗುಣಾತಿಶಯಗಳು ಕಡಮೆಯಾದವುಗಳೆಂದು ತಿಳಿದುಕೊಳ್ಳಬೇಡ. ಯೂಲಿಸಸ್ಸನ ಮಹಾನುಭಾವತೆಯು ನಿನ್ನಲ್ಲಿ ಮೂರ್ತೀಭವಿಸಿರುವುದು ಹೋಗು. ಶತ್ರುಗಳನ್ನು ತಿದ್ದುವುದು ಸಾಧ್ಯವಾದರೆ ತಿದ್ದು. ಅವರು ಉನ್ಮತ್ತತೆಯಿಂದ ನಡೆದರೆ, ಅವರನ್ನು ನಿಗ್ರಹಿಸು. ನನಗೂ, ಯೂಲಿಸಸ್ಸನಿಗೂ ಸನ್ಮಿತ್ರನಾದ ನೆಸ್ಟರನನ್ನು ನಿನ್ನ ಭಾಗದ ದೇವರೆಂದು ತಿಳಿದುಕೊಂಡು, ಅವನ ಸೇವೆಯನ್ನು ಮಾಡಿ, ಅವನ ಆಶೀರ್ವಾದವನ್ನೂ, ಮಿತ್ರಮಂಡಲಿಯವರ ಸುಪ್ರೀತಿಯನ್ನೂ ಪಡೆದುಕೊ." ಈ ರೀತಿಯಲ್ಲಿ ಹಿತೋಪದೇಶವನ್ನು ಮಾಡಿ, ಮೆಂಟರನು ಟೆಲಿಮಾಕಸ್ಸನನ್ನು ಕಳುಹಿಸಿ ಕೊಟ್ಟನು. ನೆಸ್ಟರ್ ಮೊದಲಾದ ಮಿತ್ರಮಂಡಲಿಯವರ ಸೈನ್ಯಗಳೂ, ಇಡುಮಿನಿಯಸ್ಸನ ಸೈನ್ಯಗಳೂ ಸ್ಯಾಲೆಂಟ್ ಪಟ್ಟಣವನ್ನು ಬಿಟ್ಟು ಪ್ರಯಾಣ ಮಾಡಿದರು.

ಮೆಂಟರನ ರೂಪದಿಂದ ಅವತರಿಸಿದ್ದ ಮಿನರ್ವಳು ಈ ಪರಿಣಾಮವನ್ನು ನೋಡಿ ಸಂತುಷ್ಟಳಾದಳು. ಟೆಲಿಮಾಕಸ್ಸನಿಗೆ ವಿಜಯವಾಗಲೆಂದು ಆಶೀರ್ವದಿಸಿದಳು. ಅವನಿಗೆ ವಿವೇಕವೂ, ದೀರ್ಘದರ್ಶನವೂ, ಅಪ್ರತಿಹತವಾದ ಧೈರ್ಯವೂ, ಅನನ್ಯಸಾಧಾರಣವಾದ ಶಾಂತಿಯೂ ಉಂಟಾಗುವಂತೆ ಮಾಡಿದಳು. ಆಕೆಯು ಅವನಿಗೆ ಪ್ರತ್ಯಕ್ಷಳಾಗಿ ಹೇಳಿದ್ದೇನೆಂದರೆ:—

"ಎಲೈ ಟೆಲಿಮಾಕಸ್ಸನೇ, ಮೆಂಟರನ ವಿಯೋಗ ದುಃಖದಿಂದ ವ್ಯಸನಾಕ್ರಾಂತನಾಗಬೇಡ. ಅವನ ಆಜ್ಞೆಯನ್ನು ಶಿರಸಾ ವಹಿಸು. ನಿನ್ನ ಕೆಲಸವು ಅಸಾಧ್ಯವಾದದ್ದೆಂದು ಭಯಪಡಬೇಡ. ಈ ಯುದ್ಧದ ಪರಿಣಾಮವು ಹೇಗೆ

ಆಗುವುದೋ ಎಂಬ ಸಂದೇಹವು ನಿನ್ನ ವ್ಯಸನಕ್ಕೆ ಕಾರಣವಾಗಿರಬಹುದು. ಅಂಥಾ ಸಂದೇಹವನ್ನು ಇಟ್ಟುಕೊಳ್ಳಬೇಡ. ನೆಸ್ಟರ್ ಮೊದಲಾದವರು ಧರ್ಮದಲ್ಲಿ ಆಸಕ್ತರಾಗಿರುವರು. ಆತ್ಮರಕ್ಷಣೆಗೋಸ್ಕರ ಯುದ್ಧವನ್ನು ಮಾಡುವರು. ನಿನ್ನ ಸಹಾಯಕ್ಕೆ ಅವರು ಪಾತ್ರರು. ಡಾಸಿಯರ್ಸರು ಅಧರ್ಮದಲ್ಲಿ ಪ್ರವರ್ತಕರಾಗಿರುವರು. ಅವರನ್ನು ನಿಗ್ರಹಿಸುವುದು ನಿನಗೆ ಕರ್ತವ್ಯ. ನಿನಗೆ ದಿಗ್ವಿಜಯವಾಗುವುದು. ಸಂದೇಹ ಪಡತಕ್ಕವರು ವಿನಾಶಕ್ಕೆ ಗುರಿಯಾಗುವರು. ಸಂದೇಹವನ್ನು ಇಟ್ಟುಕೊಳ್ಳಬೇಡ. ಧರ್ಮಯುದ್ಧ ಮಾಡತಕ್ಕವರಿಗೆ ದೇವರ ದಯೆಯು ಇರುವುದಿಲ್ಲವೇ? ಇದನ್ನು ಚನ್ನಾಗಿ ಪರ್ಯಾಲೋಚಿಸು. ಯಾವ ಯುದ್ಧದಲ್ಲಿ ಸತ್ಪುರುಷರಿಗೆ ಪರಾಜಯವಾಗಿರುವುದು? ಯಾವ ಯುದ್ಧದಲ್ಲಿ ದುರಾತ್ಮರಿಗೆ ವಿಜಯವಾಗಿರುವುದು? ಈ ವಿಷಯಗಳೆಲ್ಲಾ ನಿನಗೆ ಗೊತ್ತಿಲ್ಲವೇ? ಇಂಥಾ ಸಂದೇಹವೂ ಕೂಡ ನಿನಗೆ ಅಪಕೀರ್ತಿಯನ್ನು ತರುವುದು. ಧರ್ಮಯುದ್ಧಕ್ಕೆ ಹೋಗುವಾಗ ವಿಜಯವು ಎಂದಿಗೂ ತಪ್ಪುವುದಿಲ್ಲವೆಂಬ ನಂಬಿಕೆಯುಳ್ಳ ಪುರುಷಶ್ರೇಷ್ಠರಾದ ಮಹಾ ಪರಾಕ್ರಮಿಗಳಂತೆ ನಡೆದುಕೊಳ್ಳುವುದು ನಿನಗೆ ಕರ್ತವ್ಯ. ಹೇಡಿಗಳಾದವರು ಇಲ್ಲದ ವಿಪತ್ಪರಂಪರೆಗಳು ಬರುವಂತೆ ತಿಳಿದುಕೊಳ್ಳುವರು. ಅವರ ಮಾತನ್ನು ಕೇಳಬೇಡ. ನಿನ್ನ ಪ್ರತಿಪಕ್ಷಿಗಳ ಬಲವನ್ನು ಪರಿಶೀಲಿಸು. ನಿನ್ನ ಬಲವನ್ನು ನೋಡಿಕೊ. ನಿನ್ನ ಸೈನಿಕರಿಗೆ ಕೀರ್ತಿಯಲ್ಲಿಯೂ, ಯಶಸ್ಸಿನಲ್ಲಿಯೂ ಉತ್ಸಾಹವನ್ನು ಹುಟ್ಟಿಸು. ವಿಜಯದ ಲಾಭದಲ್ಲಿ ಅವರಿಗೆ ದೃಷ್ಟಿಯನ್ನು ಹುಟ್ಟಿಸು. ಅಪ್ರತಿಹತವಾದ ಪರಾಕ್ರಮದಿಂದ ಯುದ್ಧಮಾಡುವಂತೆ ಅವರಿಗೆ ಮೇಲ್ಪಂಗ್ತಿಯನ್ನು ಹಾಕು. ಬಂದ ಕೀರ್ತಿಯನ್ನೂ, ಲಾಭವನ್ನೂ ಸೈನಿಕರಿಗೆ ಒಪ್ಪಿಸು. ಅವರಿಗೆ ಅಧಿಪತಿಯಾದಾಗ್ಯೂ ಸೇವಕನಾಗಿರು. ಕೋಪತಾಪಗಳಿಗೆ ಅಧೀನನಾಗಬೇಡ. ಅತ್ಯಂತ ಕಷ್ಟ ಕಾಲದಲ್ಲಿಯೂ ಶಾಂತಿಯುಳ್ಳವನಾಗಿರು. ಕೋಪತಾಪಗಳು ಬಂದರೆ, ವಿಚಾರಪರತೆಯು ತಪ್ಪುವುದು. ಪರಿಣಾಮವು ಹೀಗೆಯೇ ಆಗುವುದೆಂದು ಗೊತ್ತುಮಾಡುವ ಶಕ್ತಿಯು ತಪ್ಪುವುದು. ಆದುದರಿಂದ ಕೋಪಕ್ಕೆ ಅವಕಾಶವನ್ನು ಕೊಡಬೇಡ. ನಿಷಾದ್ರವ್ಯವೂ, ಕೋಪವೂ ಎರಡೂ ಒಂದೇ. ಯುಕ್ತಾಯುಕ್ತ ವಿವೇಚನೆಯನ್ನು ತಪ್ಪಿಸುವುದರಲ್ಲಿ ಈ ಎರಡಕ್ಕೂ ಶಕ್ತಿಯುಂಟು. ಅವುಗಳಿಗೆ ಅಧೀನನಾಗಬೇಡ. ಭ್ರಾಂತಿಗೆ ಗುರಿಯಾಗಬೇಡ.

ಪೂರ್ವಾಪರಗಳನ್ನು ಚನ್ನಾಗಿ ಪರ್ಯಾಲೋಚಿಸಿ, ಕರ್ತವ್ಯವನ್ನು ನಿಷ್ಕರ್ಷಿಸು. ಸುಳ್ಳು ಮಾತುಗಳನ್ನು ಹೇಳಿ, ಕಳವಳಕ್ಕೆ ಅವಕಾಶವನ್ನುಂಟುಮಾಡತಕ್ಕವರು ಇರುವರು. ತಾವೇ ಮೋಸಹೋಗಿ, ಇಲ್ಲದ ಭಯವನ್ನು ಉಂಟುಮಾಡತಕ್ಕವರೂ ಇರುವರು. ಯುದ್ಧವು ಬಲವಾಗಿ ನಡೆಯುವಾಗ್ಯೆ, ಇಂಥಾ ಕಳವಳಗಳಿಗೆ ಅವಕಾಶವಾಗುವುದು. ಆಗ ವಿಚಾರವೂ, ಸ್ಥೈರ್ಯವೂ ಅತ್ಯಾವಶ್ಯಕ. ಸಿಂಹಗಳಂತೆ ಕಾದುವ ಶಕ್ತಿ ಒಂದೇ ಸಾಲದು. ಪೂರ್ವಾಪರಜ್ಞಾನವುಳ್ಳ ಸೇನಾನಾಯಕನಂತೆ ನಿರ್ಭಯವಾಗಿ ನಡೆದುಕೊಳ್ಳುವ ಶಕ್ತಿಯು ಇರಬೇಕು. ಯೋಧರು ಇಂಥಾ ಕಳವಳಕ್ಕೂ, ಭಯಕ್ಕೂ, ಸಂದೇಹಕ್ಕೂ ಗುರಿಯಾಗುವುದುಂಟು. ಹಾಗೆ ಅವರು ಆಗದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕ. ವಿಷಮಾವಸ್ಥೆಯು ಸನ್ನಿಹಿತವಾಗಿರುವಾಗ, ಶಾಂತಿಯಿಂದ ಪೂರ್ವಾಪರಗಳನ್ನು ಪರ್ಯಾಲೋಚಿಸಬೇಕು. ದುಡಿಕಿ ನಡೆಯಬಾರದು. ಸಂದರ್ಭಗಳಿಗೆ ಅನುಸಾರವಾದ ಏರ್ಪಾಡುಗಳು ಮಾಡಿಕೊಳ್ಳಲ್ಪಡಬೇಕು. ಶಾಂತಿಯಿಲ್ಲದವರಿಗೆ ಸಂದರ್ಭಕ್ಕೆ ಅನುಸಾರವಾದ ಉಪಾಯಗಳು ತೋರುವುದಿಲ್ಲ. ಈ ವಿಷಯದಲ್ಲಿ ಎಚ್ಚರಿಕೆಯುಳ್ಳವನಾಗಿರು. ಸೇನಾನಾಯಕ ಪದವಿಯು ಸುಲಭವಾದದ್ದಲ್ಲ. ನಿನ್ನ ಕೈಕೆಳಗಿನ ಅಧಿಕಾರಿಗಳು ನಿನ್ನಲ್ಲಿ ಅನುರಕ್ತರಾಗಿರುವಂತೆ ಮಾಡಿಕೊಳ್ಳಬೇಕು. ಸ್ವಾಭಿಮಾನವು ಎಲ್ಲರಿಗೂ ಇರುತ್ತದೆ. ಕೆಲವರಿಗೆ ವಿಶೇಷವಾಗಿರುತ್ತದೆ. ಅವರಿಗೆ ಕೋಪತಾಪಗಳು ಬರದಂತೆ ಮಾಡಿಕೊಳ್ಳಬೇಕು. ಅವರು ನಿನ್ನಲ್ಲಿ ಅನುರಕ್ತರಾಗಿರುವಂತೆಯೂ, ನಿನಗೋಸ್ಕರ ಪ್ರಾಣವನ್ನೂ ಕೂಡ ಒಪ್ಪಿಸುವಂತೆಯೂ ಮಾಡಿಕೊಳ್ಳಬೇಕು. ಇದು ಕಷ್ಟವಲ್ಲ. ಪ್ರೀತಿಯಿಂದ ಪ್ರೀತಿಯು ಹುಟ್ಟುವುದು. ನಿನ್ನ ಪ್ರಾಣಕ್ಕಿಂತಲೂ ನಿನ್ನ ಕೈಕೆಳಗಿನ ಅಧಿಕಾರಿಗಳ ಮತ್ತು ಯೋಧರ ಪ್ರಾಣವು ಹೆಚ್ಚಾಗಿದ್ದರೆ ಹೇಗೋ ಹಾಗೆ ನಡೆದುಕೊ. ಅವರಲ್ಲರೂ ತಮ್ಮ ಪ್ರಾಣಗಳಿಗಿಂತ ನಿನ್ನ ಪ್ರಾಣವು ದೊಡ್ಡದೆಂದು ತಿಳಿದುಕೊಳ್ಳುವುದಕ್ಕೆ ಉಪಕ್ರಮಿಸುವರು. ನಿನಗಿಂತಲೂ ಹೆಚ್ಚು ವಯಸ್ಸುಳ್ಳವರಾಗಿಯೂ, ಹೆಚ್ಚು ಅನುಭವವುಳ್ಳವರಾಗಿಯೂ ಇರತಕ್ಕವರು ನಿನ್ನ ಕೈಕೆಳಗಿರುವ ಸಂಭವವು ಬಂದಿರುವುದು. ಯಾವ ಕೆಲಸ ಮಾಡಬೇಕಾದಾಗ್ಯೂ, ಅವರನ್ನೆಲ್ಲಾ ಸೇರಿಸಿ, ಅವರ ಅಭಿಪ್ರಾಯವನ್ನು ತೆಗೆದುಕೊಂಡು, ಅವರ ಆಜ್ಞೆಯನ್ನು ಚಲಾಯಿಸಿದಂತೆ ನಿನ್ನ ಕೆಲಸವನ್ನು ಮಾಡು. ಅವರ ಅಭಿಪ್ರಾಯಕ್ಕೆ ವಿರೋಧವಾಗಿ ಕೆಲಸ ಮಾಡಬೇಕಾದಾಗ್ಯೂ ಹಾಗೆ

ಸ್ವತಂತ್ರಿಸಬೇಡ. ಅವರೊಡನೆ ಚರ್ಚೆಯನ್ನು ಮಾಡಿ, ನಿನ್ನ ಅಭಿಪ್ರಾಯವೇ ಅವರ ಅಭಿಪ್ರಾಯವಾಗಿರುವಂತೆ ಮಾಡಿ, ಅವರ ಆಜ್ಞೆಯನ್ನು ಚಲಾಯಿಸಿದಂತೆ ಅಧಿಕಾರವನ್ನು ಚಲಾಯಿಸು. ಅಧಿಕಾರಿಗಳ ವಿಷಯದಲ್ಲಿ ಮಾತ್ರವೇ ಹೀಗೆ ಇರಬೇಕೆಂದು ತಿಳಿದುಕೊಳ್ಳಬೇಡ. ಅಜ್ಞಾತಕುಲಗೋತ್ರರಾದ ಸಾಮಾನ್ಯ ಯೋಧರಲ್ಲಿಯೂ ಕೂಡ ಲೋಕೈಕವೀರರಾಗುವ ಶಕ್ತಿಯಿರುವುದುಂಟು. ಎಲ್ಲಾ ಯೋಧರಲ್ಲಿಯೂ ಸುಪ್ರೀತನಾಗಿರು. ಎಲ್ಲರ ಯೋಗಕ್ಷೇಮವನ್ನೂ ವಿಚಾರಿಸು. ಎಲ್ಲರ ಸಲಹೆಯನ್ನೂ ತಿಳಿದುಕೊ. ಬುದ್ಧಿಶಾಲಿಗಳಾಗಿಯೂ, ಪೂರ್ವಾಪರಜ್ಞರಾಗಿಯೂ, ವಿವೇಕವುಳ್ಳವರಾಗಿಯೂ, ಪರಾಕ್ರಮಶಾಲಿಗಳಾಗಿಯೂ ಯಾರು ಇರುವರೋ ಅವರಿಗೆ ಶಕ್ತಿಮೀರಿ ಪ್ರೋತ್ಸಾಹ ಮಾಡು. ಅನೇಕ ಮಹನೀಯರು ಸಾಮಾನ್ಯ ಜನಗಳೆಂದು ಯಾರನ್ನು ತಿಳಿದುಕೊಂಡಿದ್ದರೋ ಅಂಥಾವರಿಂದ ಅದ್ಭುತವಾದ ಸಹಾಯವನ್ನು ಹೊಂದಿರುವರು. ಯಾರಲ್ಲಿ ಯಾವ ಗುಣಾತಿಶಯಗಳಿರುವುವೋ ಅದು ಪರೀಕ್ಷೆಗೆ ಬಂದ ಹೊರತು ಗೊತ್ತಾಗುವುದಿಲ್ಲ. ಚಿನ್ನದ ಯೋಗ್ಯತೆಯು ಒರೆಗಲ್ಲಿನ ಸಂಯೋಗದಿಂದ ಗೊತ್ತಾಗುವ ಹಾಗೆ ಅದರ ಸಹಾಯವಿಲ್ಲದಿದ್ದರೆ ಗೊತ್ತಾಗುವುದಿಲ್ಲ. ಯಾರಲ್ಲಿ ಯಾವ ಶಕ್ತಿಯು ಇರುವುದೋ ಅದನ್ನು ಪರೀಕ್ಷಿಸಿ, ಉಪಯೋಗಿಸಿಕೊಳ್ಳುವುದು ಬುದ್ಧಿಶಾಲಿಗಳಿಗೆ ಮುಖ್ಯ ಕರ್ತವ್ಯ. ಈ ಕರ್ತವ್ಯವನ್ನು ಯಾರು ಹೆಚ್ಚಾಗಿ ತಿಳಿದುಕೊಂಡಿರುವರೋ ಅವರಿಗೆ ಜಯಲಕ್ಷ್ಮೀ ಪ್ರಸನ್ನತೆಯು ಹೆಚ್ಚಾಗಿ ಉಂಟಾಗುವುದು. ಒಂದು ವಿಷಯಕ್ಕೆ ನೀನು ವಿಶೇಷವಾಗಿ ಗಮನವನ್ನು ಕೊಡಬೇಕು. ಯಾರು ಏನು ಹೇಳಿದಾಗ್ಯೂ ಅದನ್ನು ಕೇಳು. ಕೇಳುವ ವಿಷಯದಲ್ಲಿ ನಿನ್ನ ಕಿವಿಗೆ ಸಂಪೂರ್ಣವಾದ ಸ್ವಾತಂತ್ರ್ಯವು ಕೊಡಲ್ಪಡಲಿ. ಕೇಳಿದ ಮಾತುಗಳೆಲ್ಲಾ ನಿಜವೆಂದು ನಂಬಬೇಡ. ಚನ್ನಾಗಿ ಪರಿಶೀಲಿಸಿ, ನೀನು ಕೇಳಿದ ಮಾತು ನಿಜವೆಂದು ಸಮರ್ಥಕವಾದ ರುಜುವಾತು ಬಂದರೆ, ಅನಂತರ ಆ ಮಾತಿನ ಆಧಾರದ ಮೇಲೆ ಕೆಲಸ ಮಾಡು. ದುಡುಕಬೇಡ. ಕೇಳುವ ವಿಷಯದಲ್ಲಿ ಎಷ್ಟು ಸ್ವಾತಂತ್ರ್ಯವನ್ನು ವಹಿಸಬಹುದೋ, ಕೆಲಸ ಮಾಡುವ ವಿಷಯದಲ್ಲಿ ಅಷ್ಟು ಸ್ವಾತಂತ್ರ್ಯವನ್ನು ವಹಿಸಕೂಡದು. ಮಾತನಾಡುವ ವಿಷಯದಲ್ಲಿಯೂ ಎಚ್ಚರಿಕೆಯುಳ್ಳವನಾಗಿರಬೇಕು. ಮನಸ್ಸಿಗೆ ಅನೇಕ ವಿಷಯಗಳು ಬರುವುವು. ಮನಸ್ಸಿಗೆ ತೋರಿದ್ದೆಲ್ಲಾ ವಾಚಾ ಆಡುವುದಕ್ಕೂ, ಕಾರ್ಯತಃ ಮಾಡುವುದಕ್ಕೂ ಅರ್ಹವಾಗಿರುವುದಿಲ್ಲ. ಆದುದರಿಂದ ಪೂರ್ವಾಪರಗಳನ್ನು ಪರ್ಯಾಲೋಚಿಸದೆ,

ಪರಿಣಾಮ ಫಲವನ್ನು ಗೊತ್ತುಮಾಡಿಕೊಳ್ಳದೆ ಮಾತನಾಡಬಾರದು. ಮತ್ತು ಕೆಲಸವನ್ನು ಮಾಡಬಾರದು. ಹಾಗೆ ಮಾತನಾಡುವುದರಿಂದಲೂ, ಕೆಲಸ ಮಾಡು ವುದರಿಂದಲೂ ಕೆಲಸ ಕೆಟ್ಟುಹೋಗುವುದುಂಟು. ಅನುಭವಶಾಲಿಗಳು ಹೇಳುವು ದನ್ನು ಕೇಳು. ಅವರ ಅಭಿಪ್ರಾಯಗಳನ್ನು ತಿಳಿದುಕೊ. ಅದರ ಮೇಲೆ ಆವ ಶ್ಯಕವಾಗಿ ತೋರಿದರೆ, ಅವರೊಡನೆ ವಿನಯದಿಂದ ಚರ್ಚೆಯನ್ನು ಮಾಡು, ಸಂದೇ ಹಗಳೇನಾದರೂ ಇದ್ದರೆ, ಅವುಗಳನ್ನು ಶೃತಪಡಿಸು. ಯಾವುದು ಯುಕ್ತವೆಂದು ತೋರುವುದೋ ಅದನ್ನು ಎಲ್ಲರಿಗೂ ವಿಜ್ಞಾಪಿಸಿ, ಎಲ್ಲರ ಸಮ್ಮತಿಯೊಡನೆ ಕೆಲಸ ವನ್ನು ಮಾಡುವುದಕ್ಕೆ ಉಪಕ್ರಮಿಸು. ಹೀಗೆ ಮಾಡುವುದು ಅಸಾಧ್ಯವಲ್ಲ. ನ್ಯಾಯವಾದ ಸಲಹೆಗೆ ಎಲ್ಲರೂ ಒಪ್ಪುವರು."

"ಪ್ರೀತಿಯಿಂದ ಪ್ರೀತಿಯೂ, ದ್ವೇಷದಿಂದ ದ್ವೇಷವೂ ಹುಟ್ಟುವಂತೆ ನಂಬಿ ಕೆಯಿಂದ ನಂಬಿಕೆಯು ಹುಟ್ಟುವುದು. ಕಳ್ಳರಲ್ಲಿ ನಂಬಿಕೆಯನ್ನು ಇಟ್ಟು, ಬೆಲೆ ಯುಳ್ಳ ಪದಾರ್ಥಗಳನ್ನು ಒಪ್ಪಿಸಿದಾಗ್ಯೂ, ಅವರೂ ಕೂಡ ನಂಬಿದವರಿಗೆ ಎರಡು ಬಗೆಯುವುದಿಲ್ಲ. ಪ್ರಾಮಾಣಿಕರನ್ನು ನಂಬಿದರೆ, ಯಾವ ಬಾಧಕವೂ ಉಂಟಾ ಗುವುದಿಲ್ಲ. ನೀನು ಮನಸ್ಸಿನಲ್ಲಿ ಒಂದು ವಿಧವಾಗಿಯೂ, ವಾಚಾ ಒಂದು ವಿಧ ವಾಗಿಯೂ, ಕಾರ್ಯದಲ್ಲಿ ಒಂದು ವಿಧವಾಗಿಯೂ ಇದ್ದರೆ, ಇತರರೂ ನಿನ್ನಲ್ಲಿ ಹಾಗೆಯೇ ಇರುತ್ತಾರೆ. ಆ ರೀತಿಯಲ್ಲಿ ಇರಬೇಡ. ಯಾರು ಆಪ್ತರಾಗಿಯೂ, ಜವಾಬ್ದಾರರಾಗಿಯೂ ಇರುವರೋ ಅವರಲ್ಲಿ ನಂಬಿಕೆಯನ್ನು ಇಡು. ಉದ್ಯು ಕ್ತವಾದ ಕೆಲಸಗಳ ಪೂರ್ವಾಪರಗಳನ್ನು ಸಮಗ್ರವಾಗಿ ತಿಳಿಸು. ಅವರ ಸಮ್ಮ ತಿಯನ್ನು ಪಡೆ. ಅನಂತರದಲ್ಲಿ ಕೆಲಸವನ್ನು ಜಾರಿಗೆ ತೆಗೆದುಕೊಂಡು ಬಾ. ಹೀಗೆ ಮಾಡುವುದರಿಂದ ಅವರ ಹುಕುಂನ್ನು ನೀನು ಜಾರಿಗೆ ತರುತ್ತೀ ಎಂದು ಅವರು ತಿಳಿದುಕೊಂಡು, ನಿನ್ನಲ್ಲಿ ಅನುರಕ್ತರಾಗುವುದಕ್ಕೆ ಅವಕಾಶವಾಗುವುದು. ಅವರೊಡನೆ ಪೂರ್ವಾಪರಗಳನ್ನು ಧಾರಾಳವಾಗಿ ಚರ್ಚೆಮಾಡುವುದರಿಂದ, ನಿನ್ನ ಅಭಿಪ್ರಾಯಗಳಲ್ಲಿ ನ್ಯೂನಾತಿರಿಕ್ತಗಳಿದ್ದರೆ, ಅದನ್ನು ಅವರು ತಿದ್ದುವರು. ಒಂದು ವೇಳೆ ಉದ್ದಿಷ್ಟವಾದ ಕೆಲಸವು ಕೆಟ್ಟುಹೋದರೆ, ಅವರು ನಿನ್ನನ್ನು ನಿಂದಿಸುವುದಿಲ್ಲ. ಒಂದು ವಿಷಯದಲ್ಲಿ ನೀನು ತುಂಬಾ ಎಚ್ಚರಿಕೆಯುಳ್ಳವನಾಗಿರಬೇಕು. ಎಲ್ಲ ರನ್ನೂ ಸ್ತುತಿಸುತ್ತಾ, ಭೇದಭಾವಗಳನ್ನು ಹುಟ್ಟಿಸುತ್ತಾ ಇರತಕ್ಕ ಕಲಹಪ್ರಿ ಯರು ಎಲ್ಲೆಲ್ಲಿಯೂ ಇರುತ್ತಾರೆ. ಅಂಥಾವರನ್ನು ಗೊತ್ತುಮಾಡಿಕೊಳ್ಳುವುದು

ಪ್ರಥಮ ಕರ್ತವ್ಯ: ಅವರು ಹೇಳುವುದನ್ನು ಕೇಳಬೇಕು. ನಮಗೂ, ನಮ್ಮೊಡನೆ ಕೆಲಸ ಮಾಡತಕ್ಕವರಿಗೂ ಪರಸ್ಪರ ದ್ವೇಷವನ್ನು ಉಂಟುಮಾಡುವುದಕ್ಕೆ ಸಾಧಕವಾಗುವುದೆಂದು ತೋರಿದರೆ, ಅಂಥಾ ಮಾತುಗಳನ್ನು ಅವರೊಡನೆ ಆಡಬಾರದು. ಪ್ರತಿ ಒಂದು ಮಾತನ್ನೂ ಇಂಥಾವರೊಡನೆ ಮಾತನಾಡುವಾಗ, ತೂಕಮಾಡಿ ಆಡಬೇಕು. ನಾವು ಆಡತಕ್ಕ ಮಾತುಗಳು ನಮಗೂ, ನಮ್ಮ ಮಿತ್ರರಿಗೂ ಪರಸ್ಪರ ದ್ವೇಷವನ್ನು ಹುಟ್ಟಿಸುವುದಕ್ಕೆ ಲೇಶವೂ ಅವಕಾಶವಿಲ್ಲದಂತೆ ನೋಡಿಕೊಳ್ಳಬೇಕು. ಹಾಗೆ ಇಲ್ಲದಿದ್ದರೆ, ಈ ದುರಾತ್ಮರು ನಮಗೂ, ನಮ್ಮ ಆಪ್ತರಿಗೂ ದ್ವೇಷವನ್ನು ತಂದುಹಾಕುವರು. ಇಂಥಾ ದ್ವೇಷಕ್ಕೆ ಅವಕಾಶವಿಲ್ಲದಂತೆ ನೋಡಿಕೊಳ್ಳಬೇಕು. ಇಡುಮಿಾನಿಯಸ್ಸನು ಪ್ರಾಮಾಣಿಕನು. ಆದಾಗ್ಯೂ ಇವನಲ್ಲಿ ಅನುರಕ್ತರಾದ ನೆಸ್ಟರು ಮೊದಲಾದವರೆಲ್ಲರೂ ಶತ್ರುಮಂಡಲಿಗೆ ಸೇರಿ, ಇವನ ಮೇಲೆ ಯುದ್ಧಕ್ಕೆ ಬರುವಂತೆ ಮಾಡಲ್ಪಟ್ಟಿತು. ಚನ್ನಾಗಿ ಪರಿಶೀಲಿಸಿದರೆ, ಇವನ ಹಿತಚಿಂತಕರು ಇವನ ಶತ್ರುಗಳಾದದ್ದಕ್ಕೆ 'ಇಂಥಾವರು ಕಲಹಪ್ರಿಯರು, ಇಂಥಾವರು ಅಲ್ಲ' ಎಂದು ಪರಿಶೀಲಿಸದೆ, ಜನಗಳನ್ನು ನಂಬಿದ್ದೇ ಇದಕ್ಕೆ ಮುಖ್ಯ ಕಾರಣವೆಂದು ಗೊತ್ತಾಗುತ್ತದೆ. ಇಡುಮಿಾನಿಯಸ್ಸನು ಮಾಡಿದ ತಪ್ಪು ನೀನೂ ಮಾಡಿದ ಪಕ್ಷದಲ್ಲಿ, ಅವನಿಗೆ ಸನ್ನಿಹಿತವಾದ ಅನರ್ಥಗಳು ನಿನಗೂ ತಪ್ಪುವುದಿಲ್ಲ."

ಈ ರೀತಿಯಲ್ಲಿ ಮಿನರ್ವಳು ಅಪ್ಪಣೆ ಕೊಡಿಸಿದ್ದನ್ನು ಕೇಳಿ 'ಇಡುಮಿಾನಿಯಸ್ಸನು ಬಹಳ ಪ್ರಾಜ್ಞನು. ಇವನಲ್ಲಿಯೂ ಇಂಥಾ ದೋಷವಿರುವುದೇ ?' ಎಂದು ಸಂದೇಹವು ಟೆಲಿಮಾಕಸ್ಸನಿಗೆ ಉಂಟಾಯಿತು. ಅವನ ಮುಖಭಾವದಿಂದಲೇ ಅವನ ಮನೋಭಾವವನ್ನು ತಿಳಿದುಕೊಂಡು, ಮಿನರ್ವಳು ಹೇಳಿದ್ದೇನಂದರೆ:—

"ನೀನು ಬುದ್ಧಿಶಾಲಿಯೇ ಹೊರತು, ಅನುಭವಶಾಲಿಯಲ್ಲ. ಇಡುಮಿಾನಿಯಸ್ಸನಲ್ಲಿ ನಿನಗೆ ನಿಸರ್ಗವಾದ ಪ್ರೀತಿಯು ಇರುವುದು. ಈ ಪ್ರೀತಿಯ ದೆಸೆಯಿಂದ ಅವನ ನ್ಯೂನಾತಿರಿಕ್ತಗಳು ನಿನಗೆ ತಿಳಿಯದೆ ಇರುವುದು. ಅದು ಹೇಗಾದರೂ ಇರಲಿ. ಮಿಠಾಯಿ ಮೊದಲಾದ ಮಧುರ ಪದಾರ್ಥಗಳು ಇರುವ ಕಡೆ ನೊಣಗಳೇ ಮೊದಲಾದವುಗಳು ಗುಂಪುಗುಂಪಾಗಿ ಹೇಗೆ ಬರುವುವೋ ಹಾಗೆ ಔದಾರ್ಯವುಳ್ಳ ಪ್ರಭುವಿನ ಸಮಿಾಪಕ್ಕೆ ಅನೇಕ ಇಂದ್ರಜಾಲ, ಮಹೇಂದ್ರಜಾಲ

ವಿದ್ಯೆಗಳುಳ್ಳ ಸ್ತುತಿಪಾಠಕರು ಬರುವರು. ಇಡುಮಿಾನಿಯಸ್ಸನು ಆಗರ್ಭ ಶ್ರೀಮಂತನು. ಜನ್ಮವನ್ನೆತ್ತಿದ್ದು ಮೊದಲುಗೊಂಡು ಅವನ ಅರಮನೆಯಲ್ಲಿರತಕ್ಕವರೆಲ್ಲರೂ ಅವನ ಮನಸ್ಸಿಗೆ ಸಂತೋಷವಾಗುವಂತೆ ಮಾತನಾಡುವುದರಲ್ಲಿಯೂ, ನಡೆಯುವುದರಲ್ಲಿಯೂ ಬಹಳ ಬದ್ಧಾದರರಾಗಿದ್ದರು. ಯಾವಾಗ್ಯೂ ಸ್ತುತಿಪಾಠಗಳನ್ನು ಕೇಳುತ್ತಲಿರುವವರಿಗೆ ನಿರ್ಭಯವಾಗಿ ದೋಷೋದ್ಘಾಟನೆಗಳನ್ನು ಮಾಡಿದರೆ, ಅದು ರುಚಿಸುವುದೇ? ಪ್ರಾಯಕವಾಗಿ ಧೊರೆಗಳು ಪರಾಧೀನರು. ರಾಜಕಾರ್ಯಗಳಿಗೆ ಸಹಾಯ ಮಾಡುವುದಕ್ಕೆ ಇವರಿಗೆ ಮಂತ್ರಿಗಳ ಸಹಾಯವು ಬೇಕು. ಹಾಗೆಯೇ ಪ್ರತಿ ಒಂದು ಸ್ವಕಾರ್ಯವನ್ನು ಮಾಡಿಕೊಳ್ಳುವುದಕ್ಕೂ ಊಳಿಗದವರು ಬೇಕು. ಇವನಿಂದ ಪ್ರಯೋಜನವನ್ನು ಹೊಂದಬೇಕೆಂಬ ಜನಗಳು ಇವನ ಸೇವೆಗೆ ಸಿಕ್ಕುವರೇ ಹೊರತು, ಇವನಲ್ಲಿ ಇರತಕ್ಕ ನ್ಯೂನಾತಿರಿಕ್ತಗಳನ್ನು ನಿರ್ಭಯವಾಗಿಯೂ, ನಿರ್ದಾಕ್ಷಿಣ್ಯವಾಗಿಯೂ ತೋರಿಸಿ, ಇವನನ್ನು ಉದ್ಧರಿಸಬೇಕೆಂಬ ಜನಗಳು ಇವನಿಗೆ ದೊರೆಯುವುದು ಅಪೂರ್ವ. ಧೊರೆಯ ಸಮಿಾಪದಲ್ಲಿರತಕ್ಕವರೆಲ್ಲಾ ಪ್ರಾಯಕವಾಗಿ ಮುಖವಾಡಗಳನ್ನು ಹಾಕಿಕೊಂಡು ವೇಷಧಾರಿಗಳಾಗಿರುವರು. ಅವರನ್ನು ವಂಚಿಸುವ ಕೆಲಸಗಳನ್ನು ಮಾಡುವುದರಲ್ಲಿ ತಾವು ನಿರ್ಪಂಚಕರಾಗಿದ್ದರೆ ಹೇಗೋ ಹಾಗೆ ವಂಚಿಸುವರು. ನಾಟಕಶಾಲೆಗಳಲ್ಲಿ ಪಾತ್ರಗಳು ಸ್ತ್ರೀಪುರುಷ ವೇಷಗಳನ್ನು ಧರಿಸಿಕೊಂಡು, ನಾಟಕದ ನಾಯಕರು ಹೇಗೆ ನಡೆಯುವರೋ ಅದನ್ನು ಅಭಿನಯಿಸುವರು. ಇವರ ಅಭಿನಯಕ್ಕಿಂತಲೂ ಪ್ರಭುಗಳ ಆಸ್ಥಾನದಲ್ಲಿರತಕ್ಕ ನೌಕರರ ಪೈಕಿ ಸಮರ್ಥರಾದವರ ಅಭಿನಯವು ಹೆಚ್ಚಾಗಿರುವುದು. ನಾಟಕಶಾಲೆಗಳಲ್ಲಿ ನ್ಯೂನಾತಿರಿಕ್ತಗಳು ತೋರಬಹುದು. ಪ್ರಭುಗಳ ಆಸ್ಥಾನದಲ್ಲಿ ನ್ಯೂನಾತಿರಿಕ್ತಗಳಿಗೆ ಅವಕಾಶವಿಲ್ಲದಂತೆ ನಡೆದುಕೊಳ್ಳುವ ನೌಕರರಿರುವರು. ಅನೃತವು ಸತ್ಯವಾಗಿದ್ದರೆ ಹೇಗೋ ಹಾಗೆ ಮಾತನಾಡುವುದರಲ್ಲಿ ಅವರು ನಿಸ್ಸೀಮರು. ಹರಿಶ್ಚಂದ್ರನ ಗುಣಾತಿಶಯಗಳೂ, ಬೃಹಸ್ಪತಿಯ ಮೇಧಾಶಕ್ತಿಯೂ ಇವೆರಡೂ ಇವರಲ್ಲಿ ಪರಾಕಾಷ್ಠದೆಸೆಯನ್ನು ಹೊಂದಿರುವುವು. ರಾಜಸೇವಾಧುರೀಣರಾದವರಲ್ಲಿ ದುರ್ಗುಣಗಳೇ ಇರುವುದಿಲ್ಲವೆಂದು ತೋರುವುದು. ಅವರು ಆಡತಕ್ಕ ಮಾತೂ, ಅವರು ಮಾಡತಕ್ಕ ಕೆಲಸಗಳೂ ನಿರ್ದುಷ್ಟವಾಗಿರುವಂತೆ ತೋರುವುದು. ಅವರ ಮನೋಭಾವವೂ ಹಾಗೆಯೇ ನಿರ್ದುಷ್ಟವಾಗಿರುವಂತೆ ತೋರಬೇಕಾದರೆ ಹೇಗೋ ಹಾಗೆ ನಡೆದುಕೊಳ್ಳುವರು. ಈ ಅದ್ಭುತವಾದ

ಶಕ್ತಿಯು ಅರಮನೆಯ ನೌಕರಿಯಲ್ಲಿ ತಯಾರಾದವರಿಗೆ ಇರುವಷ್ಟು ಇತರರಿಗೆ ಇರುವುದಿಲ್ಲ. ಈ ವಿಷಯವನ್ನು ಗೊತ್ತುಮಾಡಿಕೊಳ್ಳುವುದು ಕಷ್ಟವಲ್ಲ. ಇಡುಮಾನಿಯಸ್ಸನ ಪರಿವಾರ ದೇವತೆಗಳು ಅವನ ಸನ್ನಿಧಿಯಲ್ಲಿ ಹೇಗೆ ಇರುವರೋ ಅದನ್ನು ನೀನು ನೋಡಿರುವಿ. ಇವರು ಅರಮನೆಯಿಂದ ಹೊರಟು ಹೋಗಿ, ತಮ್ಮ ಬಂಧುಮಿತ್ರರೊಡನೆ ಸೇರಿಕೊಂಡು, ಪ್ರಭುವಿನ ಸಮೀಪದಲ್ಲಿ ಇದೇವೆ ಎಂಬ ಭಯವನ್ನು ಬಿಟ್ಟು ಇರುವಾಗ್ಯೆ, ಅವರು ಹೇಗೆ ನಡೆದುಕೊಳ್ಳುವರೋ, ಪ್ರಭುವಿನ ವಿಷಯದಲ್ಲಿಯೂ, ಅವನ ಪರಿವಾರ ದೇವತೆಗಳ ವಿಷಯದಲ್ಲಿಯೂ ಇವರಿಗೆ ಯಾವ ಅಭಿಪ್ರಾಯವು ಇರುವುದೋ ಅದನ್ನು ವೇಷಾಂತರಗಳಿಂದ ಹೋಗಿ ಪರಿಶೀಲಿಸು. ಆಗ ಈ ವೇಷಧಾರಿಗಳು ಅರಮನೆಯಲ್ಲಿ ಹೇಗೆ ನಡೆದುಕೊಳ್ಳುವರೋ, ಅವರ ಸ್ವಂತ ಮನೆಗಳಲ್ಲಿ ಹೇಗೆ ನಡೆದುಕೊಳ್ಳುವರೋ, ವೇಷಧಾರಿಗಳಾಗಿರುವಾಗ, ಇವರ ನಡೆನುಡಿಗಳು ಹೇಗೆ ಇರುವುವೋ, ವೇಷವನ್ನು ತೆಗೆದುಹಾಕಿದ ಮೇಲೆ ಹೇಗೆ ಇರುವುವೋ ಅವುಗಳೆಲ್ಲಾ ಗೊತ್ತಾಗುವುವು. ಶಕಾಪುರುಷರಾದ ಅನೇಕ ಪ್ರಭುಗಳು ಜನಗಳ ನಿಸರ್ಗವಾದ ಶೀಲಸ್ವಭಾವಗಳನ್ನು ತಿಳಿದುಕೊಳ್ಳುವುದಕ್ಕೋಸ್ಕರ ಪ್ರಭುವಿಗೆ ಸಹಜವಾದ ವೇಷಗಳನ್ನು ಪರಿತ್ಯಾಗಮಾಡಿ, ಸಾಮಾನ್ಯ ಜನಗಳಂತೆ ವೇಷವನ್ನು ಧರಿಸಿಕೊಂಡು, ಸಂಚಾರವನ್ನು ಮಾಡುತ್ತಾ, ತಮ್ಮಲ್ಲಿ ಆಪ್ತರಾದವರ ಮತ್ತು ಅನಾಪ್ತರಾದವರ ರಾಗದ್ವೇಷಗಳ ಪ್ರಮಾಣವನ್ನು ಗೊತ್ತುಮಾಡಿಕೊಳ್ಳುತ್ತಿದ್ದರು. ಪ್ರಭುಗಳು ಸಾಮಾನ್ಯವಾಗಿ ಯಥಾಜಾತರಾಗಿರುತ್ತಾರೆ. ಬೆಳ್ಳಗಿರುವುದೆಲ್ಲಾ ಹಾಲು ಎಂದು ತಿಳಿದುಕೊಳ್ಳುವರು. ಆತ್ಮಾರ್ಥವಾಗಿ ಮಾಡಲ್ಪಟ್ಟ ಸ್ತುತಿಗಳೆಲ್ಲಾ ಯಥಾರ್ಥವೆಂದು ತಿಳಿದುಕೊಳ್ಳುವರು. ದೋಷವನ್ನು ಉಸ್ಘಾಟಿಸತಕ್ಕವರೆಲ್ಲಾ ಶತ್ರುಗಳೆಂದು ತಿಳಿದುಕೊಳ್ಳುವರು. ತಮ್ಮ ಬಳಿಗೆ ಬರತಕ್ಕ ಬಹುಜನಗಳು ವೇಷಧಾರಿಗಳೆಂಬ ಜ್ಞಾನವು ಇವರಿಗೆ ಇರುವುದಿಲ್ಲ. ಇವರಿಗೆ ಕಣ್ಣುಗಳಿದ್ದಾಗ್ಯೂ, ನರ್ಮಸಚಿವರ ಕಣ್ಣುಗಳಿಂದ ಇವರು ನೋಡುವರು. ಅವರ ಕಿವಿಗಳಿಂದ ಇವರು ಕೇಳುವರು. ಅವರ ಮನಸ್ಸಿನ ಸಹಾಯದಿಂದ ಇವರು ಪರ್ಯಾಲೋಚಿಸುವರು. ಅವರ ನೆರಳಾಗಿದ್ದರೆ ಹೇಗೋ ಹಾಗೆ ತಾವು ನಡೆದುಕೊಳ್ಳುವರು. ಈ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ನಿನಗೆ ಬೇಕಾದಷ್ಟು ಅವಕಾಶವು ಇತ್ತು. ಆದಾಗ್ಯೂ ಈ ವಿಷಯಕ್ಕೆ ನಿನ್ನ ಮನಸ್ಸು ಕೊಡಲ್ಪಡಲಿಲ್ಲ. ಪ್ರತ್ಯಕ್ಷವಾದ ವಿಷಯಗಳೂ ಕೂಡ ಹೇಗೆ

ಕಾಣುವುದೋ ಹಾಗೆ ಇರುವುದು ಅಪೂರ್ವ. ಅದನ್ನು ಪರೀಕ್ಷಿಸಿ ನೋಡಬೇಕು. "ಒಬ್ಬ ಪ್ರಭುವು ಕಾರ್ಯಾಂತರದಲ್ಲಿ ಆಸಕ್ತನಾಗಿದ್ದು, ರಾತ್ರಿ ಸುಮಾರು 1 ಗಂಟೆ ಸಮಯಕ್ಕೆ ಅರಮನೆಗೆ ಹೋಗಿ, ಭೋಜನವನ್ನು ತೀರಿಸಿಕೊಂಡು, ತನ್ನ ಅಂತಃಪುರಕ್ಕೆ ಹೋದನು. ತನ್ನ ಹೆಂಡತಿಯ ಮಗ್ಗುಲಲ್ಲಿ ಒಬ್ಬ ಊಳಿಗದವನು ಮಲಗಿದ್ದನು. ಇದನ್ನು ನೋಡಿದ ಕೂಡಲೆ, ಅವನ ಕೋಪವು ಅತ್ಯುತ್ಕಟಾವಸ್ಥೆಗೆ ಬಂದಿತು. ಅವರಿಬ್ಬರನ್ನೂ ತಕ್ಷಣದಲ್ಲಿಯೇ ಸಂಹರಿಸಬೇಕೆಂಬ ಭಾವನೆಯು ಉಂಟಾಯಿತು. ಅಷ್ಟರಲ್ಲಿಯೇ ಪ್ರತ್ಯಕ್ಷವಾದದ್ದನ್ನೂ ಕೂಡ ಪರೀಕ್ಷಿಸಿ ನೋಡಬೇಕು" ಎಂದು ತನ್ನ ಮಂತ್ರಿಯು ಹೇಳುತ್ತಿದ್ದದ್ದು ಸ್ಮೃತಿಪಥಕ್ಕೆ ಬಂದಿತು. ಕೂಡಲೆ ಮಂತ್ರಿಯನ್ನು ಕರೆಸಿದನು. ಈ ವಿದ್ಯಮಾನಗಳನ್ನು ಅವನಿಗೆ ತೋರಿಸಿದನು. ಇವರಿಬ್ಬರೂ ಸಿರಪರಾಧಿಗಳೆಂದು ಹೇಳಿ, ಅಲ್ಲಿಯೇ ಒಂದು ತೆರೆಯ ಹಿಂದುಗಡೆ ಧೊರೆಯನ್ನು ನಿಲ್ಲಿಸಿ. ಮಂಚದ ಕೆಳಕ್ಕೆ ಹೋಗಿ, ತನ್ನ ಕತ್ತಿಯ ಕೊನೆಯು ಊಳಿಗದವನಿಗೆ ತಗಲುವಂತೆ ಮಾಡಿದನು. ಅವನು ತಕ್ಷಣವಲ್ಲಿಯೇ ಎದ್ದು "ಮಹಾರಾಣಿಯು ತನ್ನ ಮಗ್ಗುಲಲ್ಲಿ ನಿದ್ರೆಮಾಡುತ್ತಿದ್ದದ್ದನ್ನು ನೋಡಿ, ಗಾಬರಿ ಬಿದ್ದು, ನಾನು ಎಂಥಾ ಪಾಪಿ! ಈ ಹಾಸಿಗೆಯಲ್ಲಿ ಮಲಗಿದರೆ ಹೇಗಿರುವುದೋ ನೋಡೋಣವೆಂದು ಇದರ ಮೇಲೆ ಮಲಗಿದೆನು. ನಿದ್ದೆಯು ಬಂದಿತು. ಮಹಾರಾಣಿಯು ನಾನೇ ಮಹಾರಾಜನೆಂದು ತಿಳಿದುಕೊಂಡು, ಇಲ್ಲಿ ಬಂದು ಮಲಗಿರಬೇಕು. ಮಹಾರಾಜನು ಇನ್ನೂ ಬರದೆ ಇರಬೇಕು. ಈಕೆಗೆ ನಾನು ಊಳಿಗದವನೆಂದು ತಿಳಿದಿದ್ದರೆ ಏನಾಗುತ್ತಿತ್ತು? ಮಹಾರಾಜನು ಬಂದಿದ್ದರೆ ಏನು ಗತಿಯಾಗುತ್ತಿತ್ತು? ಜಗದೀಶ್ವರನೇ ನನ್ನನ್ನು ರಕ್ಷಿಸಿದನು" ಎಂದು ಹೇಳಿ, ಓಡಿಹೋಗುವುದಕ್ಕೆ ಪ್ರಯತ್ನ ಮಾಡುವುದರೊಳಗಾಗಿ ಮಂತ್ರಿಯ ಕತ್ತಿಯ ಕೊನೆಯು ಮಹಾರಾಣಿಗೆ ತಗುಲಿತು. ಆಕೆಯು ಎದ್ದು, "ಈ ಊಳಿಗದವನು ತನ್ನ ಕೊಠಡಿಯಲ್ಲಿರುವುದನ್ನು ನೋಡಿ, ಈ ಅಕಾಲದಲ್ಲಿ ನನ್ನ ಕೆಸಿಪಡಿಗೆ ಘತಕ್ಕೆ ಬಂದೆ? ನೀನು ಇಲ್ಲಿಗೆ ಬರುವುದಕ್ಕೆ ಕಾರಣವೇನು? ಮಹಾರಾಜರು ಎಲ್ಲಿ?" ಎಂದು ಕೇಳಿದಳು. ಅವನು ನಡೆದ ವಿದ್ಯಮಾನವನ್ನು ಹೇಳಲು, ಬಹಳವಾಗಿ ಆಗ್ರಹ ಮಾಡುತ್ತಾ ಇರಲಾಗಿ, ಮಂತ್ರಿಯೂ, ಧೊರೆಯೂ ಏಕಾಂತ ಸ್ಥಳದಿಂದ ಹೊರಕ್ಕೆ ಹೊರಟು ಹೋದರು. ಸ್ವಲ್ಪ ಹೊತ್ತು ಬಿಟ್ಟುಕೊಂಡು ಮಹಾರಾಜನು ಬರಲು, ಈ ಊಳಿಗದವನ ವೃತ್ತಾಂತ

ವನ್ನು ಮಹಾರಾಣಿಯು ತಿಳಿಸಿ, ಅವನಿಗೆ ದಂಡನೆಯನ್ನು ಮಾಡಬೇಕೆಂದು ಶೃತಪಡಿಸಿದಳು. ಅವನು ಜೇಲೆ ಕಡೆಗೆ ವರ್ಗಮಾಡಲ್ಪಟ್ಟನು. ಪ್ರಾಯಕವಾಗಿ ಧೊರೆಗಳ ಅವಸ್ಥೆಯು ಹೀಗೆಯೇ ಇರುವುದು. ಅವರ ಪರಿವಾರ ದೇವತೆಗಳೂ ಹೀಗೆಯೇ ಇರುವರು. ಅವರನ್ನು ಆಕ್ಷೇಪಿಸತಕ್ಕವರು ಇದಕ್ಕಿಂತ ಉತ್ತಮವಾಗಿರುವುದು ಅಪೂರ್ವ. ಎಲ್ಲರೂ ಅವರ ಸ್ವಭಾವಕ್ಕೆ ಅನುಸಾರವಾಗಿ ನಡೆಯುವರು. ಸ್ವಭಾವವು ಜನ್ಮಾಂತರ ಸುಕೃತಕ್ಕೂ, ಈ ಜನ್ಮದ ಸಂದರ್ಭಗಳಿಗೂ ಅನುಸಾರವಾಗಿರುವುದು. ಇಂದ್ರಿಯವ್ಯಾಪಾರಗಳೂ, ಕೋಪತಾಪಾದಿಗಳೂ ಮಾತಾಪಿತೃಗಳಲ್ಲಿ ಹೇಗಿದ್ದವೋ ಹಾಗೆ ಮಕ್ಕಳಲ್ಲಿಯೂ ಪರಿಣಮಿಸುವುವು. ಬೀಜದಂತೆ ವೃಕ್ಷವೆಂಬ ಗಾಥೆಯು ಇರುವುದು. ಇದು ಸುಳ್ಳಲ್ಲ. ಇಡುಮೀನಿಯಸ್ಸನಲ್ಲಿ ಮೈನಾಸನ ಗುಣಾತಿಶಯಗಳು ಇರುವುವೋ ಹಾಗೆಯೇ ಅವನ ತಂದೆತಾಯಿಗಳಿಂದ ಬಂದ ನ್ಯೂನಾತಿರಿಕ್ತಗಳು ಇರುವುವು. ದುಡಿಕಿ ನಡೆಯುವುದೇ ಮೊದಲಾದ ನ್ಯೂನತೆಗಳು ತಂದೆತಾಯಿಗಳಿಂದಲೂ, ಸಹವಾಸ ದೋಷದಿಂದಲೂ ಬರುವುವು. ಗುಣದೋಷಗಳು ಎಲ್ಲರಿಗೂ ಹೀಗೆ ಸಂಭವಿಸುವುವು. ಯೂಲಿಸಸ್ಸನ ಗುಣಾತಿಶಯಗಳು ನಿನ್ನಲ್ಲಿ ಹೇಗೆ ಪರಿಪೂರ್ಣವಾಗಿದ್ದಾಗ್ಯೂ, ಅನೇಕ ಸಂದರ್ಭಗಳಲ್ಲಿ ನೀನು ನಡೆದುಕೊಂಡದ್ದನ್ನು ಈಗ ನಿನ್ನ ಮನಸ್ಸು ಒಪ್ಪುವುದೇ ? ಪರೀಕ್ಷಿಸಿಕೊ. ಕೆಲಿಪ್ಸೋ ದ್ವೀಪದಲ್ಲಿ ಮೆಂಟರನ ವಿಷಯದಲ್ಲಿ ಹೇಗೆ ನಡೆದುಕೊಂಡೆಯೋ ಅದನ್ನು ಸ್ಮರಿಸಿಕೊ. ಹಾಗೆ ಸ್ಮರಿಸಿಕೊಂಡರೆ, ಜನಗಳು ಎಷ್ಟು ವಿದ್ಯಾವಂತರಾದಾಗ್ಯೂ, ಎಂಥಾ ಪದವಿಯಲ್ಲಿದ್ದಾಗ್ಯೂ, ಎಷ್ಟು ವಿವೇಕಶಾಲಿಗಳಾದಾಗ್ಯೂ ಕೆಲವು ಸಂದರ್ಭಗಳಲ್ಲಿ ಹೇಗೆ ಉನ್ಮತ್ತರಂತೆ ನಡೆದುಕೊಳ್ಳುವರೋ ಅದು ಗೊತ್ತಾಗುತ್ತದೆ. ಪ್ರಭುಗಳು ಪದವಿಯಲ್ಲಿ ದೊಡ್ಡವರಾದಾಗ್ಯೂ, ನಡೆನುಡಿಗಳಲ್ಲಿ ಸಾಮಾನ್ಯವಾದ ಪ್ರಜೆಗಳಂತೆಯೇ ಇರುವರು. ಕೆಲವು ಸಂದರ್ಭಗಳಲ್ಲಿ ಸಾಮಾನ್ಯ ಜನಗಳಲ್ಲಿ ಕೆಲವರು ಹೆಚ್ಚು ಜಿತೇಂದ್ರಿಯತ್ವವನ್ನು ತೋರಿಸುವುದುಂಟು. ಅಂಥಾ ಸಾಮಾನ್ಯ ಜನಗಳಿಗಿಂತಲೂ ಪ್ರಭುಗಳು ಕಡಮೆಯಾಗಿರುವುದೂ ಉಂಟು. ಸಂಪೂರ್ಣವಾಗಿ ಕಾಮಕ್ರೋಧಾದಿಗಳನ್ನು ಗೆದ್ದು, ದುರ್ವಿಷಯಗಳಲ್ಲಿ ಮನಸ್ಸನ್ನು ಬಿಡದೆ, ಇರುವ ಸ್ಥಿತಿಗೆ

ಬಂದರೆ, ಆಗ್ಯೆ ಅವರು ದೇವರಿಗೆ ಸಮಾನರಾಗುವರು. ಅಂಥಾ ಸ್ಥಿತಿಗೆ ಬರುವ ಪ್ರಯತ್ನವನ್ನು ಮಾಡು. ದೇವರು ನಿನಗೆ ಮಂಗಳವನ್ನು ಮಾಡಲಿ."

"ನಿನ್ನ ತಂದೆಯಲ್ಲಿ ಹೇಗೋ ಹಾಗೆ ನಿನ್ನಲ್ಲಿಯೂ ದೇವರ ಪ್ರೀತಿಯು ಇರುವುದು. ಸತ್ಯವಂತರಿಗೆ ಜಗದೀಶ್ವರನು ಅನೇಕ ರೂಪುಗಳನ್ನು ಧರಿಸಿ, ಸಹಾಯ ಮಾಡುವನು. ಅಸತ್ಯವಂತರನ್ನು ಮೂಲೋತ್ಪಾಟನ ಮಾಡುವುದಕ್ಕೂ ಅವನು ಅವತರಿಸುವನು. ಇವುಗಳೆಲ್ಲಾ ನಿನಗೆ ತಿಳಿಯದ ವಿಷಯಗಳಲ್ಲ. ನೀನು ಈಗ ದುರ್ಮಾರ್ಗಪ್ರವರ್ತಕರಾದ ಡಾನಿಯರ್ಕರನ್ನು ದಂಡಿಸಿ, ಮಿತ್ರಮಂಡಲಿಯವರಿಗೆ ಸಹಾಯ ಮಾಡುವುದಕ್ಕೋಸ್ಕರ ಹೊರಟಿರುವಿ. ಇಡುವಿಾನಿಯಸ್ಸನ ಸೈನ್ಯಕ್ಕೂ, ನೆಸ್ಟರನ ಸೈನ್ಯಕ್ಕೂ ಸೇನಾನಾಯಕನಾಗಿ ಮಾಡಲ್ಪಟ್ಟಿರುವಿ. ಇದೇ ಒಂದು ದೊಡ್ಡ ಪದವಿ. ಇದಕ್ಕಿಂತಲೂ ದೊಡ್ಡ ಪದವಿಯು ನಿನಗೆ ಬರುವುದು. ಹಾಗೆ ಇಲ್ಲದಿದ್ದರೆ, ನಿನಗೆ ಬಂದ ವಿಪತ್ತುಗಳೆಲ್ಲಾ ಪರಿಹಾರವಾಗುತ್ತಿರಲಿಲ್ಲ. ತಂದೆಯಾಗಿಯೂ, ಗುರುವಾಗಿಯೂ ಇರುವಂತೆ ಮೆಂಟರನು ನಿನಗೆ ದೊರೆಯುತ್ತಿರಲಿಲ್ಲ. ಇಡುವಿಾನಿಯಸ್ಸನು ಮೈನಾಸನ ಸಂತತಿಯವನಾದಾಗ್ಯೂ, ಕೇವಲ ದುರದೃಷ್ಟವಂತನಾಗಿದ್ದನು. ಕ್ರೀಟ್ ದೇಶದ ಆಧಿಪತ್ಯವನ್ನು ಇವನು ತನ್ನ ಅವಿವೇಕದಿಂದ ಕಳೆದುಕೊಂಡನು. ನಿಮ್ಮ ಸಹಾಯವು ದೊರೆಯದಿದ್ದರೆ, ಸ್ಯಾಲೆಂಟಮ್ ರಾಜ್ಯವನ್ನೂ ಕಳೆದುಕೊಳ್ಳುತ್ತಿದ್ದನು. ಅವನಲ್ಲಿ ಎಷ್ಟು ತಪ್ಪುಗಳಿದ್ದಾಗ್ಯೂ ಸತ್ಯವೂ, ಧರ್ಮವೂ ಇರುವುದರಿಂದ, ನಿಮ್ಮ ಸಹಾಯವು ಅವನಿಗೆ ದೊರೆಯಿತು. ನಿಮ್ಮ ಸಹಾಯವು ದೊರೆಯುವುದಕ್ಕೆ ದೇವರ ಅನುಗ್ರಹವೇ ಮುಖ್ಯಕಾರಣ. ದುರ್ಮಾರ್ಗಪ್ರವರ್ತಕರಿಗೆ ದೇವರ ಸಹಾಯವು ದೊರೆಯುವುದಿಲ್ಲ. ನೀನು ಅನೇಕ ಸಂದರ್ಭಗಳಲ್ಲಿ ಅಜಿತೇಂದ್ರಿಯನಾಗಿ, ಮೆಂಟರಿಗೂ ಕೂಡ ಅವಿಧೇಯನಾಗಿದ್ದೆ. ದುರ್ವಿಷಯಗಳಲ್ಲಿ ಆಸಕ್ತನಾಗಿದ್ದೆ. ಕೆಲಿಪ್ಸೋ ಮೊದಲಾದವರ ಬಲೆಗೆ ಬಿದ್ದಿದ್ದೆ. ದೈವಘಟನೆಯಿಂದಲೂ, ಮೆಂಟರನ ಸಹಾಯದಿಂದಲೂ ಈ ವಿಪತ್ತುಗಳೆಲ್ಲಾ ಪರಿಹಾರವಾದವು. ನಿನಗೂ, ನಿಮ್ಮ ತಾಯಿಗೂ ಬಾಧಿಸತಕ್ಕ ಕಷ್ಟಗಳು ಪರಿಹಾರವಾಗುವ ಕಾಲವು ಸನ್ನಿಹಿತವಾಗುತ್ತಲಿದೆ. ನಿನಗೆ ವಿಜಯವಾಗುವುದು. ಡಾನಿಯರ್ಕರು ಪರಾಜಿತರಾಗುವರು. ಇಡುವಿಾನಿಯಸ್ಸನೇ ಮೊದಲಾದ ಸಮಸ್ತರೂ ನಿನಗೆ ಸನ್ಮಿತ್ರರಾಗುವರು. ಅವರ ಸಹಾಯದಿಂದ ನಿನ್ನ ಶತ್ರುಗಳು ಇಥಾಕಾ ಪಟ್ಟಣದಿಂದ ಓಡಿಸಲ್ಪಡುವರು. ನಿನ್ನ

ತಂದೆಯು ಲೋಕಯಾತ್ರೆಯನ್ನು ಮುಗಿಸಿಕೊಂಡು ಬರುವನು. ಅವನನ್ನು ಹೊಂದುವ ಭಾಗ್ಯವು ನಿನಗೆ ಲಭಿಸುವುದು. ನಿನಗೆ ಮಂಗಳವಾಗಲಿ" ಎಂದು ಹೇಳಿ ಮಿನರ್ವಳು ಅದೃಶ್ಯಳಾದಳು.

ಕೂಡಲೆ ಟೆಲಿಮಾಕಸ್ಸನು ಹಿಂತಿರುಗಿ ಮೆಂಟರನ ಬಳಿಗೆ ಹೋಗಿ, ಈ ವಿದ್ಯಮಾನಗಳನ್ನೆಲ್ಲಾ ತಿಳಿಸಿದನು. ಅವನಿಗೆ ತಿಳಿಸಿ, ತನ್ನ ತಪ್ಪುಗಳಿಗೆ ವ್ಯಸನಪಟ್ಟು, ತನ್ನ ಅಪರಾಧಗಳನ್ನೆಲ್ಲಾ ಮನ್ನಿಸಬೇಕೆಂಬದಾಗಿಯೂ, ಮಿನರ್ವಳೇ ಮೆಂಟರೆಂದು ತಾನು ಭಾವಿಸಿರುವುದಾಗಿಯೂ, ಕ್ರೀಟ್ ದ್ವೀಪವನ್ನು ಕಳೆದುಕೊಂಡು, ಸ್ಯಾಲೆಕ್ಟರ್‌ನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದ ಇಡುಮಿನಿಯಸ್ಸನನ್ನು ಉದ್ಧರಿಸಿದ್ದಕ್ಕೋಸ್ಕರ ತಾನು ತುಂಬಾ ಸಂತುಷ್ಟನಾಗಿರುವೆನೆಂಬದಾಗಿಯೂ, ಅಪ್ಪಣೆಯಾದರೆ ಹೋಗಿಬರುವೆನೆಂಬದಾಗಿಯೂ ಹೇಳಿದನು. ಅದಕ್ಕೆ ಮೆಂಟರನು ಹೇಳಿದ್ದೇನಂದರೆ:—

"ಎಲೈ ಟೆಲಿಮಾಕಸ್ಸನೇ, ಮಿನರ್ವಳ ಅನುಗ್ರಹಕ್ಕೆ ನಿಮ್ಮ ತಂದೆಯು ಪಾತ್ರನಾಗಿರುವನು. ಆಕೆಯು ಅದೇ ಅನುಗ್ರಹವನ್ನು ನಿನ್ನಲ್ಲಿಯೂ ಇಟ್ಟಿರುವಳು. ಸದರಿ ಅನುಗ್ರಹದಿಂದಲೇ ನಾನೂ ನಿನ್ನ ಯೋಗಕ್ಷೇಮಚಿಂತಕನಾಗಿರುತ್ತೇನೆ. ಇಡುಮಿನಿಯಸ್ಸನು ಅನೇಕ ತಪ್ಪುಗಳನ್ನು ಮಾಡಿ ಇಲ್ಲ. ಅವನಲ್ಲಿ ಬೇಕಾದಷ್ಟು ನ್ಯೂನಾತಿರಿಕ್ತಗಳಿರುವುವು. ಆದರೆ ಅವನಿಗೆ ರುಜುಮಾರ್ಗದಲ್ಲಿ ಆಸಕ್ತಿಯು ಇರುವುದು. ನಮ್ಮ ಶತ್ರುಗಳು ನಮ್ಮಲ್ಲಿಯೇ ಇರುವರು. ದುರ್ವಿಷಯಗಳಲ್ಲಿ ಆಸಕ್ತಿಯೂ, ಕಾಮಕ್ರೋಧಾದಿಗಳೂ ಇರುವಾಗ್ಯೆ, ಜನಗಳು ಅಧೋಗತಿಯನ್ನು ಹೊಂದುವುದೇನಾಶ್ಚರ್ಯ! ನಿಮ್ಮ ತಂದೆಯಾದ ಯೂಲಿಸಸ್ಸನು ಸಕಲ ಸದ್ಗುಣ ಸಂಪನ್ನನೆಂದು ಭಾವಿಸಲ್ಪಟ್ಟಿರುವನು. ಅವನಲ್ಲಿಯೂ ನ್ಯೂನಾತಿರಿಕ್ತಗಳಿರುವುವು. ಮಿನರ್ವಳ ಅನುಗ್ರಹವಿಲ್ಲದಿದ್ದರೆ, ಬಹು ಕಾಲಕ್ಕೆ ಮುಂಚೆಯೇ ಅವನ ಅವತಾರವು ಪೂರೈಸುತ್ತಿತ್ತು. ನಿನ್ನನ್ನು ತಿದ್ದಿದ ಹಾಗೆಯೇ ಮಿನರ್ವಳು ಅವನನ್ನೂ ತಿದ್ದಿದಳು. ನೀನು ಸನ್ಮಾರ್ಗಪ್ರವರ್ತಕನಾಗುವುದಕ್ಕೆ ಎಷ್ಟು ವಿಘ್ನಗಳು ಬಂದವೋ ಅವನಿಗೂ ಹಾಗೆಯೇ ಬಂದವು. ದೈವಾನುಗ್ರಹದಿಂದ ನೀನು ಹೇಗೆ ವಿಘ್ನಪರಂಪರೆಗಳನ್ನು ಗೆದ್ದೆಯೋ ಅವನೂ ಹಾಗೆಯೇ ಗೆದ್ದನು. ಇಥಾಕಾ ದ್ವೀಪದಲ್ಲಿ ಅವನು ಪ್ರಭುತ್ವ ಮಾಡುವುದಕ್ಕೆ ಉಪಕ್ರಮಿಸುವನು. ಸಕಲ ಸದ್ಗುಣಸಂಪನ್ನನಾದಾಗ್ಯೂ, ಅವನ ಪ್ರಭುತ್ವವೂ ಕೂಡ ನಿರ್ದು

ಷ್ಟವಾಗಿರುವುದು ಬಹಳ ಕಷ್ಟ. ಇದಕ್ಕೆ ಕಾರಣವುಂಟು. ಪ್ರಭುತ್ವ ಮಾಡತಕ್ಕವನು ಸದುದ್ದೇಶವುಳ್ಳವನಾಗಿರಬಹುದು. ಸತ್ಯಕ್ಕೂ, ಧರ್ಮಕ್ಕೂ ಭಂಗಬರದಂತೆ ಸಕಲ ಪ್ರಜೆಗಳನ್ನೂ ಕಾಪಾಡಬೇಕೆಂಬ ಅಭಿನಿವೇಶವು ಅವನಿಗೆ ಇರಬಹುದು. ಆದರೆ ಸಕಲ ಜನಗಳೂ ತನ್ನಂತೆ ಇರುವ ಹಾಗೆ ಮಾಡಿಕೊಳ್ಳುವುದು ಬಹಳ ಕಷ್ಟ. ಪ್ರಭುವು ಆಜ್ಞೆಮಾಡಬಹುದು. ಸದರಿ ಆಜ್ಞೆಯನ್ನು ಜಾರಿಗೆ ತರತಕ್ಕವರು ಪ್ರಭುವಿನಂತೆಯೇ ಸತ್ಯವಂತರಾಗಿಯೂ, ಸನ್ಮಾರ್ಗಪ್ರವರ್ತಕರಾಗಿಯೂ ಇರುವಂತೆ ಮಾಡುವುದು ಬಹಳ ಕಷ್ಟ. ಅದು ಹಾಗಿರಲಿ. ಸಕಲ ಜನಗಳೂ ನಿರ್ದುಷ್ಟನಾಗಿರುವಂತೆ ಮಾಡಬೇಕೆಂದು ಸಂಕಲ್ಪಮಾಡಿ, ಹಾಗೆ ಮಾಡುವುದಕ್ಕೆ ಪ್ರಯತ್ನಪಡು. ನಿನ್ನ ನೌಕರರ ನ್ಯೂನಾತಿರಿಕ್ತಗಳಿಂದ ನಿನ್ನ ಉದ್ದೇಶಕ್ಕೆ ಅಲ್ಪಸ್ವಲ್ಪ ಭಂಗಬಂದಾಗ್ಯೂ, ಅದಕ್ಕಾಗಿ ತಾಪತ್ರಯ ಪಡಬೇಡ. ಪ್ರಪಂಚವನ್ನು ಸಾಧ್ಯವಾದ ಮಟ್ಟಿಗೂ ಸರಿಮಾಡಿಕೊಂಡು ಹೋಗಬೇಕು. ನೀನು ಅನೇಕ ಮಹಾತ್ಮರ ಚರಿತ್ರೆಯನ್ನು ಓದಿರುವಿ. ಯೂಲಿಸಸ್, ಇಡುಮೀನಿಯಸ್ ಇವರ ಗುಣಾತಿಶಯಗಳನ್ನು ನೋಡಿರುವಿ. ಮಹಾತ್ಮರ ಗುಣಾತಿಶಯಗಳು ಹೇಗೆ ಇರಬೇಕೋ ಅದನ್ನು ತಿಳಿದುಕೊಂಡಿರುವಿ. ನೀನು ತಿಳಿದುಕೊಂಡಿರತಕ್ಕ ಧರ್ಮಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳುವುದರಲ್ಲಿ ಕೃಷಿಯನ್ನು ಮಾಡು. ಬಹಳ ಜವಾಬ್ದಾರಿ ಪದವಿಯನ್ನು ಈಗ ನೀನು ವಹಿಸಿರುವಿ. ಅನೇಕ ಲಕ್ಷ ಕಣ್ಣುಗಳು ನಿನ್ನ ನಡೆನುಡಿಗಳನ್ನು ನೋಡುವುದಕ್ಕೆ ಉಪಕ್ರಮವಾಗುವುವು. ಅನೇಕ ಲಕ್ಷ ಜನಗಳು ನಿನ್ನ ಗುಣಾತಿಶಯಗಳನ್ನು ಹೇಗೋ ಹಾಗೆ ನಿನ್ನ ನ್ಯೂನಾತಿರಿಕ್ತಗಳನ್ನು ನೋಡುವ ಸಂಭವವೂ, ಕೇಳುವ ಸಂಭವವೂ ಬರುವುದು. ನೀನು ಬಹಳ ಜಾಗರೂಕನಾಗಿರಬೇಕು. ಸತ್ಯವೂ, ಧರ್ಮವೂ ನಿನ್ನನ್ನು ಕಾಪಾಡುವುದು. ಧೈರ್ಯಸ್ಥೈರ್ಯಗಳು ನಿನ್ನನ್ನು ರಕ್ಷಿಸುವುವು. ಸಜ್ಜನರಲ್ಲಿ ಪ್ರೀತಿಯನ್ನು ಇಡು. ಚನ್ನಾಗಿ ಕೆಲಸ ಮಾಡತಕ್ಕವರಿಗೆ ಬಹುಮಾನ ಮಾಡು. ಇದರಿಂದ ಅವರೆಲ್ಲಾ ನಿನ್ನಲ್ಲಿ ಅನುರಕ್ತರಾಗುವರು. ನೆಸ್ಟರು ಮೊದಲಾದವರು ನಿನಗೋಸ್ಕರ ಕಾದಿರುವರು. ವಿಶೇಷ ಕಾಲಹರಣಕ್ಕೆ ಅವಕಾಶವಿಲ್ಲ. ಹೋಗಿ ಬಾ. ಮಿನರ್ವಳ ಹಿತೋಪದೇಶವನ್ನು ಯಾವಾಗ್ಯೂ ಸ್ಮರಿಸಿಕೊ. ಅವುಗಳಂತೆ ನಡಿ. ದೇವರು ನಿನಗೆ ಮಂಗಳವನ್ನು ಮಾಡುವನು."

ಹೀಗೆ ಹೇಳಿದ ಕೂಡಲೆ ಟೆಲಿಮಾಕಸ್ಸನು ಮೆಂಟರನಿಗೆ ನಮಸ್ಕಾರ ಮಾಡಿ, ತನ್ನ ಸೈನ್ಯದ ಕಡೆಗೆ ಹೊರಟನು ಹೋಗುವಾಗ್ಗೆ ಮಿನರ್ವಳ ಹಿತೋಪದೇಶವೂ, ಮೆಂಟರನ ಹಿತೋಪದೇಶವೂ ಅವನ ಸ್ಮೃತಿಪಥಕ್ಕೆ ಬಂದವು. ತನ್ನ ಸುಕೃತ ಪರಿಪಾಕದಿಂದ ಇಂಥಾ ಹಿತೋಪದೇಶಗಳಿಗೆ ತಾನು ಪಾತ್ರನಾದೆನೆಂದು ಅವನಿಗೆ ತೋರಿತು. ಇದರಿಂದ ಅನಿರ್ವಚನೀಯವಾದ ಸಂತೋಷವು ಅವನಿಗೆ ಉಂಟಾಯಿತು. ಅವರ ಹಿತೋಪದೇಶವನ್ನು ಅನುಷ್ಠಾನದಲ್ಲಿ ತಂದುಕೊಳ್ಳುವುದಕ್ಕೆ ಸುಸಮಯವು ಒದಗಿತು. ಸೂರ್ಯನು ಅಸ್ತಮಯಿಸಿದನು. ಆ ಕಾಲಕ್ಕೆ ಸರಿಯಾಗಿ ಟೆಲಿಮಾಕಸ್ಸನು ಸಿಬಿರವನ್ನು ಸೇರಿದನು. ಇಡುಮಿನಿಯಸ್ಸನೂ, ಮೆಂಟರನೂ ಸಿಬಿರಕ್ಕೆ ಬಂದರು. ನೆಸ್ಟರ್ ಮೊದಲಾದ ಎಲ್ಲಾ ಸೇನಾನಾಯಕರ ಅಪ್ಪಣೆಯನ್ನೂ ತೆಗೆದುಕೊಂಡು, ಅವರು ಹೊರಟು ಹೋದರು. ಅವರು ಹೊರಟು ಹೋದ ಕೂಡಲೆ ನೆಸ್ಟರ್ ಮೊದಲಾದವರೆಲ್ಲರೂ ಪ್ರಯಾಣದ ಸನ್ನಾಹಗಳನ್ನೆಲ್ಲಾ ಮಾಡಿ, ರಾತ್ರಿ ಭೋಜನಾದಿಗಳನ್ನು ತೀರಿಸಿಕೊಂಡು, ವಿಶ್ರಾಂತಿ ಸುಖವನ್ನು ಅನುಭವಿಸುವುದಕ್ಕೆ ಸಿದ್ಧ ಮಾಡಿಕೊಂಡರು. ಆಗ ನೆಸ್ಟರನು ಟೆಲಿಮಾಕಸ್ಸನನ್ನು ಕುರಿತು ಹೇಳಿದ್ದೇನೆಂದರೆ:—

"ಇಡುಮಿನಿಯಸ್ಸನು ಅತ್ಯಂತ ದುರಾತ್ಮನೆಂದು ನಾನು ತಿಳಿದುಕೊಂಡಿದ್ದೆನು. ನಮ್ಮ ಮಿತ್ರಮಂಡಲಿಯವರೆಲ್ಲಾ ಹೀಗೆಯೇ ತಿಳಿದುಕೊಂಡಿದ್ದರು. ದೈವಯೋಗದಿಂದ ನೀನೂ, ಮೆಂಟರೂ ಅವನನ್ನು ರಕ್ಷಿಸಿದಿರಿ. ಅವನು ಗುಣಾಢ್ಯನೆಂದು ಈಗ ನಮಗೆ ಗೊತ್ತಾಯಿತು. ಪ್ರಭುಗಳೂ, ಯಜಮಾನರೂ ಎಷ್ಟು ಗುಣಾತಿಶಯಗಳುಳ್ಳವರಾದಾಗ್ಯೂ, ಅವರ ಪರಿವಾರ ದೇವತೆಗಳು ಅಯೋಗ್ಯರಾದರೆ, ಅಪಯಶಸ್ಸು ತಪ್ಪದೆ ಬರುವುದು. ಮೈನಾಸನ ಸಂತತಿಯವನಾದಾಗ್ಯೂ, ಯುಕ್ತಾಯುಕ್ತವಿಹೀನರಾಗಿಯೂ, ದುರ್ಮಾರ್ಗಪ್ರವರ್ತಕರಾಗಿಯೂ ಇರತಕ್ಕವರನ್ನು ಇವನು ನಂಬಿದ್ದರಿಂದ ಬಹಳ ಶೋಚನೀಯವಾದ ಅವಸ್ಥೆಗೆ ಬಂದಿದ್ದನು. ನಿಮ್ಮ ರೂಪವಾಗಿ ದೇವರು ಅವನ ಸಹಾಯಕ್ಕೆ ಬಂದನು. ಇದಕ್ಕಾಗಿ ನಾನು ತುಂಬಾ ಸಂತೋಷಿಸುತ್ತೇನೆ ನೀನು ಈ ಸೈನ್ಯಾಧಿಪತ್ಯಕ್ಕೆ ಬಂದದ್ದಕ್ಕಾಗಿ ನಾನು ತುಂಬಾ ಸಂತುಷ್ಟನಾಗಿದೇನೆ. ನಮ್ಮ ಎರಡು ಸೈನ್ಯಗಳೂ ಒಗ್ಗಟ್ಟಾಗಿ ಸೇರಿರುವುದನ್ನೂ, ಈ ಸೈನ್ಯಕ್ಕೆ ನೀನು ಅಧಿಪತಿಯಾಗಿರುವುದನ್ನೂ ಕೇಳಿದ ಕೂಡಲೆ, ಡಾನಿಯರ್‌ರಿಗೆ ಭಯವುಂಟಾಗುವುದು. ಅವರು ವಿವೇಕಶಾಲಿ

ಗಳಾದರೆ, ಕೌಲನ್ನು ಮಾಡಿಕೊಳ್ಳುವರು. ಹಾಗಾದ ಪಕ್ಷದಲ್ಲಿ, ಒಂದು ತೊಟ್ಟು ರಕ್ತವೂ ಚೆಲ್ಲಲ್ಪಡದೆ, ಸಮಾಧಾನಕ್ಕೆ ಅವಕಾಶ ಮಾಡಿದ ಕೀರ್ತಿಯು ನಮಗೆ ಲಭ್ಯವಾಗುವುದು. ಇಂಥಾ ಕೀರ್ತಿಯು ಬಂದ ಪಕ್ಷದಲ್ಲಿ, ಅದರ ಗೌರವಕ್ಕೆ ನೀನೂ, ಮೆಂಟರೂ ವಿಶೇಷ ಪಾತ್ರರಾಗುತ್ತೀರಿ. ಇದು ತುಂಬಾ ಸಂತೋಷಕರವಾದದ್ದು." ಈ ರೀತಿಯಲ್ಲಿ ಹೇಳಿ, ವಿಶ್ರಾಂತಿ ಸುಖವನ್ನು ಅನುಭವಿಸುವುದಕ್ಕೆ ಹೋದರು. ಮಾರನೇ ದಿವಸ ಬೆಳಿಗ್ಯೆ 5 ಗಂಟೆಗೆ ಸರಿಯಾಗಿ ಡಾನಿರ್ಯರ ದೇಶದ ಕಡೆಗೆ ಈ ಸೈನ್ಯವು ಪ್ರಯಾಣ ಬೆಳೆಸಿತು. ಈ ಸೈನ್ಯದ ಜೊತೆಯಲ್ಲಿ ಸ್ವಲ್ಪ ದೂರ ಹೋಗಿ, ಅವರನ್ನು ಕಳುಹಿಸಿ ಕೊಟ್ಟು, ಇಡುಮೀನಿಯಸ್ಸನು ಮೆಂಟರನ ಜೊತೆಯಲ್ಲಿ ಹಿಂತಿರುಗಿದನು. ಅವರು ಪ್ರಯಾಣವನ್ನು ಬೆಳೆಸಿದರು.

ಆಗ ಮೆಂಟರು ಸ್ಯಾರ್ಲೆಟಮ್ ಪಟ್ಟಣದಲ್ಲಿಯೂ, ಇಡುಮೀನಿಯಸ್ಸನ ರಾಜ್ಯದಲ್ಲಿಯೂ ಎಷ್ಟು ಜನಗಳಿರುವರೋ, ಅವರಲ್ಲಿ ಯಾರು ಉದ್ಯೋಗಿಗಳಾಗಿರುವರೋ, ಅವರು ಯಾವ ಯಾವ ಕೆಲಸವನ್ನು ಮಾಡುತ್ತಲಿರುವರೋ, ಯಾವ ಯಾವ ಭೋಗ್ಯವಸ್ತುಗಳು ಅವನ ದೇಶದಲ್ಲಿ ಉತ್ಪತ್ತಿಯಾಗುತ್ತಲಿರುವುವೋ, ದೇಶದ ಉತ್ಪತ್ತಿಯು ದೇಶಾಂತರಕ್ಕೆ ರಫ್ತು ಮಾಡುವುದಕ್ಕೆ ಎಷ್ಟುಮಟ್ಟಿಗೆ ಅವಕಾಶವಿರುವುದೋ, ಜನಗಳ ಖರ್ಚಿಗೆ ಬೇಕಾದಷ್ಟನ್ನು ಉಪಯೋಗಿಸಿಕೊಂಡು, ಉಳಿದದ್ದನ್ನು ರಫ್ತು ಮಾಡುವುದಕ್ಕೆ ಸ್ಟೀಮರುಗಳೇ ಮೊದಲಾದ ಅನುಕೂಲ್ಯಗಳು ಎಷ್ಟುಮಟ್ಟಿಗಿರುವುವೋ ಇದರ ವಿಷಯದಲ್ಲಿ ತಪಶೀಲುಗಳನ್ನು ಕೇಳಿದನು. ಈ ವಿಷಯವನ್ನು ತಾನು ಪರ್ಯಾಲೋಚಿಸಿಲ್ಲವೆಂದು ಇಡುಮೀನಿಯಸ್ಸನು ಹೇಳಿದನು. ದೇಶದ ವಿಸ್ತೀರ್ಣ, ಜನಸಂಖ್ಯೆ, ಕೆಲಸ ಮಾಡಿ ಜೀವಿಸತಕ್ಕವರ ಸಂಖ್ಯೆ, ಖುಷ್‌ಪಾಷ್‌ನಿಂದ ಜೀವನ ಮಾಡತಕ್ಕವರ ಸಂಖ್ಯೆ, ಅವರವರ ಕಸಬುಗಳು, ಅವರ ಉತ್ಪತ್ತಿ, ಅವರು ಮಾಡತಕ್ಕ ಖರ್ಚು, ಉಳಿಯತಕ್ಕ ದಿನಸುಗಳು, ಆಮದು-ರಫ್ತುಗಳು, ಕಲಾಕೌಶಲ್ಯಗಳ ಸ್ಥಿತಿ, ಬಂಡವಾಳವನ್ನು ಒದಗಿಸತಕ್ಕ ಏರ್ಪಾಡುಗಳು, ಈ ಭಾಗಗಳಲ್ಲೆಲ್ಲಾ ತಃಸ್ತೆಗಳನ್ನು ಹಾಕಿಕೊಟ್ಟು, ಅವುಗಳ ತಪಶೀಲುಗಳನ್ನೆಲ್ಲಾ ಸಿದ್ಧಮಾಡಬೇಕೆಂದು ನೌಕರರಿಗೆ ಆಜ್ಞೆಮಾಡಿದನು. ಸರ್ಕಾರದ ಇಲಾಖೆಗಳನ್ನೆಲ್ಲಾ ನೋಡಿ ಪರೀಕ್ಷಿಸುವುದಕ್ಕೆ ಇಡುಮೀನಿಯಸ್ಸನ ಜೊತೆಯಲ್ಲಿ ಹೊರಟನು. ಪ್ರತಿ ಒಂದು ಆಫೀಸಿನ ಕೆಲಸಗಳನ್ನೂ ಪರಿಶೀಲಿಸಿ, ಪ್ರತಿ ಒಬ್ಬರ ಕೆಲಸವನ್ನೂ ಪರೀಕ್ಷಿಸಿ, ಯಾವ ಯಾವ ಇಲಾಖೆಗಳಲ್ಲಿ ಯಾರು

ಕೆಲಸದಲ್ಲಿ ದಕ್ಷರೋ, ಯಾರು ಚೆನ್ನಾಗಿ ಕೆಲಸ ಮಾಡಿರುವರೋ, ಯಾರು ಅವರು ಪಡೆಯುತ್ತಕ್ಕ ಸಂಬಳಕ್ಕೆ ಪ್ರತಿಫಲವನ್ನು ಉಂಟುಮಾಡುವ ಶಕ್ತಿಯಿಲ್ಲದವರೋ, ಯಾವ ಇಲಾಖೆಗಳೂ, ಉದ್ಯೋಗಗಳೂ ಆವಶ್ಯಕಗಳೋ, ಯಾವುದು ಆವಶ್ಯಕವಿಲ್ಲವೋ ಅವುಗಳನ್ನೆಲ್ಲಾ ಗೊತ್ತುಮಾಡಿ, ಆವಶ್ಯಕವಾದ ನೌಕರಿಗಳನ್ನು ಇಟ್ಟುಕೊಳ್ಳುವಂತೆಯೂ, ಅನಾವಶ್ಯಕವಾದವುಗಳನ್ನು ತೆಗೆದುಹಾಕುವಂತೆಯೂ ಆಜ್ಞೆಮಾಡಿಸಿದನು. ಈ ಏರ್ಪಾಡುಗಳಿಂದ ಅನೇಕರು ನೌಕರಿಯನ್ನು ಬಿಡಬೇಕಾಯಿತು. ಹಾಗೆ ನೌಕರಿ ಕಳೆದುಕೊಂಡವರಲ್ಲಿ ಯಾರ್ಯಾರು ಇತರ ಯಾವ ಕೆಲಸಗಳಿಗೆ ಅರ್ಹರಾಗಿರುವರೋ ಅದನ್ನು ಗೊತ್ತುಮಾಡಿ, ಶಕ್ತರಾದವರಿಗೆಲ್ಲರಿಗೂ ಬೇರೆ ಕೆಲಸವನ್ನು ನಿಯಮಿಸಿದನು. ಕೆಲಸ ಮಾಡುವುದಕ್ಕೆ ಶಕ್ತಿಯಿಲ್ಲದವರಿಗೆ ಪೆನ್ಷನ್ ವಗೈರೆಗಳನ್ನು ಕೊಟ್ಟು, ರಿಟೈರ್ ಮಾಡಿಸಿದನು. ಪ್ರತಿಒಂದು ಉದ್ಯೋಗದಲ್ಲಿಯೂ ಆ ಉದ್ಯೋಗದ ಪೂರ್ವಾಪರಗಳನ್ನು ಯಾರು ತಿಳಿದುಕೊಂಡಿರುವರೋ, ಆ ಉದ್ಯೋಗಕ್ಕೆ ಸಂಬಂಧಪಟ್ಟ ಕೆಲಸವನ್ನು ಮಾಡುವುದಕ್ಕೆ ಯಾರು ಸಾಮರ್ಥ್ಯವುಳ್ಳವರೋ ಅದನ್ನು ಪರಿಶೀಲಿಸಿ, ಅವರು ಪ್ರಾಮಾಣಿಕರಾಗಿಯೂ, ಪಾಪಭೀತರಾಗಿಯೂ, ವಿಧೇಯರಾಗಿಯೂ ಇರುವರೋ ಇಲ್ಲವೋ ಅದನ್ನು ಗೊತ್ತುಮಾಡಿ, ಅವರ ಉದ್ಯೋಗದ ಕೆಲಸವನ್ನು ಮಾಡುವುದಕ್ಕೆ ತಕ್ಕ ಶಕ್ತಿಯು ಅವರಿಗೆ ಇರುವುದೋ ಇಲ್ಲವೋ ಅದನ್ನು ನಿಷ್ಕರ್ಷಿಸಿ, ಗುಣೈಕಪಕ್ಷಪಾತತೆಯಿಂದ ಸಕಲ ಉದ್ಯೋಗಗಳಲ್ಲಿಯೂ ಸರ್ವಸಮರ್ಪಕರಾದವರು ಇರುವಂತೆ ಏರ್ಪಾಡು ಮಾಡಿದನು. ನೌಕರಿಯನ್ನು ಕಳೆದುಕೊಂಡವರಿಗೆ ಅವರ ಶಕ್ತಿಗೂ, ಬುದ್ಧಿಗೂ ಅನುರೂಪವಾದ ಕೆಲಸಗಳನ್ನು ನಿಯಮಿಸಿ, ಅವರು ಶ್ರದ್ಧೆಯಿಂದಲೂ, ಉತ್ಸಾಹದಿಂದಲೂ ಸಂಪದಭಿವೃದ್ಧಿಗೆ ಸಾಧಕಗಳಾದ ಕೆಲಸವನ್ನು ಮಾಡುವಂತೆ ಏರ್ಪಾಡು ಮಾಡಿದನು. ಕೋರ್ಟು, ಕಚೇರಿ ಮೊದಲಾದವುಗಳನ್ನೆಲ್ಲಾ ಪರಿಶೀಲಿಸಿ ಸಮರ್ಪಕ ಏರ್ಪಾಡನ್ನು ಮಾಡಿದ ಕ್ರಮವಾಗಿ ಕೃಷಿ, ಕೈಗಾರಿಕೆ, ವ್ಯಾಪಾರ ಇವುಗಳ ಸ್ಥಿತಿಯನ್ನು ಪರಿಶೀಲಿಸುವುದಕ್ಕೆ ಉಪಕ್ರಮಿಸಿದನು. ಉದ್ಯೋಗವಿಲ್ಲದೆ ಯಾರೂ ಬರಿ ಖುಷ್‌ಪಾಷ್ ಜೀವನವನ್ನು ಮಾಡುವುದಕ್ಕೆ ಅವಕಾಶವನ್ನು ಹೊಂದಕೂಡದೆಂದು ಪ್ರಕಟಣೆಯನ್ನು ಮಾಡಿಸಿದನು. ಸ್ತ್ರೀಯರೂ, ಪುರುಷರೂ, ಮಕ್ಕಳೂ, ದೊಡ್ಡವರೂ, ಎಲ್ಲರೂ ದಿನಕ್ಕೆ ೮ ಗಂಟೆಗಳಿಗೆ ಕಡಮೆಯಿಲ್ಲದೆ, ಯಾವುದಾದರೂ ಒಂದು ಕೆಲಸವನ್ನು ಮಾಡಿ, ತಮ್ಮ

ಅನ್ನವಸ್ತ್ರಗಳನ್ನು ತಾವು ಸಂಪಾದಿಸಿಕೊಳ್ಳಬೇಕೆಂಬದಾಗಿಯೂ, ಉಳಿದ 16 ಗಂಟೆಗಳಲ್ಲಿ ನಿದ್ರೆ, ಆಹಾರ, ವಿಹಾರ ಮೊದಲಾದವುಗಳಿಗೆ ಬೇಕಾದಷ್ಟು ಉಪಯೋಗಿಸಿಕೊಳ್ಳಬಹುದೆಂಬದಾಗಿಯೂ, ಸಂಪದಭಿವೃದ್ಧಿಯ ಕೆಲಸಗಳಲ್ಲಿ 8 ಗಂಟೆಯೂ ದರೂ ಯಾರು ಕೃಷಿಯನ್ನು ಮಾಡುವುದಿಲ್ಲವೋ ಅವರು ಗಡೀಪಾರು ಮಾಡಲ್ಪಡಬೇಕೆಂದು ಪ್ರಕಟಣೆಯನ್ನು ಮಾಡಿಸಿದನು. ಈ ರೂಲಿಗೆ ಪ್ರತಿಷೇಧಗಳು ಮಾಡಲ್ಪಟ್ಟವು. ರೋಗಿಗಳು, ಕೇವಲ ಅಶಕ್ತರು, ಉನ್ಮತ್ತರು, ವಿದ್ಯಾರ್ಥಿಗಳು ಇಂಥಾವರಿಗೆ 8 ಗಂಟೆ ಕೆಲಸ ಮಾಡುವುದು ವಿನಾಯಿತಿ ಮಾಡಲ್ಪಟ್ಟವು. ವಿನಾಯಿತಿ ಆಗುವುದಕ್ಕೆ ಮುಂಚೆ ಮೆಡಿಕಲ್ ಸರ್ಟಿಫಿಕೇಟ್ ಹಾಜರ್ಮಾಡಲ್ಪಡಬೇಕೆಂದು ವಿಧಾಯಕ ಮಾಡಿದನು. ಈ ಏರ್ಪಾಡಿನಿಂದ ಕಳ್ಳತನ, ಜೂಜುಗಾರಿಕೆ, ಕುಡಕತನ ಇವೇ ಮೊದಲಾದ ದುರ್ವೃತ್ತಿಗಳು ನಿಂತುಹೋಗುವುದಕ್ಕೆ ಅವಕಾಶವಾಯಿತು. ಉದ್ಯೋಗದಿಂದ ಬಹು ದ್ರವ್ಯವನ್ನು ಸಂಪಾದಿಸಿ, ಸ್ವತಂತ್ರವಾಗಿ ಜೀವಿಸುವುದು ಸಾಧ್ಯವೆಂಬದಾಗಿಯೂ, ಕಳ್ಳತನವೇ ಮೊದಲಾದ ದುರ್ವೃತ್ತಿಗಳಿಂದ ಜೀವಿಸುವುದಕ್ಕಿಂತ ಸ್ವಶಕ್ತಿಯಿಂದ ಬದುಕುವುದು ಉತ್ತಮವೆಂಬದಾಗಿಯೂ ಅನೇಕರಿಗೆ ಪ್ರತ್ಯಯ ಉಂಟಾಯಿತು.

ಮೊಂಟರನು ಪ್ರತಿ ಒಂದು ರೇವು ಪಟ್ಟಣಕ್ಕೂ ಇಡುವಿಸಿಯುಸ್ಸನ ಜೊತೆಯಲ್ಲಿ ಹೋದನು. ಅಲ್ಲಿನ ಆಮದು-ರಫ್ತುಗಳ ಲೆಕ್ಕವನ್ನು ಪರಿಶೀಲಿಸಿದನು. ಸ್ಯಾಲೆಕ್ಟಟರ್ ಸಂಸ್ಥಾನದಿಂದ ದೇಶಾಂತರಕ್ಕೆ ಹೋಗತಕ್ಕ ಪದಾರ್ಥಗಳ ಲೆಕ್ಕಗಳನ್ನು ತಯಾರ್ಮಾಡಿಸಿದನು. ಸದರಿ ರೇವು ಪಟ್ಟಣಗಳಿಗೆ ಬರತಕ್ಕ ಪದಾರ್ಥಗಳ ಲೆಕ್ಕಗಳನ್ನು ಗೊತ್ತುಮಾಡಿಸಿದನು. ವರ್ತಕರ ಲೇವಾದೇವಿ ವಿಷಯಗಳನ್ನು ಪರಿಶೀಲಿಸಿದನು. ಪಂಚೆಸಿ, ಕಟವಟ ಮೊದಲಾದವುಗಳಿಂದ ಪರಿಣಾಮದಲ್ಲಿ ಆಗತಕ್ಕ ಕೇಡುಗಳನ್ನು ಸಕಲ ಮಹಾಜನಗಳಿಗೆಲ್ಲಾ ತಿಳಿಯುವಂತೆ ಮಾಡಿದನು. ನ್ಯಾಯವಾದಕರಾಗಿಯೂ ಋಜುಮಾರ್ಗಾವಲಂಬಿಗಳಾಗಿಯೂ ಇರತಕ್ಕವರ ಮಾತು ರೆಜಿಸ್ಟರಾದ ಪತ್ರಕ್ಕಿಂತಲೂ ಹೆಚ್ಚಾದ ಪ್ರಾಮಾಣ್ಯವುಳ್ಳದ್ದಾಗಿ ಹೇಗೆ ಪರಿಣಮಿಸುವುದೋ ಅದು ಪ್ರಚಾರ ಮಾಡಲ್ಪಟ್ಟಿತು. ವರ್ತಕರಿಗೆ ಇರತಕ್ಕ ಕಷ್ಟನಷ್ಟಗಳು ಪರಿಹರಿಸಲ್ಪಟ್ಟವು. ಅವರಿಗೆ ಬೇಕಾದ ಸೌಖ್ಯಗಳು ಕಲ್ಪಿಸಲ್ಪಟ್ಟವು. ಅವರಿಗೆ ಲೇವಾದೇವಿಗಳಿಂದ ಪ್ರತಿಬಂಧಕಗಳು ತಪ್ಪಿಸಲ್ಪಟ್ಟವು. ನಿಮಿಷಾರ್ಧದಲ್ಲಿ ಕೋಟೀಶ್ವರರಾಗಬೇಕೆಂಬ ದುರಾಶೆಯಿಂದ ಹೇಗೆ ಮೊದಲಿಗೇ ಮೋಸ ಬರು

ವುವೋ ಅವುಗಳು ವರ್ತಕರ ಅನುಭವಕ್ಕೆ ಬರುವಂತೆ ಮಾಡಲ್ಪಟ್ಟವು. ಹೆಚ್ಚಾಗಿ ಸಂಪಾದಿಸಿ, ಸಂಪಾದಿಸಿದ್ದನ್ನೆಲ್ಲಾ ಖರ್ಚುಮಾಡಿ, ಸಾಲಗಾರರಾಗುವುದಕ್ಕಿಂತ ಕೊಂಚವಾಗಿ ಸಂಪಾದಿಸಿದರೂ, ಸಂಪಾದಿಸಿದ್ದರಲ್ಲಿ ಒಂದು ಭಾಗವನ್ನು ಯಾರು ರಿಜರ್ವ್ ಫಂಡಾಗಿ ಇಟ್ಟುಕೊಳ್ಳುವರೋ ಅವರು ಪರಿಣಾಮದಲ್ಲಿ ಹೇಗೆ ಐಶ್ವರ್ಯವಂತರಾಗುವರೋ ಅದು ತಿಳಿಸಲ್ಪಟ್ಟಿತು. ದುಂದುಗಾರಿಕೆ ಖರ್ಚನ್ನು ಮಾಡಿ, ಅಭಕ್ಷ್ಯಭೋಜನ, ಅಪೇಯಪಾನ, ಅಗಮ್ಯಾಗಮನ ಮೊದಲಾದವುಗಳ ದೆಸೆಯಿಂದ ದಿವಾಳಿಯಾಗತಕ್ಕವರಿಗೆ ಕ್ರೂರವಾದ ಶಿಕ್ಷೆಯು ಮಾಡಲ್ಪಡುವುದೆಂದು ಪ್ರಕಟಿಸಿದನು. ದಿವಾಳಿಯಾಗುವುದಕ್ಕೆ ಪ್ರತಿಬಂಧಕರೂಪವಾದ ಕಾನೂನುಗಳನ್ನು ಜಾರಿಗೆ ತಂದನು. ಪ್ರತಿ ಒಬ್ಬ ವರ್ತಕನೂ ತಮ್ಮ ವ್ಯಾಪಾರದ ತಪಶೀಲುಗಳನ್ನೂ, ಅವರ ಖರ್ಚನ್ನೂ, ಅವರ ಲಾಭವನ್ನೂ ನಮೂದಿಸಿ, ತಃಖ್ತೆಗಳನ್ನು ಕೊಡಬೇಕೆಂದು ಆಜ್ಞಾಪಿಸಿದನು. ಪ್ರತಿ ಒಬ್ಬ ವರ್ತಕನೂ ಕ್ಲುಪ್ತವಾಗಿ ಲಾಭ ಬರುವುದೆಂದು ತೋರದೆ ಇರತಕ್ಕ ಕೆಲಸಗಳಲ್ಲಿ ತಮ್ಮ ಆಸ್ತಿಯಲ್ಲಿ ಅರ್ಧ ಭಾಗಕ್ಕಿಂತ ಹೆಚ್ಚಾಗಿ ಉಪಯೋಗಿಸಕೂಡದೆಂದು ವಿಧಾಯಕ ಮಾಡಿದನು. ಅನೇಕ ಕೆಲಸಗಳಲ್ಲಿ ತುಂಬಾ ಲಾಭ ಬರುವುದುಂಟು. ತಪ್ಪುಗಳು ಮಾಡಿದರೆ, ಅಸಲಿಗೆ ಮೋಸ ಬರುವುದಲ್ಲದೆ, ಬಹಳ ನಷ್ಟವಾಗುವುದೂ ಉಂಟು. ಇಂಥಾ ಕೆಲಸಗಳನ್ನು ಮಾಡಿ, ಜಾಗರೂಕರಾಗಿರುವವರು ಕೋಟೀಶ್ವರರಾಗುವರು. ಅಜಾಗರೂಕರಾದವರು ತಮ್ಮ ಮೂಲಧನವನ್ನೂ ಕಳೆದುಕೊಂಡು ದಿವಾಳಿಗಳಾಗುವರು. ಇಂಥಾ ಕೆಲಸಗಳನ್ನು ಮಾಡುವುದಕ್ಕೆ ವರ್ತಕರು ತಮ್ಮ ಸರ್ವಸ್ವವನ್ನೂ ಉಪಯೋಗಿಸಕೂಡದೆಂಬದಾಗಿಯೂ, ತಮ್ಮ ಆಸ್ತಿಯಲ್ಲಿ ಒಂದು ಭಾಗವನ್ನು ಮಾತ್ರ ವಿನಿಯೋಗಿಸಬೇಕೆಂಬದಾಗಿಯೂ, ಮೂಲಧನಕ್ಕೆ ಲೋಪಬಂದಾಗ್ಯೂ ಉಳಿದ ಬಂಡವಾಳದಲ್ಲಿ ಜೀವಿಸುವುದಕ್ಕೆ ಅವಕಾಶವಿರುವಂತೆ ಮಾಡಿಕೊಳ್ಳಬೇಕೆಂಬದಾಗಿಯೂ, ಮುಂದಾಳುಗಳಾಗುವುದರಲ್ಲಿ ಉತ್ಸಾಹಿಗಳಾದ ವರ್ತಕರಿಗೆ ಹಿತೋಪದೇಶವನ್ನು ಮಾಡಿದನು. ವ್ಯಾಪಾರದ ಅಭಿವೃದ್ಧಿಗೆ ಇದ್ದ ನಿರ್ಬಂಧಗಳನ್ನೆಲ್ಲಾ ತೆಗೆದುಹಾಕಿದನು. ದೇಶಾಂತರದಿಂದ ಭೋಗ್ಯವಸ್ತುಗಳನ್ನು ಆಮದು ಮಾಡುವುದಕ್ಕೆ ಪ್ರತಿಬಂಧಕರೂಪವಾದ ಸುಂಕಗಳು ತೆಗೆದುಹಾಕಲ್ಪಟ್ಟವು. ಸ್ಕ್ಯಾಲೆಟಮ್ ಸಂಸ್ಥಾನದಲ್ಲಿ ಯಾವ ಪದಾರ್ಥಗಳು ಬೆಳೆಯಲ್ಪಡುವುದಿಲ್ಲವೋ, ಯಾವ ಕೈಗಾರಿಕೆಗಳು ಮಾಡಲ್ಪಡುವು

ದಿಲ್ಲವೋ ಅಂಥಾ ಪದಾರ್ಥಗಳನ್ನೂ, ಅಂಥಾ ಕೈಗಾರಿಕೆಯಿಂದ ಉತ್ಪತ್ತಿಯಾದ ದಿನಸುಗಳನ್ನೂ ತರತಕ್ಕವರಿಗೆ ಬಹುಮಾನಗಳು ಮಾಡಲ್ಪಡುವುದಕ್ಕೂ ಅವಕಾಶ ಮಾಡಲ್ಪಟ್ಟಿತು. ಈ ಬಹುಮಾನಗಳನ್ನು ಹೊಂದಬೇಕೆಂಬ ಆಶೆಯಿಂದ ದೇಶಾಂತರದವರು ಈ ದೇಶಕ್ಕೆ ವಿಶೇಷವಾಗಿ ಭೋಗ್ಯವಸ್ತುಗಳನ್ನು ತರುವುದಕ್ಕೆ ಉಪಕ್ರಮವಾಯಿತು. ಇವುಗಳ ಆಮದು ಹೆಚ್ಚಿತು. ಸಮುದ್ರದ ಅಲೆಗಳಂತೆ ಭೋಗ್ಯವಸ್ತುಗಳಿಂದ ಭರ್ತಿಯಾದ ಸ್ಟೀಮರುಗಳು ಸ್ಯಾಲೆಟಮ್ ಸಂಸ್ಥಾನಕ್ಕೆ ಬರುವುದಕ್ಕೆ ಉಪಕ್ರಮವಾದವು. ಸುಂಕದವರ ನಿರ್ಬಂಧವಿಲ್ಲದೆ, ಈ ಸ್ಟೀಮರುಗಳು ರೇವು ಪಟ್ಟಣಕ್ಕೆ ಬರುವುದಕ್ಕೂ, ರೇವು ಪಟ್ಟಣದಿಂದ ಹೊರಡುವುದಕ್ಕೂ ಅವಕಾಶವನ್ನು ಹೊಂದಿದವು. ಆ ಸಂಸ್ಥಾನದಲ್ಲಿ ಇಲ್ಲದೆ ಇರತಕ್ಕ ಪದಾರ್ಥಗಳು ಆಮದಾಗುವುದಕ್ಕೂ, ಆ ಸಂಸ್ಥಾನದ ಉಪಯೋಗಕ್ಕೆ ಆಗಿ ಮಿಕ್ಕ ಪದಾರ್ಥಗಳು ದೇಶಾಂತರಕ್ಕೆ ಕಳುಹಿಸಲ್ಪಡುವುದಕ್ಕೂ ಉಪಕ್ರಮವಾದವು. ಪರದೇಶದಿಂದ ಬರತಕ್ಕ ವರ್ತಕರಿಗೆ ಸ್ಯಾಲೆಟಮ್ ಸಂಸ್ಥಾನದ ಅಧಿಕಾರಿಗಳಿಂದ ಯಾವ ಹಿಂಸೆಯೂ ಇಲ್ಲದಂತೆ ಮಾಡಲ್ಪಟ್ಟಿತು. ಪರದೇಶೀಯರನ್ನು ಅತಿಥಿಗಳಂತೆ ಕಾಣಬೇಕೆಂಬದಾಗಿಯೂ, ಅವರಿಗೆ ಹಿಂಸೆಯನ್ನು ಮಾಡತಕ್ಕವರಿಗೆ ತಕ್ಕ ಬಂದೋಬಸ್ತು ಆಗುವುದೆಂಬದಾಗಿಯೂ ಎಲ್ಲಾ ನೌಕರರಿಗೂ ಆಜ್ಞೆಮಾಡಲ್ಪಟ್ಟಿತು. ಸ್ಯಾಲೆಟಮ್ ಸಂಸ್ಥಾನದ ನೌಕರರಿಂದ ಪರಸ್ಥಳದ ವರ್ತಕರಿಗೆ ತೊಂದರೆಯೇನಾದರೂ ಆದ ಪಕ್ಷದಲ್ಲಿ, ಅದನ್ನು ಕೂಡಲೆ ತಿಳಿಸಬೇಕೆಂದು ಎಲ್ಲಾ ಪರಸ್ಥಳದ ವರ್ತಕರಿಗೂ ತಿಳಿಸಲ್ಪಟ್ಟಿತು. ಇಂಥಾ ಫಿರ್ಯಾದುಗಳನ್ನು ಕೇಳುವುದಕ್ಕೆ ಇಡುಮಿಾನಿಯಸ್ಸನೂ, ಮೆಂಟರನೂ ಪ್ರತಿನಿತ್ಯವೂ ಅವಕಾಶವನ್ನು ಕಲ್ಪಿಸಿದರು. ದುರ್ಮಾರ್ಗಪ್ರವರ್ತಕರಾದ ನೌಕರರಿಗೆ ಅವರ ಅಪರಾಧಕ್ಕೆ ಅನುರೂಪವಾದ ಶಿಕ್ಷೆಗಳನ್ನು ನಿರ್ದಾಕ್ಷಿಣ್ಯವಾಗಿ ಮಾಡುತ್ತಾ ಬಂದರು. ಸ್ಯಾಲೆಟಮ್ ಸಂಸ್ಥಾನದಲ್ಲಿ ಒಂದೆರಡು ತಿಂಗಳೊಳಗಾಗಿ ಜನಗಳ ಶೀಲಸ್ವಭಾವಗಳು ಸಂಪೂರ್ಣವಾಗಿ ಬದಲಾಯಿಸಿದವು. ರುಜುಮಾರ್ಗಾವಲಂಬನೆ, ಪ್ರಾಮಾಣಿಕತೆ, ನಿರ್ವಂಚನೆ, ಮೊದಲಾದ ಗುಣಾತಿಶಯಗಳು ಹೆಚ್ಚುತ್ತಾ ಬಂದವು. ಪರಸ್ಥಳದ ವರ್ತಕರೂ, ಸ್ಥಳದ ವರ್ತಕರೂ ಪರಸ್ಪರ ಪ್ರೀತಿಯಿಂದ ಲೇವಾದೇವಿಯಿಂದ ಬಂದಿದ್ದ ಪ್ರಯೋಜನಕ್ಕಿಂತಲೂ ಹೆಚ್ಚಾದ ಪ್ರಯೋಜನವನ್ನು ಹೊಂದಿದರು. ಸ್ಯಾಲೆಟಮ್ ಸಂಸ್ಥಾನದ ಸಂಪತ್ತು ದಿನೇದಿನೇ ಹೆಚ್ಚುತ್ತಾ ಬಂದಿತು. ಪರಸ್ಥಳದವರು ಈ ಸಂಸ್ಥಾನದಲ್ಲಿ ಅತ್ಯಂತ ಪ್ರೀತಿ

ಯಿಂದ ಆದರಿಸಲ್ಪಟ್ಟು, ಅನೇಕರು ಈ ದೇಶದಲ್ಲಿಯೇ ಉಳಿಯುವುದಕ್ಕೆ ಉಪಕ್ರಮಿಸಿದರು. ಈ ದೇಶೀಯರು ದೇಶಾಟನವನ್ನು ಮಾಡುವುದಕ್ಕೋಸ್ಕರ ಪರಸ್ಥಳಕ್ಕೆ ಹೋಗಿ, ತಾವು ಬೆಳೆಯುವ ಸಾಮಾನುಗಳನ್ನು ದೇಶಾಂತರದಲ್ಲಿ ವಿಕ್ರಯಿಸಿ, ದ್ರವ್ಯರೂಪವಾದ ಸಂಪತ್ತಿಗಿಂತಲೂ ಲೋಕವ್ಯವಹಾರಜ್ಞಾನ ರೂಪವಾದ ಸಂಪತ್ತು ಹೇಗೆ ಅಧಿಕವಾದದ್ದೋ ಅದನ್ನು ತಿಳಿದುಕೊಂಡರು. ಎರಡು ಮೂರು ತಿಂಗಳೊಳಗಾಗಿ ಸೋಮಾರಿತನ, ವಂಚನೆ, ದ್ರೋಹ, ಕಳವು, ಜೂಜಾಟ, ಅಗಮ್ಯಾಗಮನ ಮೊದಲಾದ ದುರ್ವ್ಯಾಪಾರಗಳಲ್ಲಿ ಕಾಲಕ್ಷೇಪ ಮಾಡುತ್ತಿದ್ದ ಜನಗಳ ಪೈಕಿ ಅನೇಕರು ಸದರಿ ದುರ್ವ್ಯಾಪಾರಗಳನ್ನು ಬಿಟ್ಟು, ಉದ್ಯೋಗದಿಂದಲೂ, ಪ್ರಾಮಾಣಿಕತೆಯಿಂದಲೂ ಬದುಕುವುದಕ್ಕೆ ಉಪಕ್ರಮ ಮಾಡಿದರು. ಒಬ್ಬ ಮನುಷ್ಯನು ಪಾಪವನ್ನು ಮಾಡಿದರೆ, ಅದರ ಫಲವನ್ನು ಮಹಾಜನಗಳೆಲ್ಲಾ ಅನುಭವಿಸಬೇಕಾಗುತ್ತದೆಂಬ ಗಾಥೆಗೆ ದೃಷ್ಟಾಂತಗಳು ಕಡಮೆಯಾದವು. ಪ್ರಭುವೂ ಮತ್ತು ಅವನ ನೌಕರನೂ ಪುಣ್ಯವನ್ನು ಮಾಡಿದರೆ, ಅದರ ಫಲವು ಸಂಸ್ಥಾನಕ್ಕೆಲ್ಲಾ ಉಂಟಾಗುವುದು ಎಂಬ ಗಾಥೆಯು ಆಚರಣೆಗೆ ಬಂದಿತು. ಸ್ಯಾಲೆಂಟಮ್ ಸಂಸ್ಥಾನದಲ್ಲಿ ಸಮಸ್ತ ಜನಗಳೂ ಮೆಂಟರನ ತಿದ್ದುಪಾಟುಗಳಿಂದ ಪರಸ್ಪರ ಪ್ರೀತಿಯುಳ್ಳ ಸನ್ಮಿತ್ರರಂತೆ ಪರಿಣಮಿಸಿದರು.

ಮೆಂಟರನು ಮಿಲಿಟರಿ ಇಲಾಖೆಯ ಏರ್ಪಾಡುಗಳನ್ನು ಪರಿಶೀಲಿಸುವುದಕ್ಕೆ ಉಪಕ್ರಮಿಸಿದನು. ಮದ್ದಿನ ಮನೆಗಳು, ಆಯುಧಶಾಲೆಗಳು, ಮಿಲಿಟರಿ ಸಾಮಾನುಗಳನ್ನು ತಯಾರ್ಮಾಡತಕ್ಕ ಕಾರ್ಖಾನೆಗಳು ಇವುಗಳನ್ನೆಲ್ಲಾ ಪರಿಶೀಲಿಸಿದನು. ಶಸ್ತ್ರಾಸ್ತ್ರಗಳೇ ಮೊದಲಾದ ಯುದ್ಧಸಾಮಗ್ರಿಗಳೆಲ್ಲಾ ತಯಾರ್ಮಾಡಲ್ಪಡುವುದಕ್ಕೆ ಏರ್ಪಾಡು ಮಾಡಲ್ಪಟ್ಟಿತು. ಯುದ್ಧವನ್ನು ಮಾಡಿ, ಬಹು ಜನ ಯೋಧರು ಸಾಯುವಂತೆ ಮಾಡುವುದು ಇವನ ಉದ್ದೇಶವಾಗಿರಲಿಲ್ಲ. ಸಾಮದಾನಗಳಿಂದ ಹೇಗೋ ಹಾಗೆ ಧರ್ಮದಿಂದ ಸರ್ವರೂ ಬದುಕಬೇಕೆಂಬುವುದೇ ಇವನ ಮುಖ್ಯ ಉದ್ದೇಶವಾಗಿತ್ತು. ಈ ಉದ್ದೇಶಕ್ಕೆ ಭಂಗವನ್ನು ತರಬೇಕೆಂದು ದುರಾತ್ಮರಾದವರು ಪ್ರವರ್ತಿಸಿದ ಪಕ್ಷದಲ್ಲಿ, ಅವರನ್ನು ದಂಡೋಪಾಯದಿಂದ ನಿಗ್ರಹಿಸಿ, ಅವರನ್ನು ಧರ್ಮಿಷ್ಠರನ್ನಾಗಿ ಮಾಡುವುದಕ್ಕೆ ಬೇಕಾದ ಮಿಲಿಟರಿ ಸಾಮಗ್ರಿಗಳೂ, ಯಂತ್ರಗಳೂ ಸಿದ್ಧವಾಗಿಲ್ಲದಿದ್ದರೆ, ಅನರ್ಥಕ್ಕೆ ಅವಕಾಶವಾಗಬಹುದೆಂದು ಭಾವಿಸಿ, ಮಿಲಿಟರಿ ಏರ್ಪಾಡುಗಳು ಸರ್ವಸಮರ್ಪಕವಾಗಿರುವಂತೆ ಮಾಡಲ್ಪಟ್ಟವು. ದೇಶಾಂತರದ ವರ್ತ

ಕರಿಗೆ ನಿರ್ಬಂಧಗಳೆಲ್ಲಾ ತಪ್ಪಿಸಲ್ಪಟ್ಟಿದ್ದಾಗ್ಯೂ, ಜನಗಳನ್ನು ಉನ್ಮತ್ತರನ್ನಾಗಿ ಮಾಡುವ ನಿಷಾದ್ರವ್ಯವೇ ಮೊದಲಾದವುಗಳನ್ನು ಆಮದುಮಾಡುವುದಕ್ಕೆ ಭಯಂಕರವಾದ ನಿರ್ಬಂಧಗಳನ್ನು ಕಲ್ಪಿಸಿದನು. ಶೇಂದಿ, ಸಾರಾಯಿ ಮೊದಲಾದ ಪದಾರ್ಥಗಳು ಸ್ಯಾಲ್ಕೇಟರ್ಸ್ ಪಟ್ಟಣದಲ್ಲಿ ತಯಾರ್ಮಾಡದಂತೆ ಏರ್ಪಾಡು ಮಾಡಿದನು. ದೇಶಾಂತರಗಳಿಂದ ಅವುಗಳು ಆಮದಾಗದಂತೆಯೂ ಏರ್ಪಾಡು ಮಾಡಲ್ಪಟ್ಟವು. ಈ ಏರ್ಪಾಡಿಗೆ ವಿರೋಧವಾಗಿ ನಡೆಯತಕ್ಕವರು ಮರಣದಂಡನೆಗೆ ಗುರಿಮಾಡಲ್ಪಡುವಂತೆ ಏರ್ಪಾಡುಗಳನ್ನು ಮಾಡಿದನು. ಚಿನ್ನ, ಬೆಳ್ಳಿ ಮೊದಲಾದವುಗಳಿಂದ ಮಾಡಲ್ಪಟ್ಟ ಆಭರಣಗಳೂ, ನಾನಾವಿಧರತ್ನಖಚಿತಗಳಾದ ಆಭರಣಗಳೂ ಇವುಗಳ ಉಪಯೋಗವು ಪ್ರತಿಷೇಧಿಸಲ್ಪಟ್ಟವು. ಅರಮನೆಯಲ್ಲಿರತಕ್ಕ ಜವಾಹಿರಿಗಳನ್ನೆಲ್ಲಾ ತರಿಸಿ, ಕರಗಿಸಿ, ಧರಿಸುವುದಕ್ಕೆ ಆಗದಂತೆ ಮಾಡಲ್ಪಟ್ಟವು. ಈ ವಿಷಯದಲ್ಲಿ ಇಡುವಿಾ ನಿಯಮನನ್ನು ಕುರಿತು ಮೆಂಟರನು ಹೇಳಿದ್ದೇನಂದರೆ:—

"ಆರೋಗ್ಯದಿಂದ ಉಂಟಾಗತಕ್ಕ ಕಾಂತಿಯು ಆಭರಣದಿಂದ ಎಂದಿಗೂ ಉಂಟಾಗುವುದಿಲ್ಲ. ಉಡಿಗೆ-ತೊಡಿಗೆಗಳಿಂದ ಉಂಟಾಗತಕ್ಕ ಕಾಂತಿಯು ಸ್ವಭಾವಸಿದ್ಧವಾದದ್ದಲ್ಲ. ಪ್ರಭುಗಳೇ ಮೊದಲಾದವರು ಪ್ರಕಾಶಮಾನವಾದ ಉಡಿಗೆ ತೊಡಿಗೆಗಳನ್ನು ಹಾಕಿಕೊಂಡು ವಿಜೃಂಭಿಸುವರು. ಇವರಂತೆ ತಾವೂ ವಿಜೃಂಭಿಸಬೇಕೆಂದು ವಿವೇಕಹೀನರಾದ ಪ್ರಜೆಗಳೂ ಕೂಡ ಪ್ರಯತ್ನ ಮಾಡುವರು. ಈ ಪ್ರಯತ್ನದಿಂದ ಪ್ರಭುಗಳೇ ಮೊದಲಾದ ಉಪಪನ್ನರು ಕೆಟ್ಟ ಮೇಲ್ಪಂಗ್ತಿಯನ್ನು ಹಾಕಿ, ದೇಶದ ಬಂಡವಾಳದಲ್ಲಿ ಒಂದು ದೊಡ್ಡ ಭಾಗವು ಪ್ರತಿಫಲವಿಲ್ಲದೆ, ಆಭರಣ ರೂಪವಾಗಿ ಬಿದ್ದಿರುವ ಅವಸ್ಥೆಯು ಬರುವುದು. ಉಡಿಗೆ-ತೊಡಿಗೆಗಳೇ ಬೇಡವೆಂದು ನನ್ನ ಅಭಿಪ್ರಾಯವಲ್ಲ. ಗಂಭೀರವಾಗಿರುವುದಕ್ಕೆ ಬೇಕಾದ ಉಡಿಗೆ ತೊಡಿಗೆಗಳು ಮಾಡಲ್ಪಡಲಿ. ಸಂಪದಭಿವೃದ್ಧಿಗೆ ವಿರೋಧವಾದ ಪ್ರಯತ್ನಗಳು ಮಾತ್ರ ಮಾಡಲ್ಪಡಬಾರದು. ಉಪಪನ್ನರಾದವರು ಈ ವಿಷಯದಲ್ಲಿ ಕೆಟ್ಟ ಮೇಲ್ಪಂಗ್ತಿಯನ್ನು ಹಾಕಬಾರದು. ಯಾವ ಉಡಿಗೆ-ತೊಡಿಗೆಗಳು ವಿಶೇಷ ಬೆಲೆಯುಳ್ಳವುಗಳಲ್ಲವೋ, ಯಾವ ಉಡಿಗೆ-ತೊಡಿಗೆಗಳು ಆರೋಗ್ಯಕ್ಕೂ, ಗಾಂಭೀರ್ಯಕ್ಕೂ ಆವಶ್ಯಕಗಳೋ ಅಷ್ಟು ಉಡಿಗೆ-ತೊಡಿಗೆಗಳಲ್ಲಿ ಸರ್ವರೂ ತೃಪ್ತರಾಗಿರಬೇಕು. ಈ ವಿಷಯದಲ್ಲಿ ಕೆಟ್ಟ ಮೇಲ್ಪಂಗ್ತಿಯನ್ನು ಹಾಕತಕ್ಕವರಿಗೆ ಬಲವಾದ ಶಿಕ್ಷೆಯು ಮಾಡಲ್ಪಡಬೇಕು." ಈ ರೀತಿಯಲ್ಲಿ ಮೆಂಟರು ಅಪ್ಪಣೆ ಕೊಡಿಸಿ

ದ್ದನ್ನು ಕೇಳಿ, ಇಡುವಿನಾನಿಯುಕ್ತ ಮೊದಲಾದವರು ಸಂತೋಷದಿಂದ ಸಮ್ಮತಿಸಿದರು.

ಅನಾದಿಯಾಗಿ ಒಳ್ಳೇ ವಂಶಕ್ಕೆ ಸೇರಿದವರಾಗಿಯೂ, ಪರಂಪರೆಯಾಗಿ ಒಳ್ಳೇ ಶೀಲಸ್ವಭಾವವನ್ನು ಅನುಷ್ಠಾನದಲ್ಲಿಟ್ಟುಕೊಂಡಿರತಕ್ಕವರಾಗಿಯೂ ಇರತಕ್ಕವರನ್ನು ನಿನ್ನ ಆಸ್ಥಾನದಲ್ಲಿ ಮೊದಲನೇ ಮರ್ಯಾದೆಗೆ ಅರ್ಹರನ್ನಾಗಿ ಮಾಡು. ಯೋಗ್ಯತೆ, ಅಧಿಕಾರ ಇವುಗಳಿಂದ ಗಣನೀಯರಾದವರು ಎರಡನೇ ಮರ್ಯಾದೆಯನ್ನು ಹೊಂದಲಿ. ಪರಂಪರೆಯಾಗಿ ವಿದ್ಯಾವಿನಯ ಸಂಪತ್ತುಗಳಲ್ಲಿ ಪ್ರಸಿದ್ಧರಾದವರಿಗೆ ಮೊದಲು ಮರ್ಯಾದೆಯಾದರೆ, ಅದಕ್ಕಾಗಿ ಪರಂಪರೆಯಾಗಿ ಈ ಸಂಪತ್ತನ್ನು ಹೊಂದದೆ ಇರತಕ್ಕವರು ವಿಷಾದಿಸುವುದಿಲ್ಲ. ಹಾಗೆ ವಿಷಾದಿಸಲೂ ಬಾರದು. ಹಾಗೆ ವಿಷಾದಿಸುವುದಕ್ಕೆ ಅವಕಾಶವನ್ನು ಕೊಡಕೂಡದು. ಹಾಗೆ ಅವಕಾಶವನ್ನು ಕೊಟ್ಟ ಪಕ್ಷದಲ್ಲಿ, ಪರಂಪರೆಯಾಗಿ ನಿನ್ನಲ್ಲಿ ರಾಜಭಕ್ತಿವಿಶ್ವಾಸಗಳನ್ನು ಹೊಂದಿದ್ದವರು ಹೊಸ ನೀರು ಬಂದು, ಹಳೇ ನೀರನ್ನು ಕೊಚ್ಚಿಕೊಂಡು ಹೋಗುವ ಸಂಭವ ಉಂಟಾಯಿತೆಂದು ವಿಷಾದಿಸುವರು. ಅದಕ್ಕೆ ಅವಕಾಶವನ್ನು ಕೊಡಕೂಡದು. ಹೊಸ ಪ್ರೀತಿಗಿಂತಲೂ ಬಹು ಕಾಲದಿಂದ ಬಂದ ಪ್ರೀತಿಯು ದೊಡ್ಡದು. ದತ್ತಪುತ್ರನ ಪ್ರೀತಿಗಿಂತಲೂ ಔರಸನ ಪ್ರೀತಿಯು ಹೆಚ್ಚಾದದ್ದಲ್ಲವೇ ? ರೂಢಮೂಲವಾದ ಪ್ರೀತಿಯನ್ನು ಉಪರಿಪ್ಲವವಾದ ಪ್ರೀತಿಗೋಸ್ಕರ ಕಳೆದುಕೊಳ್ಳುವುದು ನ್ಯಾಯವಲ್ಲ. ನೌಕರರು ಸತ್ಯವಂತರಾಗಿಯೂ, ಧರ್ಮಿಷ್ಟರಾಗಿಯೂ, ಪ್ರಾಮಾಣಿಕರಾಗಿಯೂ ಇರುವಂತೆ ಮಾಡುವುದು ಪ್ರಭುಗಳಿಗೆ ಮುಖ್ಯಕರ್ತವ್ಯ. ಸಂಸ್ಥಾನದ ಸೇವೆಯು ಜಗದೀಶ್ವರನ ಸೇವೆಯೆಂದು ಅವರಿಗೆ ಭಾವನೆಯು ಉಂಟಾಗುವಂತೆ ಮಾಡಬೇಕು. ಈ ಭಾವನೆಯು ಹೇಗೆ ಉಂಟಾಗುವುದೋ ಅದನ್ನು ನೀನು ಪರ್ಯಾಲೋಚಿಸಬೇಕು. ನೀನು ಜಗದೀಶ್ವರನಂತೆ ನಡೆದರೆ, ನಿನ್ನಲ್ಲಿ ಸರ್ವರಿಗೂ ಈಶ್ವರಾಂಶವುಳ್ಳವನೆಂಬ ಭಾವನೆಯು ಹುಟ್ಟುವುದು. ಈಶ್ವರನ ಸ್ವಭಾವವ್ಯಾವುದು ? ಧರ್ಮವನ್ನು ರಕ್ಷಿಸುವುದು, ಅಧರ್ಮವನ್ನು ಶಿಕ್ಷಿಸುವುದು. ಈ ವಿಷಯದಲ್ಲಿ ನಿರ್ದಾಕ್ಷಿಣ್ಯಪರನಾಗಿ ಯಾವನಿರುವನೋ ಅವನಲ್ಲಿ ಪಾಪಿಷ್ಠರೂ ಕೂಡ ಅನುರಕ್ತರಾಗುತ್ತಾರೆ. ನಿಗ್ರಹಿಸಲ್ಪಟ್ಟರೂ ಅವರಿಗೆ ದ್ವೇಷವು ಹುಟ್ಟುವುದಿಲ್ಲ. ಅಪರಾಧಕ್ಕೆ ತಕ್ಕ ಶಿಕ್ಷೆಯು ತಮಗೆ ಲಭ್ಯವಾಯಿತೆಂದು ಅಂತಃಕರಣದಲ್ಲಿ ಭಾವಿಸುವರು. ದುಷ್ಟನಿಗ್ರಹ, ಶಿಷ್ಟಪರಿಪಾಲನೇ

ಪ್ರಭುವಿಗೆ ಅನುಷ್ಠೇಯವಾದ ಮುಖ್ಯಕರ್ತವ್ಯ. ಯಾವ ಪ್ರಭುವು ನಿರ್ದಾಕ್ಷಿಣ್ಯ ಪರನಾಗಿ, ಪಾಪಮಾಡತಕ್ಕವರು ತಂದೆತಾಯಿಗಳಾಗಲಿ, ಬಂಧುಮಿತ್ರರಾಗಲಿ, ಗುರುಹಿರಿಯರಾಗಲಿ ಲಕ್ಷ್ಯಮಾಡದೆ, ಅವರವರ ಕರ್ಮಫಲವನ್ನು ಅವರು ಅನುಭವಿಸುವಂತೆ ಮಾಡುವನೋ ಅವನಲ್ಲಿ ದೇವತಾಂಶವು ಪ್ರಚ್ಛನ್ನವಾಗಿ ಮಾತ್ರವೇ ಅಲ್ಲದೆ, ಬಹಿರಂಗವಾಗಿಯೂ ಇರುವುದು. ಅಂಥಾ ಪ್ರಭುವನ್ನು ದೇವತಾಂಶ ಸಂಭೂತನೆಂದು ಯಾರು ತಾನೆ ತಿಳಿದುಕೊಳ್ಳುವುದಿಲ್ಲ? ಅವನು ಮಾಡತಕ್ಕ ಶಿಕ್ಷೆಯು ಅನುಗ್ರಹದಂತೆ ಭಾವಿಸಲ್ಪಡುವುದು. ಆ ಶಿಕ್ಷೆಯಿಂದ ಪಾಪವು ಪರಿಹಾರವಾಗುವುದಕ್ಕೆ ಅವಕಾಶವಾಗುವುದು. ಅದೇ ಪ್ರಾಯಶ್ಚಿತ್ತ ಕರ್ಮವಾಗಿ ಭಾವಿಸಲ್ಪಡುವುದು. ಮೈನಾಸನು ಅವತಾರಪುರುಷನೆಂದು ಭಾವಿಸಲ್ಪಡುವುದಕ್ಕೆ ಕಾರಣವೇನು? ಮನೋವಾಕ್ಕರ್ಮಗಳಲ್ಲಿ ಪರಿಶುದ್ಧನಾಗಿದ್ದುಕೊಂಡು, ಸತ್ಯಕ್ಕೂ, ಧರ್ಮಕ್ಕೂ ಲೋಪ ಬರದಂತೆ ಮಾಡುವುದೇ ಮುಖ್ಯ ಕರ್ತವ್ಯವೆಂದು ತಿಳಿದುಕೊಂಡು ಅವನು ಕೆಲಸ ಮಾಡುತ್ತಿದ್ದನು. ಅವನ ವಂಶಸ್ಥನಾದ ನಿನ್ನಲ್ಲಿ ಈ ಗುಣಾತಿಶಯಗಳು ಇದ್ದೇ ಇರುವುವು. ದಾಕ್ಷಿಣ್ಯಪರವಶತೆಯಿಂದ ಈ ಗುಣಾತಿಶಯಗಳಿಗೆ ಗ್ಲಾನಿಯುಂಟಾಗಿರುವುದು. ಇದನ್ನು ಕ್ರಮಪಡಿಸಿಕೊಂಡು, ನಿರ್ದಾಕ್ಷಿಣ್ಯಪರನಾದರೆ ನೀನು ಮೈನಾಸನಾಗುವುದೇನಾಶ್ಚರ್ಯವಲ್ಲ! ಬೆಂಕಿಯನ್ನು ಸರಿಯಾಗಿ ಉಪಯೋಗಿಸಿಕೊಂಡರೆ, ಅದರ ಸಹಾಯದಿಂದ ಎಷ್ಟೋ ಪ್ರಯೋಜನಗಳನ್ನು ಹೊಂದಬಹುದು ಅದನ್ನು ದುರುಪಯೋಗಪಡಿಸಿದರೆ ಎಷ್ಟೋ ಅನರ್ಥಗಳು ಆಗುವುವು. ಪ್ರಭುಗಳು ಬೆಂಕಿಗೆ ಹೋಲಿಸಲ್ಪಡುವುದುಂಟು. ಎಲ್ಲಾ ಪ್ರಭುಗಳೂ ಹಾಗೆ ಇರುವುದು ಅಪೂರ್ವ. ಸ್ತುತಿಪಾಠಕರು ಎಂಥಾ ಪ್ರಭುವನ್ನಾದರೂ ತಮ್ಮ ಇಷ್ಟಾನುಸಾರವಾಗಿ ನಡೆಯುವಂತೆ ಮಾಡಿಕೊಳ್ಳಬಹುದೆಂದು ಪ್ರವರ್ತಿಸುವುದುಂಟು. ಸರಿಯಾದ ಮಾರ್ಗಗಳಿಗೆ ಎಳೆದರೆ, ಅವರ ಇಷ್ಟಾನುಸಾರವಾಗಿ ಹೋಗುವುದರಲ್ಲಿ ಯಾವ ಬಾಧಕವೂ ಇಲ್ಲ. ದುರ್ಮಾರ್ಗಕ್ಕೆ ಎಳೆದರೆ, ಪ್ರಭುಗಳು ಬೆಂಕಿಯ ಸ್ವಭಾವವನ್ನು ತೋರಿಸಬೇಕು. ಹಾಗೆ ಇಲ್ಲದಿದ್ದರೆ, ದುರ್ಮಾರ್ಗಪ್ರವರ್ತಕರು ತಾವು ಕೆಡುವುದಲ್ಲದೆ, ಪ್ರಭುಗಳನ್ನೂ ಕೂಡ ಅಧೋಗತಿಗೆ ಗುರಿಮಾಡುವರು. ಈ ವಿಷಯವನ್ನು ಪ್ರಭುಗಳಾದವರು ಸದಾ ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು.

ನಿನ್ನ ಆಸ್ಥಾನದ ಮಹಾಜನಗಳಲ್ಲಿ ತರಗತಿಗಳು ವಿಂಗಡಿಸಲ್ಪಡಬೇಕು. ಸತ್ಯವೂ, ಧರ್ಮವೂ, ಶೀಲಸ್ವಭಾವಗಳೂ ಇವೇ ಮೊದಲಾದ ಗುಣಾತಿಶಯಗಳಿಗನು

ಸಾರವಾಗಿ ಮಹಾಜನಗಳ ತಾರತಮ್ಯವು ಗೊತ್ತುಮಾಡಲ್ಪಡಬೇಕು. ಒಂದನೇ ತರಗತಿಯವರು ಚಿನ್ನದ ಸರಿಗೆಯುಳ್ಳ ಬಿಳಿಯ ಉಡಿಗೆಗಳುಳ್ಳವರಾಗಿರಬೇಕು. ಚಿನ್ನದ ಉಂಗುರ, ಚಿನ್ನದ ಬಿರುದು ಬಿಲ್ಲೆಗಳು, ಚಿನ್ನದ ಹಾರ, ನಾಯಿಕಮಣಿಯಲ್ಲಿ ನಿನ್ನ ಪ್ರತಿಮೆ ಇವುಗಳೆಲ್ಲಾ ಅವರ ಭೂಷಣಗಳಾಗಿರಬೇಕು. ಎರಡನೇ ತರಗತಿಯವರು ನೀಲಿ ಉಡಿಗೆಗಳನ್ನು ಹಾಕಿಕೊಂಡಿರಬೇಕು. ಅದಕ್ಕೆ ಬೆಳ್ಳಿ ಅಂಚು ಇರಬೇಕು. ಬಿರುದು ಬಿಲ್ಲೆಗಳು ಮಾತ್ರ ಅವರಿಗೆ ಇರಕೂಡದು. ಮೂರನೇ ತರಗತಿಯವರ ಉಡಿಗೆಯು ಹಸುರಾಗಿರಬೇಕು. ಸಾಮಾನ್ಯವಾದ ರೇಷ್ಮೆ ಅಂಚು, ಉಂಗುರಗಳು ಇವುಗಳನ್ನು ಅವರು ಧರಿಸಬೇಕು. ನಾಲ್ಕನೇ ತರಗತಿಯವರು ಚಿನ್ನದ ಬಣ್ಣವುಳ್ಳ ಉಡಿಗೆಯನ್ನೂ, ಐದನೇ ತರಗತಿಯವರು ಊದಾ ಬಣ್ಣದ ಉಡಿಗೆಯನ್ನೂ, ಆರನೇ ತರಗತಿಯವರು ಕೆಂಪು ಮತ್ತು ಬಿಳುಪು ಬಣ್ಣವುಳ್ಳ ಉಡಿಗೆಯನ್ನೂ, ಏಳನೇ ತರಗತಿಯವರು ಬಿಳಿ ಬಣ್ಣ ಮತ್ತು ಚಿನ್ನದ ಬಣ್ಣವುಳ್ಳ ಉಡಿಗೆಯನ್ನೂ ಹಾಕಿಕೊಳ್ಳಬೇಕು. ಈ ದರ್ಬಾರಿಗಳಿಗೆ ಅವರವರ ವಿದ್ವತ್ತೂ, ಗುಣಾತಿಶಯಗಳೂ ಹೆಚ್ಚಿದ ಹಾಗೆಲ್ಲಾ ಒಂದು ತರಗತಿಯಿಂದ ಮೇಲಿನ ತರಗತಿಗೆ ಬಡಾವಣೆಯನ್ನು ಮಾಡಬೇಕು. ಧರ್ಮದಿಂದಲೂ ಸತ್ಯದಿಂದಲೂ ಚ್ಯುತಿಯನ್ನು ಹೊಂದಿದರೆ, ಅವರನ್ನು ಮೇಲಿನ ತರಗತಿಯಿಂದ ಕೆಳಗಿನ ತರಗತಿಗೆ ಕಳುಹಿಸಬೇಕು. ಊಳಿಗದವರಿಗೆ ಕರಿ ಡ್ರೆಸ್ಸನ್ನು ಕೊಡಬೇಕು. ಅವರ ದಿರಸನ್ನು ನೋಡಿದ ಕೂಡಲೆ, ಅವರ ಪದವಿಯು ಗೊತ್ತಾಗುವಂತೆ ಮಾಡಲ್ಪಡಬೇಕು. ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದವುಗಳೇ ಪ್ರಭುಗಳ ಸಂಪತ್ತಿಗೆ ಮುಖ್ಯಕಾರಣಗಳು. ಅವುಗಳಿಗೆ ಪ್ರೋತ್ಸಾಹವನ್ನು ಮಾಡುವುದರಲ್ಲಿ ಕೇವಲ ಜಾಗರೂಕನಾಗಿರಬೇಕು. ನಿನ್ನ ಪ್ರಜೆಗಳಲ್ಲಿ ನಿರುದ್ಯೋಗಿಗಳಾಗಿರತಕ್ಕ ಸ್ತ್ರೀಪುರುಷರು ಯಾರೂ ಇಲ್ಲದಂತೆ ನೋಡಿಕೊಳ್ಳಬೇಕು. ರೋಗಾದಿಗಳಿಂದ ಪೀಡಿತರಾದವರು ಮಾತ್ರ ರೋಗದಿಂದ ತಪಿಸುತ್ತಿರುವಾಗ ವಿಶ್ರಾಂತಿಯನ್ನು ಹೊಂದಬಹುದು. ರೋಗವು ವಾಸಿಯಾದ ಕೂಡಲೆ, ಅವರು ಉದ್ಯೋಗಿಗಳಾಗಬೇಕು. ಸ್ತ್ರೀಪುರುಷರಿಗೆ ಅನುರೂಪವಾದ ಉದ್ಯೋಗಗಳನ್ನು ಕಲ್ಪಿಸಿ, ವೃಥಾ ಕಾಲಕ್ಷೇಪಕ್ಕೆ ಅವರಿಗೆ ಅವಕಾಶವಿಲ್ಲದಂತೆ ಮಾಡಬೇಕು. ಮನಸ್ಸಿಗೂ, ಕೈಕಾಲುಗಳಿಗೂ ಸದ್ವ್ಯಾಪಾರಗಳನ್ನು ಕಲ್ಪಿಸುವುದು ಸರ್ಕಾರದವರಿಗೆ ಮುಖ್ಯ ಕರ್ತವ್ಯ. ಈ ವಿಷಯದಲ್ಲಿ ಸರ್ಕಾರದವರು ಉಪೇಕ್ಷಿಸಿದರೆ, ಉಪೇಕ್ಷೆಗೆ ಗುರಿಯಾದ ಜನಗಳು

ದುರ್ವ್ಯಾಪಾರಗಳನ್ನು ತಾನೇ ಕಲ್ಪಿಸಿಕೊಳ್ಳುವರು. ಸುಶಿಕ್ಷಿತರಾದವರು ಆತ್ಮಾವಲಂಬಿಗಳಾಗಿ, ತಮಗೂ, ತಮ್ಮ ಪ್ರಭುವಿಗೂ ಕೂಡ ಕೀರ್ತಿಯನ್ನು ತಂದುಕೊಳ್ಳುವರು. ದುರ್ಮಾರ್ಗಪ್ರವರ್ತಕರು ತಮಗೂ, ತಮ್ಮ ದೇಶಕ್ಕೂ, ತಮ್ಮ ಪ್ರಭುವಿಗೂ ಅಪಕೀರ್ತಿಯನ್ನು ತರುವರು. ಆದುದರಿಂದ ನಿನ್ನ ಪ್ರಜೆಗಳಲ್ಲಿ ಯಾವ ಯಾವ ಜನಗಳು ಅವರ ಗುಣಕರ್ಮಗಳಿಗನುಸಾರವಾಗಿ ಯಾವ ಯಾವ ಸ್ಥಿತಿಯಲ್ಲಿರಬೇಕೋ ಅದನ್ನು ಗೊತ್ತುಮಾಡಿ, ಅವರವರ ಯೋಗ್ಯತೆಗೆ ತಕ್ಕ ಸ್ಥಳದಲ್ಲಿ ಅವರನ್ನು ಇಟ್ಟು, ಅವರಿಗೆ ತಕ್ಕ ಮರ್ಯಾದೆಗಳನ್ನು ಮಾಡುವುದು ನಿನಗೆ ಮುಖ್ಯ ಕರ್ತವ್ಯ. ದೊಡ್ಡ ಪದವಿಯಲ್ಲಿರತಕ್ಕವರು ಅವರ ಪದವಿಗೆ ಅನುರೂಪವಾದ ಆಹಾರ, ಪಾನ, ವಿಹಾರಗಳನ್ನು ಹೊಂದಬೇಕು. ಯಾವ ಆಹಾರವಿಹಾರಗಳಿಂದ ಮನಸ್ಸು ದುರ್ಬಲವಾಗುವುದೋ, ದೇಹಕ್ಕೆ ಬಾಧಕವಾಗುವುದೋ, ವಿಷಯಾಸಕ್ತಿಗಳು ಹೆಚ್ಚುವುವೋ, ದೇವತಾವಸ್ಥೆಯನ್ನು ಕಳೆದುಕೊಂಡು, ತಿರ್ಯಗ್ಜಂತುಗಳ ಅವಸ್ಥೆಗೆ ಬರುವರೋ ಅಂಥಾ ಆಹಾರವಿಹಾರಗಳು ಪರಿತ್ಯಾಜ್ಯಗಳು. ಆಹಾರನಿಯಮವೂ, ಪಾನನಿಯಮವೂ, ವಿಹಾರ ನಿಯಮವೂ ಯಾರಿಗಿರುವುವೋ ಅವರು ದೇವರಿಗೆ ಸಮಾನರಾಗುವರು. ಈ ನಿಯಮವನ್ನು ಬಿಟ್ಟು, ಆಹಾರ ವಿಹಾರಗಳಲ್ಲಿ ಮನಸ್ಸು ಪ್ರವರ್ತಿಸತಕ್ಕವರು ತಿರ್ಯಗ್ಜಂತುಗಳಿಗೆ ಸಮಾನವಾಗುವರು. ಪ್ರಭುಗಳೂ ಮತ್ತು ಅಧಿಕಾರಿಗಳೂ ಸತ್ಯವಂತರಾಗಿಯೂ, ಧರ್ಮಿಷ್ಠರಾಗಿಯೂ ಇರಬೇಕು. ಹಾಗೆ ಇರಬೇಕಾದರೆ ಅವರಿಗೆ ಶಾಂತಿಯು ಇರಬೇಕು. ಶಾಂತಿಯಿರಬೇಕಾದರೆ, ಆಹಾರ ವಿಹಾರ ನಿಯಮವು ಇರಬೇಕು. ಯಾವ ಆಹಾರದಿಂದಲೂ, ಪಾನದಿಂದಲೂ ಪುಷ್ಟಿಯುಂಟಾಗುವುದೋ, ಉನ್ಮತ್ತತೆಯುಂಟಾಗುವುದಿಲ್ಲವೋ, ಯಾವ ಆಹಾರವಿಹಾರಗಳು ಶಾಂತಿಗೆ ಬಾಧಕವನ್ನು ಮಾಡುವುದಿಲ್ಲವೋ, ಯಾವ ಉಡಿಗೆ-ತೊಡಿಗೆಗಳು ಅಹಂಕಾರ ಮೊದಲಾದವುಗಳಿಗೆ ಮಾತೃಸ್ಥಾನವಾಗುವುದಿಲ್ಲವೋ ಅವುಗಳು ಉಪಾದೇಯಗಳು. ಯಾವ ಆಹಾರವಿಹಾರಗಳಿಂದಲೂ, ಉಡಿಗೆ-ತೊಡಿಗೆಗಳಿಂದಲೂ ಪ್ರಭುಗಳೂ, ಅಧಿಕಾರಿಗಳೂ ತಮ್ಮ ಸ್ವರೂಪವನ್ನು ಮರೆತು, ಶಾಂತಿಯನ್ನು ಕಳೆದುಕೊಂಡು, ತಿರ್ಯಗ್ಜಂತುಗಳ ಸ್ಥಿತಿಗೆ ಬರುವರೋ ಆ ಆಹಾರ ಪಾನ, ಉಡಿಗೆ ತೊಡಿಗೆಗಳು ಸಾಧುವಾದವುಗಳಲ್ಲ. ಅವುಗಳೆಲ್ಲಾ ಪರಿತ್ಯಾಜ್ಯಗಳು. ನೃಪಾಲನು ಆಹಾರ ವಿಹಾರಗಳ ವಿಷಯದಲ್ಲಿ ಮಾತ್ರವೇ ಅಲ್ಲದೆ, ನಡೆನುಡಿಗಳ ವಿಷಯದಲ್ಲಿಯೂ ಜನಗಳು ಹೇಗೆ ಇರಬೇಕೋ ಅದನ್ನು

ನಿಷ್ಕರ್ಷಿಸಿ, ಅವನ ಧರ್ಮಶಾಸ್ತ್ರಗಳಲ್ಲಿ ವಿಧಿನಿಷೇಧರೂಪಗಳಾದ ವಚನಗಳನ್ನು ಬರೆದಿರುವನು. ಯಾವ ಯಾವ ಆಹಾರಗಳೂ, ಪಾನಗಳೂ, ವಿಹಾರಗಳೂ ಉನ್ಮತ್ತತೆಗೆ ಅವಕಾಶವನ್ನು ಉಂಟುಮಾಡುವುದಿಲ್ಲವೋ ಅವುಗಳು ನಿಷ್ಕರ್ಷಿಸಲ್ಪಟ್ಟಿರುವುವು. ಯಾವ ಆಹಾರಗಳಿಂದಲೂ, ಪಾನಗಳಿಂದಲೂ, ವಿಹಾರಗಳಿಂದಲೂ ಶಾಂತಿಗೆ ಬಾಧಕವು ಉಂಟಾಗುವುದೋ, ಉನ್ಮತ್ತತೆಯು ಉಂಟಾಗುವುದೋ ಅವುಗಳು ಅಭಕ್ಷ್ಯಗಳೆಂಬದಾಗಿಯೂ, ಅಪೇಯಗಳೆಂಬದಾಗಿಯೂ, ಅಗಮ್ಯಗಳೆಂಬದಾಗಿಯೂ ವಿಧಾಯಕ ಮಾಡಲ್ಪಟ್ಟಿರುವುವು. ಅಭಕ್ಷ್ಯಭೋಜನಗಳನ್ನೂ, ಅಪೇಯಪಾನಗಳನ್ನೂ, ಅಗಮ್ಯಾಗಮನಗಳನ್ನೂ ಪರಿತ್ಯಾಗ ಮಾಡುವುದರಲ್ಲಿ ಪ್ರಭುಗಳೂ, ಅಧಿಕಾರಿಗಳೂ ಮೇಲ್ಪಂಕ್ತಿಯನ್ನು ಹಾಕಬೇಕು. ಅವರು ಮೇಲ್ಪಂಕ್ತಿಯನ್ನು ಹಾಕಿದರೆ, ಪ್ರಜೆಗಳು ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಅವರನ್ನು ವಿಾರಿಸುವ ಸ್ಥಿತಿಗೆ ಬಂದರೆ ಅದೇನಾಶ್ಚರ್ಯವಲ್ಲ. ಹಿರಿಯರು ಪಾಪವನ್ನು ಮಾಡಿದರೆ, ಕಿರಿಯವರು ಅವರ ಮೇಲ್ಪಂಕ್ತಿಯನ್ನು ಅನುಸರಿಸುವರು. ಅವರಿಗಿಂತಲೂ ಹೆಚ್ಚಾಗುವರು. ಪ್ರಪಂಚವೆಲ್ಲಾ ಪಾಪಮಯವಾಗಿಯೂ; ಉನ್ಮತ್ತಮಯವಾಗಿಯೂ ಆಗುವುದು. ಪ್ರಭುಗಳ ಮತ್ತು ಅಧಿಕಾರಿಗಳ ಪಾಪವು ಪ್ರಪಂಚವನ್ನೆಲ್ಲಾ ಆವರಿಸಿಕೊಳ್ಳುವುದು. ಶಾಂತಿಗೂ, ಸತ್ಯಕ್ಕೂ, ಧರ್ಮಕ್ಕೂ ಗಡೀಪಾರಾಗುವುದು. ಇಂದ್ರಿಯಪರವಶತೆಯೂ, ಕೋಪತಾಪಗಳಿಗೆ ಅಧೀನತೆಯೂ, ಪರಸ್ಪರ ದ್ವೇಷಗಳೂ, ಕಲಹಗಳೂ, ಕೊಲೆಪಾತಕಗಳೂ ಪರಾಕಾಷ್ಠದೆಸೆಗೆ ಬರುವುವು. ಪ್ರಪಂಚವೇ ನರಕವಾಗಿ ಪರಿಣಮಿಸುವುದು. ಸತ್ಯದಲ್ಲಿಯೂ, ಧರ್ಮದಲ್ಲಿಯೂ, ದೇವರಲ್ಲಿಯೂ, ಗುರುಹಿರಿಯರಲ್ಲಿಯೂ ಭಕ್ತಿಯು ತಪ್ಪುವುದು. ಇಂದ್ರಿಯಪರವಶರಾದ ಪ್ರಭುಗಳ ಸಂಸ್ಥಾನವು ಭೂಲೋಕದ ನರಕಗಳಾಗಿ ಪರಿಣಮಿಸುವುವು. ಪ್ರಭುಗಳೂ, ಅಧಿಕಾರಿಗಳೂ ಮಾಡಿದ ಪಾಪಫಲವನ್ನು ಲೋಕವೆಲ್ಲಾ ಅನುಭವಿಸಬೇಕಾಗುವುದು. ಪಾಪಕರ್ಮಗಳಿಂದ ಪಾಪಿಷ್ಠರ ದೇಶಗಳೇ ನರಕವಾಗಿ ಪರಿಣಮಿಸುವುವು. ಇದನ್ನು ಪರಿಶೀಲಿಸಿ, ಭಾರತೀಯರು 'ರಾಜಾಕಾಲಸ್ಯಕಾರಣಂ' ಎಂಬದಾಗಿ ನಿಷ್ಕರ್ಷಿಸಿರುವರು. ಈ ಅಭಿಪ್ರಾಯವನ್ನು ಮೈನಾಸನೂ ಕೂಡ ಒಪ್ಪಿ, ತನ್ನ ಧರ್ಮಶಾಸ್ತ್ರಗಳಲ್ಲಿ ಪಾಪಮಾಡತಕ್ಕ ಪ್ರಭುಗಳು ತಮ್ಮ ದೇಶವು ನರಕವಾಗುವಂತೆ ಮಾಡುವರೆಂಬದಾ

ಗಿಯೂ, ಪುಣ್ಯಮಾಡುವ ಪ್ರಭುಗಳು ತಮ್ಮ ದೇಶವು ಸ್ವರ್ಗವಾಗುವಂತೆ ಮಾಡು ವರೆಂಬದಾಗಿಯೂ ಬರೆದಿರುವನು. ನಿನ್ನ ಪಿತಾಮಹನು ಬರೆದಿರತಕ್ಕ ಈ ಧರ್ಮ ಸೂಕ್ಷ್ಮಗಳನ್ನು ಚನ್ನಾಗಿ ಪರಿಶೀಲಿಸಿ ತಿಳಿದುಕೊಂಡು, ಅದನ್ನು ಅನುಷ್ಠಾನಕ್ಕೆ ತಂದುಕೊಳ್ಳುವುದು ನಿನಗೆ ಕರ್ತವ್ಯ.

ಅದು ಹಾಗಿರಲಿ. ಈ ಸ್ಯಾಲೆಟ್ ಪಟ್ಟಣದಲ್ಲಿ ಕೋಟ್ಯಂತರ ರೂಪಾಯಿಗಳನ್ನು ಖರ್ಚುಮಾಡಿ, ನೀನು ಅರಮನೆಯನ್ನು ಕಟ್ಟಿಸಿರುವಿ. ವಿಹಾರಾರ್ಥವಾಗಿ ಉಪವನಗಳನ್ನು ಮಾಡಿ, ಅತ್ಯಂತ ಮನೋಹರವಾದ ಇಂದ್ರಭವನಗಳಿಗೆ ಸಮಾನವಾದ ಸೌಧಗಳನ್ನು ಏರ್ಪಡಿಸಿರುವಿ. ಜಲಯಂತ್ರಗಳೇ ಮೊದಲಾದವುಗಳು ಎಲ್ಲೆಲ್ಲಿಯೂ ಮನೋಹರವಾಗಿ ಕಾಣುತ್ತಲಿವೆ. ಈ ಪಟ್ಟಣದಲ್ಲಿ ರಾಜಬೀದಿಗಳೆಲ್ಲಾ ಬಹಳ ಮನೋಹರವಾಗಿವೆ. ಬಚ್ಚಲು ನೀರು ಹೋಗತಕ್ಕ ಏರ್ಪಾಡೂ, ಸೂರ್ಯಚಂದ್ರರೋಪಾದಿಯಲ್ಲಿ ಬೆಳಕನ್ನು ಕೊಡತಕ್ಕ ವಿದ್ಯುಚ್ಛಕ್ತಿಯ ಏರ್ಪಾಡುಗಳೂ ಇವುಗಳೆಲ್ಲಾ ಬಹಳ ಮನೋಹರವಾಗಿವೆ. ಈ ರಾಜಬೀದಿಗಳನ್ನು ಬಿಟ್ಟು ಹಿಂದಿನ ಬೀದಿಗಳಿಗೆ ಹೋಗಿ ನೋಡು. ರಾಜಬೀದಿಗಳನ್ನು ನೋಡಿದ ಕೂಡಲೆ ಎಷ್ಟು ಸಂತೋಷವಾಗುವುದೋ ಬಡವರು ವಾಸಮಾಡತಕ್ಕ ಮನೆಗಳನ್ನೂ, ಅಲ್ಲಿನ ಸ್ಯಾನಿಟರಿ ಏರ್ಪಾಡುಗಳನ್ನೂ, ಅಲ್ಲಿನ ನೀರಿನ ಏರ್ಪಾಡುಗಳನ್ನೂ, ಅಲ್ಲಿನ ದೀಪದ ಏರ್ಪಾಡುಗಳನ್ನೂ, ಅಲ್ಲಿ ಜನಗಳಿಂದ ವಿಸರ್ಜಿಸಲ್ಪಟ್ಟ ಜಲಮಲಗಳು ಕೊಳೆತು, ಅನೇಕ ರೋಗಗಳಿಗೆ ಅವಕಾಶ ಮಾಡುತ್ತಲಿರುವುದನ್ನೂ, ಅಲ್ಲಿ ಹುಟ್ಟತಕ್ಕ ಸಾಂಕ್ರಾಮಿಕ ರೋಗಗಳು ನಿನ್ನ ಊಳಿಗದವರ ಮೂಲಕ ನಿನ್ನ ಅರಮನೆಗೂ ಕೂಡ ಪ್ರವೇಶಿಸುತ್ತಲಿರುವುದನ್ನೂ, ನಿನ್ನ ಅಜ್ಞಾನಕ್ಕೆ ತಕ್ಕ ಶಿಕ್ಷೆಯನ್ನು ದೇವರು ನಿನ್ನಿಂದಲೇ ನಿನಗೆ ಮಾಡಿಸುವುದನ್ನೂ ನೋಡಿದರೆ ಯಾರಿಗೆ ತಾನೆ ವಿಷಾದವಾಗುವುದಿಲ್ಲ ! ಪ್ರಭುವಿಗೆ ಪ್ರಜೆಗಳೆಲ್ಲರೂ ಪುತ್ರಮಿತ್ರಕಳತ್ರಾದಿಗಳಿಗೆ ಸಮಾನರಾದವರಲ್ಲವೇ ? ಪ್ರಜೆಗಳು ಕಷ್ಟಪಟ್ಟು ಹಗಲೂರಾತ್ರಿ ದುಡಿದು ದವಸಧಾನ್ಯಗಳೇ ಮೊದಲಾದವುಗಳನ್ನು ಬೆಳೆದು, ರಾಜಪಾಲನ್ನು ನಿನಗೆ ಕೊಟ್ಟು; ಉಳಿದದ್ದರಲ್ಲಿ ಅವರೂ, ನೀನೂ, ನಿನ್ನ ಅಧಿಕಾರಿಗಳೂ ಹೇಗೋ ಹಾಗೆ ಸುಖವಾಗಿ ಜೀವಿಸುವಂತೆ ಮಾಡುವುದು ನಿನ್ನ ಕರ್ತವ್ಯವಲ್ಲವೇ ? ಪ್ರಜೆಗಳು ಕೊಡತಕ್ಕ ಸರ್ಕಾರದ ಹುಟ್ಟುವಳಿಯು ಪ್ರಜೆಗಳ ಕ್ಷೇಮಾರ್ಥವಾದ ಏರ್ಪಾಡುಗಳಿಗೆ ಗುಣೈಕಪಕ್ಷಪಾತತೆಯಿಂದ ಧರ್ಮಿಷ್ಠರಾದ ಅಧಿಕಾರಿಗಳನ್ನು ನಿಯಮಿಸಿ,

ದುಷ್ಟನಿಗ್ರಹ, ಶಿಷ್ಟಪರಿಪಾಲನೆಯನ್ನು ಮಾಡುತ್ತಾ, ಸಾಧ್ಯವಾದ ಮಟ್ಟಿಗೂ ಸರ್ವರೂ ಶಿಷ್ಟರಾಗುವಂತೆ ಮಾಡುವುದು ನಿನಗೆ ಕರ್ತವ್ಯವಲ್ಲವೇ ? ಸರ್ವರೂ ನಿರಪಾಧಿಕವಾಗಿ ಅನ್ನವಸ್ತ್ರಗಳನ್ನು ಹೊಂದುತ್ತಾ, ವಾಸಕ್ಕೆ ಆರೋಗ್ಯವಾದ ಗುಡಿಸಲುಗಳನ್ನಾದರೂ ಹೊಂದಿರುವಂತೆ ಮಾಡುವುದು ನಿನ್ನ ಕರ್ತವ್ಯವಲ್ಲವೇ ? ಜೀರ್ಣವಾಗಿ ತಲೆ ಮೇಲೆ ಬೀಳುವಂತೆ ಇರುವ ಈ ಮನೆಗಳನ್ನು ನೋಡು. ಹಗಲೂರಾತ್ರಿ ದುಡಿದು ಕೆಲಸ ಮಾಡಿ, ನಿನ್ನ ಸೇವೆಯನ್ನು ಮಾಡುತ್ತಲಿರುವ ಮಹಾಜನಗಳು ಇಂಥಾ ಮನೆಗಳಲ್ಲಿ ವಾಸಮಾಡುತ್ತಿದ್ದರೆ, ಇದನ್ನು ನೋಡಿಕೊಂಡು, ನಿನ್ನ ಅರಮನೆ, ನಿನ್ನ ಸೌಧಗಳು, ನಿನ್ನ ಉಪವನಗಳು, ನಿನ್ನ ಲಾಯಗಳು, ನಿನ್ನ ಕುದುರೆಗಳು, ನಿನ್ನ ಮೊಟಾರುಗಳು, ನಿನ್ನ ವಿಮಾನಗಳು ನಿನ್ನ ಇಂದ್ರಭೋಗ, ನಿನ್ನ ಮಹೇಂದ್ರ ಸಂಪತ್ತು ಇವುಗಳಲ್ಲಿ ಮಗ್ನನಾಗಿ, ಜೇನುಹುಳುಗಳಂತೆ ಕೆಲಸ ಮಾಡುವ ನಿನ್ನ ಪ್ರಜೆಗಳು ಇಂಥಾ ಅವಸ್ಥೆಯಲ್ಲಿರುವಂತೆ ಮಾಡುವುದು ನಿನಗೆ ಯೋಗ್ಯವೇ ? ಇದನ್ನು ನಿನ್ನ ಪಿತಾಮಹನು ಮೆಚ್ಚುವನೇ ? ಇದನ್ನು ದೇವರು ಮೆಚ್ಚುವನೇ ? ಇದನ್ನು ಸತ್ಪುರುಷರು ಮೆಚ್ಚುವರೇ ? ನಿನ್ನ ಪ್ರಜೆಗಳೆಲ್ಲಾ ಮಕ್ಕಳಿಗೆ ಸಮಾನರಾದವರಲ್ಲವೇ ? ಮಕ್ಕಳು ಹೊಟ್ಟೆತುಂಬಾ ಹಿಟ್ಟನ್ನೂ, ಮೈತುಂಬಾ ಬಟ್ಟೆಯನ್ನೂ, ಗಾಳಿ, ಮಳೆ, ಬಿಸಿಲು ಮೊದಲಾದವುಗಳ ಹಾವಳಿಯಿಂದ ರಕ್ಷಿಸಿಕೊಳ್ಳುವುದಕ್ಕೆ ಒಂದು ಗುಡಿಸಲನ್ನೂ ಕೂಡ ಹೊಂದುವುದಕ್ಕೆ ಇಲ್ಲದಂತಿರುವಾಗ ತಂದೆಯಾದವನಿಗೆ ಈ ದೇವೇಂದ್ರ ಭೋಗಗಳೆಲ್ಲಾ ಸಲ್ಲುವುವೇ ? ಅನ್ನೋದಕಗಳಿಲ್ಲದೆ ಮಕ್ಕಳು ಸಾಯುವಾಗ ಇಂಥಾ ಭೋಗಗಳನ್ನು ಅನುಭವಿಸುವ ತಂದೆಯು ತಂದೆಯೆನ್ನಿಸಿಕೊಳ್ಳುವುದಕ್ಕೆ ಯೋಗ್ಯನೇ ? ನಿನ್ನ ಪ್ರಜೆಗಳು ಈ ಅವಸ್ಥೆಯಲ್ಲಿರುವುದನ್ನು ನೋಡಿದರೆ, ನೀನು ಮೈನಾಸನ ಸಂತತಿಯವನೆಂದು ಹೇಳುವುದಕ್ಕಾಗುವುದೇ ? ಈ ವಿಷಯವನ್ನು ಪರ್ಯಾಲೋಚಿಸು. ನೀನು ಮಾಡಿರುವ ತಪ್ಪುಗಳನ್ನು ತಿದ್ದಿಕೊ. ನಿನ್ನ ಪ್ರಜೆಗಳಿಗೆಲ್ಲಾ ಆರೋಗ್ಯವಾದ ಗುಡಿಸಲುಗಳಾದರೂ ದೊರೆಯುವಂತೆ ಮಾಡು. ಅವರಿಗೆಲ್ಲಾ ಕದನ್ನವಾಗಲಿ, ಹೊಲಮಗ್ಗದ ಬಟ್ಟೆಗಳಾಗಲಿ ದೊರೆಯುವಂತೆ ಮಾಡು. ಅವರು ಉದ್ಯೋಗದಿಂದ ಉತ್ಪನ್ನವಾದ ಭೋಗ್ಯವಸ್ತುಗಳಲ್ಲಿ ಅವರ ಮೆಹನತ್ತಿಗೆ ತಕ್ಕಷ್ಟು ಅವರಿಗೆ ಉಳಿಯುವಂತೆ ಮಾಡು. ಅವರಲ್ಲಿ ಎಲ್ಲರೂ ಸುಖವಾಗಿಧಾರೆಯೇ ಇಲ್ಲವೇ ಎಂಬುವುದನ್ನು ಪರಿಶೀಲಿಸುವುದಕ್ಕೋಸ್ಕರ ಬಡವನ

ವೇಷವನ್ನು ಧರಿಸಿ, ದಿನಕ್ಕೆ ಎರಡು ಮೂರು ಗಂಟೆಗಳಾದರೂ ಸಂಚಾರ ಮಾಡಿ, ಅವರ ಕಷ್ಟನಷ್ಟಗಳನ್ನು ತಿಳಿದುಕೊ. ಕೂಡಲೆ ಅದನ್ನು ಪರಿಹರಿಸು. ಹೀಗೆ ನೀನು ಮಾಡಿದರೆ ಸರ್ವರಿಗೂ ನಿನ್ನಲ್ಲಿ ಅಕೃತ್ರಿಮವಾದ ರಾಜಭಕ್ತಿವಿಶ್ವಾಸಗಳು ಹುಟ್ಟುವುವು. ಪಿತೃನಿರ್ವಿಶೇಷವಾಗಿ ನಿನ್ನನ್ನು ಕಾಣುವರು. ನಿನ್ನ ಪ್ರಜೆಗಳಲ್ಲಿ ಅತ್ಯಂತ ಬಡವರಾದವರು ಯಾವ ಸ್ಥಿತಿಯಲ್ಲಿರುವರೋ ಅದಕ್ಕಿಂತಲೂ ಉತ್ತಮವಾದ ಸ್ಥಿತಿಯಲ್ಲಿರುವ ಪಕ್ಷದಲ್ಲಿ, ನೀನು ಪ್ರಭುವಾಗುವುದಕ್ಕೆ ಅರ್ಹನಲ್ಲ. ಅವನ ರಾಜಭಕ್ತಿವಿಶ್ವಾಸಗಳಿಗೆ ನೀನು ಅರ್ಹನೂ ಅಲ್ಲ. ಲೋಕಸೇವೆಯೇ ನಿನಗೆ ಮುಖ್ಯಕರ್ತವ್ಯ. ಲೋಕದಲ್ಲಿ ಎಲ್ಲರೂ ಅವರವರ ಕರ್ಮಗಳಿಗನುಸಾರವಾದ ಫಲವನ್ನು ಹೊಂದುವಂತೆ ಮಾಡಿ, ಜಗದೀಶ್ವರನು ಲೋಕವನ್ನು ಕಾಪಾಡುತ್ತಿರುವನು. ಅವನ ಮೇಲ್ಪಂಕ್ತಿಯನ್ನನುಸರಿಸಿ ನೀನೂ ನಿನ್ನ ಪ್ರಜೆಗಳನ್ನು ನಿನ್ನ ಮಕ್ಕಳಂತೆ ಕಾಪಾಡಬೇಕು. ಹಾಗೆ ಕಾಪಾಡಿದರೆ ನೀನು ದೇವರಿಗೆ ಸಮಾನನಾಗುತ್ತೀಯೆ. ತಪ್ಪಿದರೆ ನೀನು ಬ್ರಹ್ಮರಕ್ಷಸ್ಸು ಆಗುತ್ತೀಯೆ. ಈ ವಿಷಯಕ್ಕೆ ನಿನ್ನ ಗಮನವು ಕೊಡಲ್ಪಡಬೇಕು.

ಅನೇಕ ದೇಶಗಳಲ್ಲಿ ಸಂಗೀತಕ್ಕೆ ವಿಶೇಷ ಗಮನವು ಕೊಡಲ್ಪಡುವುದು. ಸಂಗೀತವು ಬಾಯಿನಿಂದ ಹಾಡುವುದು; ವಾದ್ಯವಿಶೇಷಗಳಿಂದ ನುಡಿಸುವುದು ಈ ಎರಡು ವಿಧವಾಗಿರುವುದಷ್ಟೆ. ಇವುಗಳಲ್ಲಿ ಇನ್ನೆರಡು ಭೇದಗಳುಂಟು. ಶೃಂಗಾರ ಚೇಷ್ಟೆಗಳಲ್ಲಿ ಆಸಕ್ತಿಯನ್ನು ಹುಟ್ಟಿಸಿ, ದುರ್ವಿಷಯಗಳಲ್ಲಿ ಬುದ್ಧಿಯು ಪ್ರವೇಶಿಸುವಂತೆ ಮಾಡಿ, ಇಂದ್ರಿಯಗ್ರಾಮಗಳಿಗೆ ಅಧೀನರಾಗಿ, ಆಸ್ತಿಕತೆಯನ್ನೂ, ಆರೋಗ್ಯವನ್ನೂ, ಸಕಲ ಸಂಪತ್ತುಗಳನ್ನೂ ಕಳೆದುಕೊಂಡು, ಸ್ತ್ರೀಪುರುಷರನ್ನು ಅಧೋಗತಿಗೆ ಗುರಿಮಾಡುವ ಸಂಗೀತವು ಇರುವುದು. ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತನಾದ ಸರ್ವೇಶ್ವರನು ದುಷ್ಟನಿಗ್ರಹ, ಶಿಷ್ಟಪರಿಪಾಲನವನ್ನು ಮಾಡುವುದರಲ್ಲಿ ಸಮಸ್ತ ಜನಗಳ ಮನೋವಾಕ್ಕರ್ಮಗಳನ್ನು ಸಾಧನವನ್ನಾಗಿ ಮಾಡಿ, ಅವರನ್ನು ಉದ್ಧರಿಸಿಕೊಳ್ಳುವುದಕ್ಕೆ ಅವರೇ ಕಾರಣವಾಗಿ ಹೇಗೆ ಆಗುವರೋ, ಅವರ ಅಧೋಗತಿಗೂ ಅವರೇ ಕಾರಣವಾಗಿ ಹೇಗೆ ಆಗುವರೋ, ಜಗದೀಶ್ವರನು ಸಾಕ್ಷಿಭೂತನಾಗಿ ಮಾತ್ರ ಹೇಗಿರುವನೋ, ಅವರವರ ಶುಭಾಶುಭ ಕರ್ಮಗಳಿಗನುಸಾರವಾಗಿ ಒಳ್ಳೇ ಫಲಗಳೂ, ಕೆಟ್ಟ ಫಲಗಳೂ ಹೇಗೆ ತಪ್ಪದೆ ಆಗುವುವೋ, ಶ್ರೀರಾಮನೇ ಮೊದಲಾದ ಧರ್ಮಿಷ್ಠರು ಅವರ ಧರ್ಮಗಳಿಗನುರೂಪವಾದ ಫಲವನ್ನು ಪರಿಣಾ

ಮುದಲ್ಲಿ ಹೇಗೆ ಹೊಂದಿದರೋ, ರಾವಣನೇ ಮೊದಲಾದ ಅಧರ್ಮಿಷ್ಠರು ಅವರ ಅಧರ್ಮಪ್ರವರ್ತನದಿಂದ ಪರಿಣಾಮದಲ್ಲಿ ಹೇಗೆ ಅಧೋಗತಿಯನ್ನು ಹೊಂದಿದರೋ, ಜಿತೇಂದ್ರಿಯರು ಹೇಗೆ ಸಕಲ ಸಂಪತ್ತುಗಳನ್ನೂ ಹೊಂದುವರೋ, ಅಜಿತೇಂದ್ರಿಯರು ಹೇಗೆ ಸಕಲ ವಿಪತ್ತುಗಳಿಗೂ ಗುರಿಯಾಗುವರೋ, ಇಂಥಾ ಸಾರಾಸಾರ ವಿಚಾರಗಳನ್ನು ನಿರೂಪಿಸುವ ಸಂಗೀತವು ಇರುವುದು. ಯಾರು ಯಾವ ವಿಧವಾದ ಸಂಗೀತದಲ್ಲಿ ಆಸಕ್ತರಾಗುವರೋ ಅವರು ಅಂಥಾ ಸಂಗೀತಕ್ಕೆ ಸಹಜವಾದ ಫಲವನ್ನು ಹೊಂದುವರು. ಬೇವಿನ ಬೀಜವನ್ನು ಬಿತ್ತಿ, ಕಿತ್ತಳೆ ಹಣ್ಣನ್ನು ಬೆಳೆಯುವುದು ಸಾಧ್ಯವೇ ? ದುರ್ವಿಷಯ ಸುಖಗಳಲ್ಲಿ ಮನಸ್ಸನ್ನು ಬಿಟ್ಟು, ಮೋಕ್ಷ ಸುಖವನ್ನು ಪಡೆಯುವುದು ಸಾಧ್ಯವೇ ? ದುರ್ವಿಷಯಾಸಕ್ತರ ಮೋಕ್ಷಕ್ಕೂ, ಜಿತೇಂದ್ರಿಯರ ಮೋಕ್ಷಕ್ಕೂ ವ್ಯತ್ಯಾಸವಿರುವುದಿಲ್ಲವೇ? ಅವರವರ ಕರ್ಮಗಳಿಗೆ ಅನುಸಾರವಾದ ಮೋಕ್ಷವು ಅವರಿಗೆ ಬರುವುದು. ದಧೀಚಿಯೇ ಮೊದಲಾದವರಿಗೆ ಬಂದ ಮೋಕ್ಷವು ಗ್ರಾಮಸಿಹ್ಮಗಳೇ ಮೊದಲಾದ ತಿರ್ಯಗ್ಜಂತುಗಳಿಗೆ ಬರುವುದು ಸಾಧ್ಯವೇ ? ಅದು ಎಂದಿಗೂ ಸಾಧ್ಯವಲ್ಲ. ಈ ವಿಷಯವನ್ನು ಪರ್ಯಾಲೋಚಿಸು. ನಿನ್ನ ಆಸ್ಥಾನದಲ್ಲಿ ದುರ್ವಿಷಯಗಳಿಂದ ಆಕರ್ಷಿಸುವಂತೆ ಮಾಡುವ ನಿನ್ನ ಸಾಮಾಜಿಕರನ್ನು ಕರೆಸು. ಇನ್ನು ಮೇಲೆ ಸಂಗೀತ, ಸಾಹಿತ್ಯ ಮೊದಲಾದವುಗಳಲ್ಲಿ ಸನ್ಮಾರ್ಗವನ್ನು ತಪ್ಪಿಸಿ, ಅಧೋಗತಿಗೆ ಬರುವಂತೆ ಮಾಡತಕ್ಕ ಶೃಂಗಾರಪ್ರಧಾನವಾದ ಸಂಗೀತಕ್ಕೂ, ಅಸತ್ಕಾವ್ಯಾಲಾಪಕ್ಕೂ ಅವಕಾಶ ಕೊಡಕೂಡದೆಂಬದಾಗಿ ನಿಷ್ಕರ್ಷೆ ಮಾಡಿರುವುದಾಗಿಯೂ, ಈ ನಿಷ್ಕರ್ಷೆಗೆ ಅನುಸಾರವಾಗಿ ಯಾರು ನಡೆಯುವುದಿಲ್ಲವೋ ಇವರು ಈ ಸಂಸ್ಥಾನದಿಂದ ಗಡೀಪಾರು ಮಾಡಲ್ಪಡುವರೆಂಬದಾಗಿಯೂ ಖಂಡಿತವಾಗಿ ತಿಳಿಸು. ಎಲ್ಲರೂ ಮನೋವಾಕ್ಕರ್ಮಗಳಲ್ಲಿ ಪರಿಶುದ್ಧರಾಗುವುದಕ್ಕೆ ಅವಕಾಶವನ್ನು ಕೊಡು. ಸ್ತ್ರೀಪುರುಷರಲ್ಲಿ ಈ ವಿಧಿಗೆ ವಿರೋಧವಾಗಿ 'ಯಾರು ನಡೆದಾಗ್ಯೂ, ಅವರ ದುಷ್ಕರ್ಮಕ್ಕೆ ಅನುರೂಪವಾದ ಫಲವನ್ನು ಅವರು ಹೊಂದುವಂತೆ ಮಾಡು. ಮಾತಾಪಿತೃಗಳಾಗಲಿ, ಸಹೋದರ-ಸಹೋದರಿಯರಾಗಲಿ, ಗುರುಹಿರಿಯರಾಗಲಿ, ಬಂಧುಮಿತ್ರರಾಗಲಿ ಯಾರು ಈ ವಿಧಿಗೆ ವಿರೋಧವಾಗಿ ನಡೆಯುವರೋ ಅವರು ನಿನ್ನ ನಿರ್ದಾಕ್ಷಿಣ್ಯವಾದ ದಂಡನೆಗೆ ಗುರಿ ಮಾಡಲ್ಪಡಲಿ. ಈ ವಿಷಯದಲ್ಲಿ ದಾಕ್ಷಿಣ್ಯಕ್ಕೆ ಒಳಪಡಬೇಡ. ಹಾಗೆ ಒಳಪಟ್ಟರೆ, ದೇಶವೇ ಬೇಬಂದಾಗುವುದು. ದುಷ್ಟನಿಗ್ರಹವನ್ನು ಮಾಡುವುದರಲ್ಲಿ ರಾಜ

ತಂತ್ರವಿಶಾರದರಾದ ಪ್ರಭುಗಳು ಬೆಂಕಿಯಂತೆ ಇರಬೇಕು. ಸರಿಯಾಗಿ ನಡೆದುಕೊಳ್ಳತಕ್ಕವರಿಗೆ ಬೆಂಕಿಯು ಬಹಳ ಉಪಯೋಗವಾಗುವುದು. ದುರುಪಯೋಗಪಡಿಸಲ್ಪಟ್ಟರೆ, ಅವರನ್ನು ಸುಟ್ಟುಬಿಡುವುದಕ್ಕೂ ಬೆಂಕಿಯು ಸಾಧಕವಾಗುವುದು. ಈ ವಿಷಯವು ಸರ್ವರಿಗೂ ತಿಳಿಯುವಂತೆ ಮಾಡಿ, ಅವರವರ ಕರ್ಮಗಳಿಗೆ ಅನುಸಾರವಾಗಿ ಅವರಿಗೆ ಫಲಪ್ರಾಪ್ತಿಯಾಗುವಂತೆ ಮಾಡಿದರೆ, ನಿನ್ನ ರಾಜ್ಯವು ಧರ್ಮರಾಜ್ಯವಾಗಿ ಪರಿಣಮಿಸುವುದು. ರಾಜನು ಧರ್ಮಯುಗಕ್ಕೆ ಹೇಗೆ ಕಾರಣಭೂತನೋ ಅದು ಗೊತ್ತಾಗುವುದು. ಹೀಗೆ ಗೊತ್ತುಮಾಡುವ ಶಕ್ತಿಯನ್ನು ದೇವರು ನಿನಗೆ ಕೊಡಲಿ.

ಕುಶಲ ವಿದ್ಯೆಗಳು ಪ್ರೋತ್ಸಾಹಕ್ಕೆ ಅರ್ಹವಾದವುಗಳು. ಆದರೆ ಈ ವಿದ್ಯೆಗಳು ಸೌಶೀಲ್ಯದ ಹಾನಿಗೆ ಕಾರಣವಾಗುವಂತೆ ಮಾಡಲ್ಪಡಕೂಡದು. ವಿದ್ಯಾರ್ಥಿಗಳು ಸಕಲ ಕಲಾವಿಶಾರದರಾಗುವಂತೆ ಪ್ರೋತ್ಸಾಹವು ಮಾಡಲ್ಪಡಬೇಕು. ಯಾವ ಕಲೆಗಳಲ್ಲಿ ಯಾರಿಗೆ ಬುದ್ಧಿಯು ಓಡುವುದೋ ಅದನ್ನು ಪರಿಶೀಲಿಸಿ, ಆ ಕಲೆಗಳಲ್ಲಿ ಅವರಿಗೆ ಪ್ರವೇಶ ಉಂಟಾಗುವಂತೆ ಮಾಡಲ್ಪಡಬೇಕು. ಧರ್ಮಿಷ್ಟರಾಗಿಯೂ, ಪುರಾಣ ಪುರುಷರಾಗಿಯೂ ಇರತಕ್ಕವರ ಮಹಿಮೆಯು ಶಾಶ್ವತವಾಗಿರುವಂತೆಯೂ, ಉತ್ತರೋತ್ತರ ಸತ್ಕರ್ಮಗಳಿಗೆ ಸಾಧಕವಾಗುವಂತೆಯೂ ಮಾಡುವುದಕ್ಕೆ ಚಿತ್ರಕೆಲಸವೂ, ಶಿಲ್ಪಿಕೆಲಸವೂ ಉಪಯೋಗವಾಗುವುದು. ತಸ್ವೀರುಗಳಲ್ಲಿಯೂ, ಪ್ರತಿಮೆಗಳಲ್ಲಿಯೂ ಪುರಾಣ ಪುರುಷರ ಚರಿತ್ರೆಗಳು ಪ್ರೇಕ್ಷಕರಿಗೆ ಕೂಡ ತಿಳಿಯುವಂತೆ ದೇವಸ್ಥಾನಗಳೇ ಮೊದಲಾದವುಗಳಲ್ಲಿ ರಚಿಸಿರುತ್ತಾರೆ. ಗ್ರಂಥಾವಲೋಕನಗಳಿಂದ ಆಗತಕ್ಕ ಪ್ರಯೋಜನಗಳು ವೀಕ್ಷಣ ಮಾತ್ರದಿಂದಲೇ ಚಿತ್ರಕೆಲಸದಿಂದಲೂ, ಶಿಲ್ಪಿಯ ಕೆಲಸದಿಂದಲೂ ಉಂಟಾಗುವುವು. ಆದುದರಿಂದ ಈ ವಿದ್ಯೆಗಳಿಗೆ ಪ್ರೋತ್ಸಾಹವು ಮಾಡಲ್ಪಡಬೇಕು.

ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದವುಗಳಲ್ಲಿ ಅನೇಕ ವಿದ್ಯೆಗಳು ಇರುತ್ತವೆ. ಕೃಷಿ ಕೆಲಸಗಳಿಗೆ ಅನೇಕ ವಿಧವಾದ ಮುಟ್ಟುಗಳು ಬೇಕು. ಅನೇಕ ಬಗೆಯ ಯಂತ್ರಗಳು ಬೇಕು. ಇವುಗಳನ್ನು ತಯಾರ್ಮಾಡುವುದರಲ್ಲಿ ಅನೇಕ ಜನಾಂಗದವರು ವಿಶೇಷ ಕೌಶಲ್ಯವುಳ್ಳವರಾಗಿರುವರು. ಉಪಪನ್ನರಾದವರು ಚಿನ್ನ, ಬೆಳ್ಳಿ, ರತ್ನಗಳು ಇವೇ ಮೊದಲಾದವುಗಳಿಂದ ತಯಾರಾದ ಅನೇಕ ಆಭರಣಗಳನ್ನು ಉಪಯೋಗಿಸುವರು. ನಾನಾವಿಧವಾದ ಲೋಹಗಳಿಂದ ತಯಾ

ರಾದ ಪಾತ್ರೆಗಳೇ ಮೊದಲಾದ ಭೋಗ್ಯವಸ್ತುಗಳನ್ನು ಉಪಯೋಗಿಸುವರು. ಭಟ್ಟಿಯಿಂದ ಇಳಿಸಲ್ಪಟ್ಟ ಅನೇಕ ದ್ರಾವಕಗಳು, ಪಾನಯೋಗ್ಯವಾದ ಸಾರಾಯಿಗಳು ಇಳಿಸಲ್ಪಡುವುವು. ನಾನಾವಿಧವಾದ ಸುಗಂಧ ದ್ರವ್ಯಗಳು ತಯಾರ್ಮಾಡಲ್ಪಡುವುವು. ಮರದಿಂಧಲೂ, ಕಬ್ಬಿಣವೇ ಮೊದಲಾದ ಲೋಹಗಳಿಂದಲೂ ಮಾಡಲ್ಪಟ್ಟ ಕುರ್ಚಿ, ಮೇಜು, ಸೋಫಾ, ಮಂಚ, ಬೀರು ಮೊದಲಾದ ಪದಾರ್ಥಗಳು ಪ್ರಜೆಗಳಿಂದ ಉಪಯೋಗಿಸಲ್ಪಡುವುವು. ಇವುಗಳಲ್ಲಿ ಯಾವುದು ಇಲ್ಲದಿದ್ದರೆ ಜೀವನವು ಆಗುವುದಿಲ್ಲವೋ ಅದನ್ನು ಹೊಂದುವುದಕ್ಕೆ ಖರ್ಚುಮಾಡಬಹುದು. ಯಾವುದು ಇಲ್ಲದಿದ್ದರೆ ಬಾಧಕವಿಲ್ಲವೋ ಅವುಗಳನ್ನು ಪರಿತ್ಯಾಗ ಮಾಡಬಹುದು. ಈ ಪದಾರ್ಥಗಳನ್ನು ಹೊಂದುವುದಕ್ಕೋಸ್ಕರ ಬಹು ದ್ರವ್ಯವು ಖರ್ಚಾಗುತ್ತದೆ. ನಿರ್ಗತಿಕರಾದವರಿಗೂ ಕೂಡ ಅನ್ನವಸ್ತ್ರಗಳು ದೊರೆಯುವಂತೆ ಬೇಕಾದ ಕೃಷಿಯನ್ನು ಮಾಡಿ, ಅವುಗಳಿಗೆ ಇಲ್ಲದೆ ಯಾರೂ ತಾಪತ್ರಯ ಪಡುವುದಿಲ್ಲವೆಂದು ಸ್ಪಷ್ಟವಾಗಿ ಗೊತ್ತಾದರೆ, ಆಗ ಭೋಗ್ಯವಸ್ತುಗಳ ನಿರ್ಮಾಣಕ್ಕೆ ಗಮನವನ್ನು ಕೊಡಬಹುದು. ಅದುವರೆಗೂ ಉಪಯುಕ್ತವಾದ ಪದಾರ್ಥಗಳ ತಯಾರಿಗೆ ನಿನ್ನ ಪ್ರಜೆಗಳೆಲ್ಲರೂ ಮನಸ್ಸು ಕೊಡುವಂತೆ ಮಾಡುವುದು ನಿನಗೆ ಮುಖ್ಯ ಕರ್ತವ್ಯ. ಈ ವಿಷಯಕ್ಕೆ ನಿನ್ನ ಮನಸ್ಸನ್ನು ನೀನು ಕೊಡುವುದು ಆವಶ್ಯಕ.

ದೇಶದಲ್ಲಿ ಸಮಾಧಾನವು ರೂಢಮೂಲವಾಗಿರಬೇಕಾದರೆ, ನೀನು ಯುದ್ಧಕ್ಕೆ ಸನ್ನದ್ಧನಾಗಿರಬೇಕು. ನಿನ್ನ ಆಯುಧಶಾಲೆಯು ಅತ್ಯಂತ ತೀಕ್ಷ್ಣವಾದ ಆಯುಧಸಾಮುಗ್ರಿಗಳಿಂದ ಪರಿಪೂರ್ಣವಾಗಿರಬೇಕು. ನಿನ್ನ ಮದ್ದಿನ ಕಾರ್ಖಾನೆಗಳು ತುಂಬಿ ಇರಬೇಕು. ಮಿಲಿಟರಿ ಸಾಮುಗ್ರಿಗಳನ್ನು ಯುದ್ಧರಂಗಕ್ಕೆ ತೆಗೆದುಕೊಂಡು ಹೋಗುವುದಕ್ಕೆ ಸಾಧಕವಾದ ಯಾನಗಳು ಪರಿಪೂರ್ಣವಾಗಿರಬೇಕು. ಈ ಯಾನಗಳನ್ನು ತಯಾರ್ಮಾಡತಕ್ಕ ಕಾರ್ಖಾನೆಗಳು ಪರಿಪೂರ್ಣವಾಗಿರಬೇಕು. ಇವುಗಳನ್ನು ಮಾಡುವುದರಲ್ಲಿ ಸಮರ್ಥರಾದ ಶಿಲ್ಪಿಗಳು ನಿಯಮಿಸಲ್ಪಟ್ಟಿರಬೇಕು. ಕಾರ್ಖಾನೆಗಳ ಚಿಮ್ನಿಗಳಿಂದ ಹೊರಡತಕ್ಕ ಹೊಗೆಯಿಂದ ಆಕಾಶವು ಯಾವಾಗಲೂ ಪರಿವೃತವಾಗಿರಬೇಕು. ಸದರಿ ಕಾರ್ಖಾನೆಗಳ ಕೆಲಸಗಾರರು ಅಡಿಗಲ್ಲಿನ ಮೇಲೆ ಚಮಟಿಕೆಯಿಂದ ಮಾಡಲ್ಪಡತಕ್ಕ ಧ್ವನಿಗೆ ಸಮುದ್ರ ತೀರದಿಂದ ಪ್ರತಿಧ್ವನಿಯು ಬರುವಂತೆ ಮಾಡಲ್ಪಟ್ಟಿರಬೇಕು. ಸಮಾಧಾನ ಕಾಲದಲ್ಲಿ

ಶತ್ರುಗಳನ್ನು ನಿಗ್ರಹಿಸುವ ಕೆಲಸಗಳು ಪರಿಪೂರ್ಣವಾಗಿ ನಡೆಯುತ್ತಿದ್ದರೆ, ಶತ್ರುಗಳು ಭಯಪಟ್ಟು ಮಿತ್ರರಾಗುವರು. ಈ ವಿಷಯಕ್ಕೆ ನಿನ್ನ ಗಮನವು ಪರಿಪೂರ್ಣವಾಗಿ ಕೊಡಲ್ಪಡಲಿ.

ನಿನ್ನ ದೇಶದಲ್ಲಿ ದವಸಗಳನ್ನು ಬೆಳೆಯುವುದಕ್ಕೆ ಎಷ್ಟು ಪ್ರೋತ್ಸಾಹವು ಕೊಡಲ್ಪಡಬೇಕೋ ಅಷ್ಟು ಪ್ರೋತ್ಸಾಹವು ಕೊಡಲ್ಪಟ್ಟಿಲ್ಲ. ಅನೇಕ ಜಮೀನುಗಳು ಪಾಳುಬಿದ್ದಿವೆ. ಅನೇಕ ಜನ ಕೃತರು ದರಿದ್ರರಾಗಿರುವರು. ಅವರು ವಾಸಮಾಡುವ ಮನೆಗಳನ್ನೂ, ಅವರು ಹಾಕಿಕೊಂಡಿರುವ ಬಟ್ಟೆಗಳನ್ನೂ, ಅವರು ತಿನ್ನುವ ಪದಾರ್ಥಗಳನ್ನೂ ನೋಡಿದರೆ ತುಂಬಾ ವಿಷಾದವಾಗುತ್ತದೆ. ಇವರಲ್ಲಿ ಅನೇಕರು ನಿರುತ್ಸಾಹಿಗಳಾಗಿರುತ್ತಾರೆ. ಇವರಲ್ಲಿ ಬಹುಜನಗಳು ನಿರುದ್ಯೋಗಿಗಳಾಗಿರುತ್ತಾರೆ. ನಿನ್ನ ದೇಶದಲ್ಲಿ ಭಿಕ್ಷುಕರ ಸಂಖ್ಯೆಯು ಹೆಚ್ಚಾಗಿರುವುದು. ಈ ದೇಶದಲ್ಲಿ ಖುಸ್‌ಪಾಸ್ ಜೀವನ ಮಾಡತಕ್ಕವರ ಸಂಖ್ಯೆಯು ಹೆಚ್ಚಾಗಿರುವುದು. ಸ್ವೈರಿಣಿಯರು ವಿಶೇಷವಾಗಿರುತ್ತಾರೆ. ಅನೇಕ ಜನಗಳ ಶೀಲಸ್ವಭಾವಗಳು ಸಮರ್ಪಕವಾಗಿ ಇಲ್ಲ. ಅನುದ್ಯೋಗಿಗಳಾದವರ ಸಂಖ್ಯೆಯು ಹೆಚ್ಚಾಗಿದೆ. ಬೆಟ್ಟಗಳು, ಗುಡ್ಡಗಳು, ಕಣಿವೆಗಳು ಧಾನ್ಯಗಳಿಂದಲೂ, ಫಲಪುಷ್ಪಗಳಿಂದಲೂ ಶೋಭಮಾನವಾಗಿ ಇಲ್ಲ. ಪರಸ್ಥಳದಿಂದ ಕೂಲಿಯವರು ಬಂದು ಕೆಲಸ ಮಾಡುತ್ತಲಿದ್ದಾರೆ. ಪ್ರತಿಫಲವನ್ನು ಉಂಟುಮಾಡತಕ್ಕ ಕೆಲಸಗಳಲ್ಲಿ ನಿನ್ನ ದೇಶೀಯರು ಅನೇಕರು ಪರಾಙ್ಮುಖರಾಗಿರುತ್ತಾರೆ. ಪರದೇಶೀಯರ ಸಂಖ್ಯೆಯು ನಿನ್ನ ದೇಶದಲ್ಲಿ ವಿಶೇಷವಾಗಿರುವುದು. ನಿನ್ನ ದೇಶದ ಲೇವಾದೇವಿಗಳೆಲ್ಲಾ ಪರದೇಶೀಯರ ಅಧೀನವಾಗಿರುವುದು. ಕೈಗಾರಿಕೆ, ವ್ಯಾಪಾರಗಳನ್ನು ಮಾಡತಕ್ಕವರು ನಿನ್ನ ದೇಶೀಯರಲ್ಲಿ ಅಪೂರ್ವವಾಗಿರುವರು. ನಿನ್ನ ದೇಶದ ಜನಗಳು ದರಿದ್ರರಾಗಿರುವರು. ಪರದೇಶೀಯರು ಉಪಪನ್ನರಾಗಿರುವರು. ನಿನ್ನ ಪ್ರಜೆಗಳು ಉದ್ಯೋಗಿಗಳಾಗಿಯೂ, ಆತ್ಮಾವಲಂಬಿಗಳಾಗಿಯೂ, ಸ್ವಶಕ್ತಿಯಿಂದ ಬದುಕತಕ್ಕವರಾಗಿಯೂ ಆಗುವಂತೆ ಮಾಡುವುದಕ್ಕೆ ನೀನು ವಿಶೇಷ ಗಮನ ಕೊಟ್ಟಂತೆ ತೋರುವುದಿಲ್ಲ. ನಿನ್ನ ಪ್ರಜೆಗಳ ಸಂಪತ್ತೇ ನಿನ್ನ ಸಂಪತ್ತೆಂಬ ಭಾವನೆಯು ನಿನಗೆ ಉಂಟಾಗಿರುವಂತೆ ತೋರುವುದಿಲ್ಲ. ಉಪಪನ್ನರಾಗಿಯೂ, ಸಂತುಷ್ಟರಾಗಿಯೂ, ರಾಜಭಕ್ತಿವಿಶ್ವಾಸಗಳುಳ್ಳವರಾಗಿಯೂ ಇರತಕ್ಕ ಪ್ರಜೆಗಳನ್ನು ಯಾವ ಪ್ರಭುವು ಹೊಂದಿರುವನೋ ಅವನೇ ಪುಣ್ಯವಂತನು. ಅವನೇ ಧನ್ಯನು. ಅವನೇ

ಕೃತಕೃತ್ಯನು. ಇಂಥಾ ಪುಣ್ಯವನ್ನೂ, ಧನ್ಯತೆಯನ್ನೂ ಸಂಪಾದಿಸಿಕೊಳ್ಳುವುದಕ್ಕೋಸ್ಕರ ನೀನು ವಿಶೇಷ ಕೃಷಿಯನ್ನು ಮಾಡಬೇಕು.

ಪ್ರಜಾವೃದ್ಧಿಯ ವಿಷಯದಲ್ಲಿ ನಿನ್ನ ಗಮನವು ಕೊಡಲ್ಪಡಬೇಕು. ಸ್ತ್ರೀಪುರುಷರು ಸ್ವೇಚ್ಛಾಪ್ರವರ್ತಕರಾಗುವುದಕ್ಕೆ ಅವಕಾಶ ಕೊಡಲ್ಪಡಬಾರದು. ಅನುರೂಪವಾದ ದಾಂಪತ್ಯಕ್ಕೆ ಅವಕಾಶ ಮಾಡಲ್ಪಡಬೇಕು. ವಿವಾಹವಾಗುವುದಕ್ಕೆ ಮುಂಚೆ ವಧೂವರರಿಗೆ ಪರಸ್ಪರ ಸಾಮ್ಯವು ಸಕಲ ವಿಧಗಳಲ್ಲಿಯೂ ಸರಿಯಾಗಿ ಇದೆಯೇ ಇಲ್ಲವೇ ಎಂದು ನೋಡುವುದು ಸರ್ಕಾರದ ಕೆಲಸ. ಒಳ್ಳೇ ದನಗಳು, ಒಳ್ಳೇ ಕುರಿಗಳು, ಒಳ್ಳೇ ಕುದುರೆಗಳು, ಒಳ್ಳೇ ನಾಯಿಗಳು, ಹುಟ್ಟುವಂತೆ ಮಾಡಬೇಕೆಂದು ವ್ಯವಸಾಯದ ಇಲಾಖೆಯವರೂ ಕೂಡ ನಿಗೆಯನ್ನು ಕೊಡುವರು. ಒಳ್ಳೇ ಪ್ರಜೆಗಳಾಗಬೇಕೆಂದು ಕೃಷಿಯನ್ನು ಮಾಡುವುದು ಪ್ರಭುಗಳ ಕೆಲಸವಲ್ಲವೇ ? ಎಲ್ಲಾ ಸ್ತ್ರೀಪುರುಷರೂ ವಿವಾಹದಲ್ಲಿ ಆಸಕ್ತರಾಗಿರುತ್ತಾರೆ. ಸಾಮಾನ್ಯವಾಗಿ ಕುಲವನ್ನೂ, ಶೀಲವನ್ನೂ, ಅವಯವ ಸೌಷ್ಠವವನ್ನೂ, ಆರೋಗದೃಢಕಾಯತೆಯನ್ನೂ, ಸೌಂದರ್ಯವನ್ನೂ ನೋಡುವರು. ಗೋತ್ರವೂ, ಕೂಟಗಳೂ, ನಕ್ಷತ್ರಾನುಕೂಲಗಳೂ ನೋಡಲ್ಪಡುವುವು. ವಧೂವರರ ಮಾತಾಪಿತೃಗಳು ಸಾಮಾನ್ಯವಾಗಿ ಈ ಭಾಗದಲ್ಲಿ ಜವಾಬ್ದಾರಿಯನ್ನು ವಹಿಸುವರು. ಅವರು ತಮ್ಮ ಕೆಲಸಗಳನ್ನು ಸಮರ್ಪಕವಾಗಿ ಮಾಡಿರುವರೇ ಇಲ್ಲವೇ ಎಂದು ಪರಿಶೀಲಿಸುವುದು ನಿನ್ನ ಕೆಲಸ. ವಿವಾಹಗಳಲ್ಲೆಲ್ಲಾ ರಾಜತಾಂಬೂಲವು ಎತ್ತುವುದುಂಟು. ಸದರಿ ತಾಂಬೂಲವನ್ನು ಪರಿಗ್ರಹಿಸುವುದಕ್ಕೆ ನೀನು ಖುದ್ದಾಗಿ ಹೋದರೆ, ವಧೂವರರು ಅನುರೂಪರಾದವರು ಹೌದೋ ಅಲ್ಲವೋ ಎಂಬುವುದು ಗೊತ್ತಾಗುವುದು. ನಿಶ್ಚಿತಾರ್ಥವಾಗುವುದಕ್ಕೆ ಮುಂಚೆಯೇ ನೀನು ವಧೂವರರನ್ನು ನೋಡು. ಮಾತಾಪಿತೃಗಳು ಸಕಲ ವಿಷಯಗಳಲ್ಲಿಯೂ ಸರಿಯಾದ ಏರ್ಪಾಡು ಮಾಡಿದ್ದರೆ ನೀನು ತಾಂಬೂಲಕ್ಕೆ ಹೋಗಬಹುದು. ಹಾಗೆ ಇಲ್ಲದಿದ್ದರೆ ತಾಂಬೂಲವನ್ನು ಪರಿಗ್ರಹಿಸುವುದಿಲ್ಲನೆಂದು ಹೇಳಬಹುದು. ಸಮರ್ಪಕವಾದ ಏರ್ಪಾಡು ಮಾಡಲ್ಪಟ್ಟಿದ್ದರೆ, ವಧೂವರರಿಗೆ ರಾಜಮರ್ಯಾದೆಯು ಮಾಡಲ್ಪಡಬೇಕು. ಈ ಮರ್ಯಾದೆಗೆ ಅನುರೂಪವಾದ ಪ್ರತಿಫಲವನ್ನು ಅವರು ಒಪ್ಪಿಸುವರು. ಸರ್ಕಾರಕ್ಕೆ ಅದರಿಂದ ಯಾವ ನಷ್ಟವೂ ಆಗುವುದಿಲ್ಲ. ಒಳ್ಳೇ ಪುತ್ರ

ಸಂತಾನವಾಗುವುದಕ್ಕೆ ಅನುರೂಪವಾದ ವಿವಾಹಗಳ ಪ್ರೋತ್ಸಾಹವು ಸಾಧಕವಾದದ್ದು. ಮಕ್ಕಳು ತಂದೆತಾಯಿಗಳಿಗೆ ಸಾಕ್ಷಾತ್ತಾದ ಮಕ್ಕಳಾದಾಗ್ಯೂ, ಸರ್ಕಾರಕ್ಕೂ ಅವರು ಮಕ್ಕಳಾಗುವರು. ಸಕಲ ಜನಗಳಿಗೂ ತಂದೆತಾಯಿಗಳು ಹೇಗೋ ಹಾಗೆ ರಕ್ಷಕರೂ ಕೂಡ ಪಿತೃಪ್ರಾಯರಾದವರು. ಒಳ್ಳೇ ಪ್ರಜೆಗಳನ್ನು ಹೊಂದುವ ಪ್ರಯತ್ನವು ಪ್ರಭುಗಳಿಂದ ಮಾಡಲ್ಪಡಬೇಕು. ಔರಸಪುತ್ರರೇ ಪುತ್ರರೆಂದು ತಿಳಿದುಕೊಳ್ಳಬಾರದು. ಔರಸಪುತ್ರರು ನಿನ್ನ ಪದವಿಗೋಸ್ಕರವೂ, ನಿನ್ನ ದ್ರವ್ಯಕ್ಕೋಸ್ಕರವೂ, ನಿನ್ನ ಸಂಪತ್ತಿಗೋಸ್ಕರವೂ ನಿನ್ನನ್ನು ಪ್ರೀತಿಸಬಹುದು. ಯಾವುದರಲ್ಲಿ ಲೋಪವಾದಾಗ್ಯೂ ಅವರು ನಿನ್ನನ್ನು ದ್ವೇಷಿಸಬಹುದು. ಪ್ರಜೆಗಳಿಗೆ ನಿನ್ನಲ್ಲಿ ಇರತಕ್ಕ ಪ್ರೀತಿಯು ಅಷ್ಟು ಸುಲಭವಾಗಿ ಹೋಗುವುದಿಲ್ಲ. ನಿನ್ನ ಬಂಧುಮಿತ್ರರು ವಿಶೇಷ ದುರಾಶೆಯುಳ್ಳವರಾಗಿರಬಹುದು. ಆ ದುರಾಶೆಯ ಪ್ರಾಪ್ತಿಗೆ ಬಾಧಕ ಉಂಟಾದರೆ, ಅವರ ಪ್ರೀತಿಗೆ ಲೋಪವು ಬರಬಹುದು. ಅಲ್ಪಸಂತೋಷಿಗಳಾದ ಪ್ರಜೆಗಳ ಪ್ರೀತಿಗೆ ಅಂಥಾ ಪ್ರತಿಬಂಧಕಗಳು ಬರುವುದು ಅಪೂರ್ವ.

ಲೋಕದಲ್ಲಿ ಭೋಗ್ಯವಸ್ತುಗಳು ಹೇಗೆ ಅಸಂಖ್ಯಾಕಗಳಾಗಿಗಿರುವುವೋ ಹಾಗೆ ಅವುಗಳನ್ನು ತಯಾರ್ಮಾಡತಕ್ಕ ಪಂಗಡಗಳೂ ಅಸಂಖ್ಯಾಕಗಳಾಗಿರಬೇಕು. ಸರ್ವರೂ ಸರ್ವತೋಮುಖವಾದ ಪ್ರಜ್ಞೆಯೇ ಗುರಿಯಾಗಿರುವ ಸಾಮಾನ್ಯ ವಿದ್ಯಾಭ್ಯಾಸವನ್ನು ಮಾಡಬೇಕು. ಅವರು ಅವಲಂಬಿಸುವ ಕಸಬಿಗೆ ಸಂಬಂಧಪಟ್ಟ ವಿದ್ಯೆಯಲ್ಲಿ ನಿಪುಣರಾಗಿರಬೇಕು. ಎಲ್ಲರೂ ಒಂದೇ ವಿಧವಾದ ವಿದ್ಯಾಭ್ಯಾಸದಲ್ಲಿ ನೈಪುಣ್ಯವನ್ನು ಹೊಂದಿದರೆ, ನಮ್ಮ ಸೌಖ್ಯಕ್ಕೆ ಸಾಧಕವಾದ ಭೋಗ್ಯವಸ್ತುಗಳು ಸುಲಭವಾಗಿ ದೊರೆಯುವುದಕ್ಕೆ ಅವಕಾಶವಾಗುವುದಿಲ್ಲ. ಕರ್ಷಕರು ಜಮಿನನ್ನು ಉಳಬೇಕು. ಗೊಬ್ಬರವನ್ನು ಹಾಕಬೇಕು, ಬೆಳೆಯನ್ನು ಇಡಬೇಕು. ಉಳುವುದಕ್ಕೆ ಸಾಧಕವಾದ ಮುಟ್ಟುಗಳನ್ನೂ, ಯಂತ್ರಗಳನ್ನೂ ತಯಾರ್ಮಾಡಿಕೊಳ್ಳಬೇಕು. ಸಕಲ ವಿಧವಾದ ಧಾನ್ಯಗಳನ್ನೂ, ನಾನಾವಿಧವಾದ ಫಲಪುಷ್ಪಗಳನ್ನೂ ಬೆಳೆಯಬೇಕು. ವಿರಾಮ ಕಾಲಗಳಲ್ಲಿ ಬಟ್ಟೆಗಳನ್ನು ತಯಾರ್ಮಾಡಬೇಕು. ಅವುಗಳಿಗೆ ಬೇಕಾದ ರಾಟೆ, ಚಕ್ರ, ಮಗ್ಗ, ಮಿಲ್ಲುಗಳು ಇವೇ ಮೊದಲಾದವುಗಳನ್ನು ಏರ್ಪಡಿಸಿಕೊಳ್ಳಬೇಕು. ಹತ್ತಿ, ನಾರು, ರೇಷ್ಮೆ, ತುಬಟ ಮೊದಲಾದವುಗಳನ್ನು ಪಡೆದು ಬಟ್ಟೆಗಳಿಗೆ ಅವುಗಳನ್ನು ಉಪಯೋಗಿಸಬೇಕು. ಬಾಲ್ಯದಿಂದಲೂ

 

ಈ ಪದಾರ್ಥಗಳನ್ನು ಬೆಳೆಯುವುದು, ಅವುಗಳ ಮೂಲಕ ಬಟ್ಟೆಗಳನ್ನು ಮಾಡುವುದು, ಸಕಲ ವಿಧವಾದ ಆಹಾರ ಪದಾರ್ಥಗಳನ್ನು ಬೆಳೆಯುವುದು, ಇವುಗಳಲ್ಲಿ ಕೋಟ್ಯಂತರ ಜನಗಳಿಗೆ ಜೀವನವಾಗುವುದು. ಈ ಕಸಬುಗಳಲ್ಲಿ ಪ್ರವೇಶವನ್ನೂ, ನೈಪುಣ್ಯವನ್ನೂ ಹೊಂದುವುದು ಅತ್ಯಾವಶ್ಯಕ. ಸಕಲ ವಿದ್ಯೆಗಳಲ್ಲಿಯೂ ಅನ್ನವಸ್ತ್ರಗಳ ಆರ್ಜನೆಗೆ ಸಾಕ್ಷಾತ್ತಾಗಿ ಸಾಧಕವಾಗತಕ್ಕ ವಿದ್ಯೆಯೇ ವಿದ್ಯೆ. ಜಮೀನನ್ನು ನಂಬಿದವರು ಎಂದಿಗೂ ಕೆಡುವುದಿಲ್ಲ. ತಮ್ಮ ಬಾಹುಬಲದಿಂದಲೂ, ಬುದ್ಧಿಬಲದಿಂದಲೂ ಕರ್ಷಕರು ತಮ್ಮನ್ನು ತಾವು ರಕ್ಷಿಸಿಕೊಳ್ಳುವರಲ್ಲದೆ, ಬ್ರಹ್ಮ, ಕ್ಷತ್ರಿಯ, ವೈಶ್ಯರನ್ನೂ ಕೂಡ ರಕ್ಷಿಸುವರು. ಸಕಲ ವೃತ್ತಿಗಳಲ್ಲಿಯೂ ಪ್ರಪಂಚಕ್ಕೆ ಅನ್ನವಸ್ತ್ರಗಳನ್ನು ಒದಗಿಸತಕ್ಕ ವೃತ್ತಿಯೇ ಅತ್ಯುತ್ತಮವಾದದ್ದು. ಇವರಿಗೆ ಈ ವೃತ್ತಿಯೇ ಮೋಕ್ಷದಾಯಕವಾದದ್ದು. ಅಹೋರಾತ್ರಿಗಳಲ್ಲಿಯೂ ಕಷ್ಟಪಟ್ಟು, ಭೂಮಾತೆಯ ಸೇವೆಯಿಂದ ಭೋಗ್ಯವಸ್ತುಗಳನ್ನು ಉತ್ಪತ್ತಿ ಮಾಡಿ, ಸಕಲ ಜನಗಳಿಗೂ ಅನ್ನವಸ್ತ್ರಗಳು ಒದಗುವಂತೆ ಮಾಡುವ ಧರ್ಮಕ್ಕಿಂತಲೂ ದೊಡ್ಡದಾದ ಧರ್ಮವು ಯಾವುದೂ ಅಲ್ಲ. ಕರ್ಷಕರು ಇತರ ಪಂಗಡದವರಿಗಿಂತ ಹೆಚ್ಚಾದ ಧರ್ಮಿಷ್ಠರೆಂಬುದಕ್ಕೆ ಆತ್ಮಾರ್ಥವಾಗಿ ಇವರು ಮಾಡುವ ಲೋಕಸೇವೆಯೇ ಮುಖ್ಯಕಾರಣ. ಇವರನ್ನು ಕನಿಷ್ಠ ವರ್ಣದವರೆಂದು ತಿಳಿದುಕೊಳ್ಳುವುದು ತಪ್ಪು. ಇವರು ಕೇವಲ ಉತ್ತಮ ವರ್ಣದವರೆಂದು ನನಗೆ ತೋರುತ್ತದೆ. ಇವರಲ್ಲಿ ಬಲಿಷ್ಠರಾದವರು ಸಾಗುವಳಿಯನ್ನು ಮಾಡುವರು. ಹುಡುಗರು ಸಾಗುವಳಿ ಮಾಡತಕ್ಕ ದೊಡ್ಡವರಿಗೆ ಸಹಾಯ ಮಾಡುವರು. ಹೆಂಗಸರು, ಹೆಣ್ಣುಮಕ್ಕಳು ಗೃಹಕೃತ್ಯಗಳಲ್ಲಿ ಆಸಕ್ತರಾಗುವರು. ಕೆಲಸ ಮಾಡತಕ್ಕ ಗಂಡಸರಿಗೆ ಹಿಟ್ಟು, ಅನ್ನ ಮೊದಲಾದವುಗಳನ್ನು ತಯಾರ್ಮಾಡಿ ಒದಗಿಸುವರು. ಹಗಲೆಲ್ಲಾ ಕೆಲಸಮಾಡಿ ಮನೆಗೆ ಬಂದರೆ, ಅವರಿಗೆ ಉಪಚಾರಗಳನ್ನು ಮಾಡಿ, ಮಾರನೇ ದಿವಸದ ಕೆಲಸಕ್ಕೆ ಅರ್ಹತೆಯೂ, ಶಕ್ತಿಯೂ ಉಂಟಾಗುವಂತೆ ಮಾಡುವರು. ಹೆಂಗಸರೂ, ಹೆಣ್ಣುಮಕ್ಕಳೂ ದನಕರುಗಳನ್ನೂ, ಕುರಿ ಮೊದಲಾದವುಗಳನ್ನೂ ನೋಡಿಕೊಳ್ಳುವರು. ಹಸು, ಕುರಿ ಮೊದಲಾದವುಗಳಿಂದ ಹಾಲು ಕರೆಯುವರು. ಹಾಲು, ಮೊಸರು, ಬೆಣ್ಣೆ ಮೊದಲಾದವುಗಳನ್ನು ಒದಗಿಸುವರು. ಹಣ್ಣುಗಳನ್ನು ಒದಗಿಸುವರು. ನಾನಾವಿಧವಾದ ಉಪಚಾರಗಳಿಂದಲೂ, ಸಲ್ಲಾಪಗಳಿಂದಲೂ, ಗಾನಗಳಿಂದಲೂ, ಸಂಕೀರ್ತನೆಗಳಿಂದಲೂ ವಿಶ್ರಾಂತಿಯ ಜೊತೆಗೆ

ಸಂತೋಷವನ್ನುಂಟುಮಾಡುವರು. ಹೊರಗೆ ಕೆಲಸ ಮಾಡತಕ್ಕ ಗಂಡಸರೂ, ಮನೆಯಲ್ಲಿ ಕೆಲಸ ಮಾಡತಕ್ಕ ಹೆಂಗಸರೂ ಎಲ್ಲರೂ ಸೇರಿ, ಸಾಯಂಕಾಲದ ವೇಳೆಗಳಲ್ಲಿ ಮನೆಗಳೇ ಸ್ವರ್ಗಗಳಾಗಿರುವಂತೆ ಮಾಡಿಕೊಳ್ಳುವರು. ಭೋಜನ, ಗಾನ, ಮೊದಲಾದಗವುಗಳಿಂದ ಸಂತುಷ್ಟರಾಗಿ ಮನೋಹರವಾದ ನಿದ್ದೆಯನ್ನು ಹೊಂದಿ, ಅಸಾಧಾರಣವಾದ ವಿಶ್ರಾಂತಿಯನ್ನು ಹೊಂದುವರು. ಈ ರೀತಿಯಲ್ಲಿ ಬೇಜಾರಿಲ್ಲದೆ, ಕೃಷಿಯನ್ನು ಮಾಡಿ, ಕೆಲಸ ಮಾಡುವಾಗಲೂ, ಮನೆಗೆ ಬಂದಾಗಲೂ ಕೇವಲ ಉತ್ಸಾಹದಿಂದಲೂ, ಸಂತೋಷದಿಂದಲೂ ಮೆಹನತ್ತನ್ನು ಮಾಡುತ್ತಾ, ವಿಶ್ರಾಂತಿಯನ್ನು ಹೊಂದುತ್ತಾ ಕಾಲ ಕಳೆಯುತಕ್ಕ ಜನಗಳು ಕೇವಲ ಪುಣ್ಯಶಾಲಿಗಳು. ಇವರಲ್ಲಿ ಅನೇಕರಿಗೆ ಪಾಪಿಷ್ಠವಾದ ಯೋಚನೆಗಳೂ ಕೂಡ ಬರುವುದಿಲ್ಲ. ಇವರು ಕೆಟ್ಟ ಮಾತುಗಳನ್ನಾಡುವುದಿಲ್ಲ. ಕೆಟ್ಟ ಕೆಲಸಗಳಲ್ಲಿ ಇವರು ಪರಾಙ್ಮುಖರಾಗಿರುವರು. ಇಂಥಾ ಮಹನೀಯರು ಯಾವ ದೇಶದಲ್ಲಿ ವಿಶೇಷವಾಗಿರುವರೋ ಆ ದೇಶದಲ್ಲಿ ಸಂಪತ್ತು ತಾಂಡವವಾಡುವುದು. ಕರ್ಷಕರು ಸಾರಾಸಾರ ವಿಚಾರಜ್ಞರಾಗಿ, ತಮ್ಮ ಕೆಲಸವನ್ನು ಕೇವಲ ಶ್ರದ್ಧೆಯಿಂದ ಮಾಡುವಂತೆ ನೋಡಿಕೊಳ್ಳುವುದು ಮುಖ್ಯ ಕರ್ತವ್ಯ. ಈ ಕರ್ತವ್ಯವು ಸಮಗ್ರವಾಗಿ ನಿನ್ನಿಂದ ಮಾಡಲ್ಪಡುತ್ತಲಿಲ್ಲ. ಬೆಳೆಯು ಕಟಾವಿಗೆ ಬರತಕ್ಕ ಕಾಲದಲ್ಲಿ ನೀನು ಸರ್ಕೀಟು ಹೊರಡಬೇಕು. ಯಾವ ಯಾವ ರೈತರು ಹೇಗೆ ಪೈರನ್ನು ಬೆಳೆಸಿರುವರೋ ಅದನ್ನು ನೋಡಬೇಕು. ಪೈರು ಇಡುವುದರಲ್ಲಿ ಹೆಚ್ಚು ಮೆಹನತ್ತು ಯಾರು ಮಾಡಿರುವರೋ ಅಂದರೆ ಹೆಚ್ಚಾಗಿ ಫಲವು ಯಾರಿಗೆ ಬಂದಿರುವುದೋ ಅದನ್ನು ಗೊತ್ತುಮಾಡಬೇಕು. ನಾನಾವಿಧವಾದ ಫಲಗಳನ್ನು ಯಾರು ಬೆಳೆದಿರುವರೋ ಅದನ್ನು ಗೊತ್ತುಮಾಡಬೇಕು. ಅವರವರ ಹೆಸರುಗಳನ್ನೂ, ಅಡ್ರೆಸ್ಸುಗಳನ್ನೂ ಬರೆದುಕೊಳ್ಳಬೇಕು. ದನಕರುಗಳನ್ನು ಯಾರು ಚನ್ನಾಗಿ ಸಾಕಿರುವರೋ, ಹಾಲು, ಮೊಸರು, ಬೆಣ್ಣೆ, ಮೊದಲಾದ ಭೋಗ್ಯವಸ್ತುಗಳನ್ನು ಯಾರು ಹೆಚ್ಚಾಗಿ ಮಾರ್ಕೆಟ್ಟಿಗೆ ಸರಪರಾಜು ಮಾಡುತ್ತಿರುವರೋ ಅದನ್ನು ಗೊತ್ತುಮಾಡಿಕೊಳ್ಳಬೇಕು. ಗ್ರಾಮದ ಪಾಕೀಜಿಗೆ ಯಾರು ವಿಶೇಷ ಸಹಾಯ ಮಾಡುವರೋ, ಅನಾಥರಕ್ಷಣೆಯನ್ನು ಯಾರು ಮಾಡುವರೋ, ಎಲ್ಲರೂ ಆತ್ಮಾವಲಂಬಿಗಳಾಗುವಂತೆ ಮಾಡುವುದಕ್ಕೆ ಯಾರು ಪ್ರೋತ್ಸಾಹ ಮಾಡುವರೋ, ಜನಗಳಲ್ಲಿ ಪರೋಪಕಾರವು ಹೆಚ್ಚುವಂತೆ ಯಾರು ಮಾಡುವರೋ, ಪರಪೀಡೆಯು

ಕಡಮೆಯಾಗುವಂತೆ ಯಾರು ಮಾಡುವರೋ, ಧರ್ಮವು ಹೆಚ್ಚುವಂತೆ ಯಾರು ಮಾಡುವರೋ, ಅಧರ್ಮವು ಕಡಮೆಯಾಗುವಂತೆ ಯಾರು ಮಾಡುವರೋ ಅವುಗಳನ್ನೆಲ್ಲಾ ಗೊತ್ತುಮಾಡಿಕೊಂಡು ವಿಚಾರಮಾಡಿ ಬಹುಮಾನಕ್ಕೆ ಅರ್ಹರಾದವರ ಪಟ್ಟಿಯನ್ನು ಮಾಡಿ, ನವರಾತ್ರಿ ವೇಳೆಯಲ್ಲಿ ದರ್ಬಾರಿಗೆ ಅವರನ್ನೆಲ್ಲಾ ಕರೆಸಿ, ಅವರ ಗುಣಕಥನಗಳನ್ನು ಮಾಡಿ, ಅವರಿಗೆ ಖಿಲ್ಲತ್ತುಗಳನ್ನು ಕೊಡಬೇಕು. ಈ ರೀತಿಯಲ್ಲಿ ಮಾಡುವುದರಿಂದ ಸಂಪದಭಿವೃದ್ಧಿಯ ಕೆಲಸಗಳಲ್ಲಿ ನಿನ್ನ ಕರ್ಷಕ ಪ್ರಜೆಗಳು ವಿಶೇಷ ಉತ್ಸಾಹಶಾಲಿಗಳಾಗುವರು. ನೀನು ಕೊಡತಕ್ಕ ಖಿಲ್ಲತ್ತುಗಳು ಒಂದಕ್ಕೆ ನೂರರಷ್ಟು ಸಂಪದಭಿವೃದ್ಧಿಯನ್ನು ಮಾಡುವುವು ಕರ್ಷಕರಿಗೆ ಬಂಡವಾಳವನ್ನು ಒದಗಿಸತಕ್ಕವರು ವೈಶ್ಯರು, ಉತ್ಪತ್ತಿಯಾದ ಸಂಪತ್ತನ್ನು ಎಲ್ಲೆಲ್ಲಿ ಯಾವ ಸಾಮುಗ್ರಿಗಳು ಬೇಕೋ ಅಲ್ಲಿಗೆ ರಫ್ತುಮಾಡತಕ್ಕವರು ವೈಶ್ಯರು, ಬಂಡವಾಳವನ್ನು ಒದಗಿಸಿ, ಸಂಪದಭಿವೃದ್ಧಿಯನ್ನು ಮಾಡುವುದರಲ್ಲಿ ಧರ್ಮದಿಂದ ನಡೆಯತಕ್ಕ ವಣಿಜ್ಮಣಿಗಳಿಗೆ ಈ ನವರಾತ್ರಿ ಸಮಯದಲ್ಲಿ ಕರ್ಷಕಶ್ರೇಷ್ಠರಿಗೆ ಹೇಗೋ ಹಾಗೆ ಬಹುಮಾನಗಳು ಮಾಡಲ್ಪಡಬೇಕು. ಸೃಷ್ಟಿಸ್ಥಿತಿಪ್ರಳಯಗಳಿಗೆ ಧರ್ಮಾನುಷ್ಠಾನನೇ ಮೂಲಕಾರಣವಾದ ಅಸ್ತಿಭಾರ. ಅವುಗಳಿಗನುಸಾರವಾಗಿ ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಮಾಡುವುದು ಅಧಿಕಾರಿಗಳ ಕರ್ತವ್ಯ. ಇವರೇ ಕ್ಷತ್ರಿಯರೆನಿಸಿಕೊಳ್ಳುವರು. ಜನ್ಮತಃ ಕ್ಷತ್ರಿಯರಾದವರು ಕೆಲವರು, ಕರ್ಮತಃ ಕ್ಷತ್ರಿಯರಾದವರು ಕೆಲವರು ಇರುವರು. ಕ್ಷತ್ರಿಯ ಧರ್ಮವನ್ನು ಯಾರು ನಿಸ್ಪೃಹತೆಯಿಂದ ಮಾಡುವರೋ ಅದನ್ನು ಗೊತ್ತುಮಾಡಿ, ಅವರ ಸಂಬಳವನ್ನು ತೆಗೆದುಕೊಂಡು ಕೆಲಸಮಾಡುತ್ತಿದ್ದಾಗ್ಯೂ, ಧರ್ಮದಿಂದ ಕೆಲಸ ಮಾಡಿದ್ದಕ್ಕೋಸ್ಕರ ಅವರಿಗೂ ಬಹುಮಾನಗಳು ಕೊಡಲ್ಪಡಬೇಕು.

ವೇದಶಾಸ್ತ್ರ ಪುರಾಣೇತಿಹಾಸಗಳನ್ನು ಪರಿಶೀಲಿಸಿ, ಧರ್ಮಾಧರ್ಮಗಳನ್ನು ಪರಿಶೀಲಿಸಿ, ನಿರ್ದುಷ್ಟವಾದ ಧರ್ಮಗಳ ವಿಚಾರಕ್ಕೂ, ಪ್ರಚಾರಕ್ಕೂ ಏರ್ಪಾಡು ಮಾಡತಕ್ಕವರು ಬ್ರಾಹ್ಮಣರು. ಕೇವಲ ನಿಸ್ಪೃಹತೆಯಿಂದ ಭೇದಭಾವಗಳನ್ನು ಬಿಟ್ಟು, ಗುಣೈಕಪಕ್ಷಪಾತಿಗಳಾಗಿ, ಸಹೋದರಭಾವವನ್ನೂ, ಪರಸ್ಪರ ಪ್ರೀತಿಯನ್ನೂ ಸಕಲ ಜಾತಿಗಳಲ್ಲಿಯೂ, ಸಕಲ ಕೋಮುಗಳಲ್ಲಿಯೂ ಉಂಟಾಗುವಂತೆ ಯಾವ ಬ್ರಾಹ್ಮಣರು ಮಾಡುವರೋ ಅವರು ಪೂಜ್ಯರು. ಹೀಗೆ ಸಕಲ ವರ್ಣದವರಲ್ಲಿಯೂ ಸಜ್ಜನರಾದವರನ್ನು ಲೋಕಸೇವೆಗೋಸ್ಕರ ನೀನು ಉಪಯೋಗಿಸುತ್ತ

ಲಿಲ್ಲ. ಈ ವಿಷಯಕ್ಕೆ ಗಮನವನ್ನು ಕೊಡದಿದ್ದರೆ, ನಿನ್ನ ದೇಶದ ಸಂಪತ್ತು ಹೆಚ್ಚುವುದಿಲ್ಲ. ಸಜ್ಜನರು ನಿನ್ನಲ್ಲಿ ಅನುರಕ್ತರಾಗುವುದಿಲ್ಲ. ಸಕಲ ಜನರ ಪ್ರೀತಿಗೂ ಪಾತ್ರನಾಗುವುದು ಪ್ರಭುವಿಗೆ ಮುಖ್ಯ ಕರ್ತವ್ಯವಾದುದರಿಂದ ಈ ವಿಷಯಕ್ಕೆ ನಿನ್ನ ಗಮನವು ಕೊಡಲ್ಪಡಬೇಕು. ಪ್ರಭುಗಳೂ, ಉಪಪನ್ನರಾದ ಪ್ರಜೆಗಳೂ ಅನವಸ್ತ್ರಗಳಿಗಿಲ್ಲದೆ ತಮ್ಮ ದೇಶದಲ್ಲಿ ಯಾರಾದರೂ ಕಷ್ಟಕ್ಕೆ ಗುರಿಯಾಗದೆ ಇರುವರೇ ಎಂದು ಪರ್ಯಾಲೋಚಿಸಬೇಕು. ಹಾಗಿದ್ದ ಪಕ್ಷದಲ್ಲಿ, ತಮ್ಮ ದುಂದುಗಾರಿಕೆ ಖರ್ಚುಗಳನ್ನು ಕಡಮೆ ಮಾಡಿಕೊಂಡು, ಉಳಿಯತಕ್ಕ ದ್ರವ್ಯದಲ್ಲಿ ಅನ್ನವಸ್ತ್ರಗಳಿಗಿಲ್ಲದೆ ಯಾರೂ ಕಷ್ಟಕ್ಕೆ ಗುರಿಯಾಗದಂತೆ ಮಾಡಬೇಕು. ಹೀಗೆ ಮಾಡುವುದು ಮೈನಾಸನ ಸಂತತಿಯವನಾದ ನಿನಗೆ ಮುಖ್ಯ ಕರ್ತವ್ಯ. ಈ ಕರ್ತವ್ಯವನ್ನು ಸಮಗ್ರವಾಗಿ ಮಾಡಿ ಕೃತಕೃತ್ಯನಾಗು.

ಈ ಹಿತೋಪದೇಶಗಳನ್ನು ಕೇಳಿ, ಇಡುಮಿಾನಿಯಸ್ಸನು ಮೆಂಟರನನ್ನು ಕುರಿತು ಹೇಳಿದ್ದೇನಂದರೆ:—

"ನೀನು ಹೇಳಿದ್ದೆಲ್ಲಾ ಯುಕ್ತಿಯುಕ್ತವಾಗಿ ಇದೆ. ಈ ದೇಶವು ಫಲವತ್ತಾದ್ದು. ಜಮಿಾನುಗಳನ್ನು ವ್ಯವಸಾಯ ಮಾಡುವುದಕ್ಕೋಸ್ಕರ ಜನಗಳಿಗೆ ಹಂಚಿರುತ್ತೇನೆ. ಅವರು ಅದನ್ನು ಸರಿಯಾಗಿ ಉಳುವುದಿಲ್ಲ. ಶಾಸ್ತ್ರವಿಧಿಗನುಸಾರವಾಗಿ ಜಮಿಾನಿಗೆ ಒಳ್ಳೇ ಗೊಬ್ಬರವನ್ನು ಹಾಕಿ; ಶ್ರದ್ಧೆಯಿಂದ ಪೈರು ಮಾಡಿ, ಸಂಪದಭಿವೃದ್ಧಿಗೆ ಬೇಕಾದ ಕೆಲಸಗಳನ್ನು ಮಾಡುವುದಿಲ್ಲ. ಜನಗಳು ಸೋಮಾರಿತನವನ್ನು ಕಲಿತುಕೊಂಡು ಇದಾರೆ. ಖುಷ್‌ಪಾಷ್ ಜೀವನದಲ್ಲಿ ಆಸಕ್ತರಾಗಿರುತ್ತಾರೆ. ಕಷ್ಟಸಾಧ್ಯವಾದ ಕೆಲಸಗಳ್ಯಾವುದನ್ನೂ ಮಾಡುವುದಿಲ್ಲ. ಬಹು ಜನಗಳು ಅಜಿತೇಂದ್ರಿಯರಾಗಿ, ದುರ್ವಿಷಯಗಳಲ್ಲಿ ಆಸಕ್ತರಾಗಿರುತ್ತಾರೆ. ಇವರನ್ನು ಉದ್ಯೋಗಿಗಳನ್ನಾಗಿಯೂ, ಪುರುಷಕಾರದಲ್ಲಿ ಆಸಕ್ತರನ್ನಾಗಿಯೂ ಮಾಡುವುದು ಅಸಾಧ್ಯವಾಗಿ ಇದೆ. ಅಭಕ್ಷ್ಯ ಭೋಜನ, ಅಪೇಯಪಾನ, ಅಗಮ್ಯಾಗಮನ ಮೊದಲಾದವುಗಳಲ್ಲಿ ಜನಗಳು ವಿಶೇಷ ಅನುರಕ್ತರಾಗಿರುತ್ತಾರೆ. ಇವರುನ್ನ ತಿದ್ದುವುದು ಬಹಳ ಕಷ್ಟವಾಗಿ ಇದೆ. ಇದಕ್ಕೆ ಏನು ಮಾಡಬೇಕೋ ಅದು ನನಗೆ ಗೊತ್ತಾಗುವುದಿಲ್ಲ. ಎಲ್ಲರೂ ಸಂಪದಭಿವೃದ್ಧಿ ಕೆಲಸಗಳಲ್ಲಿ ಆಸಕ್ತರಾಗುವಂತೆಯೂ, ಸನ್ಮಾರ್ಗಪ್ರವರ್ತಕರಾಗುವಂತೆಯೂ, ನಿರ್ದುಷ್ಟವಾದ ಭೋಗಗಳಲ್ಲಿ ಆಸಕ್ತರಾಗುವಂತೆಯೂ, ಇಹಪರಸಾಧನೆಗಳಲ್ಲಿ ಅನುರಕ್ತರಾಗು

ವಂತೆಯೂ ಮಾಡಬೇಕೆಂಬ ಅಭಿಲಾಷೆಯು ನನಗೆ ತುಂಬಾ ಇರುತ್ತದೆ. ಆದರೆ ಅದು ಅಸಾಧ್ಯವಾಗಿ ಇದೆ. ಇದಕ್ಕೆ ಏನುಮಾಡಬೇಕೋ ಅದನ್ನು ತಿಳಿಸಿದರೆ, ಆ ರೀತಿಯಲ್ಲಿ ಮಾಡುತ್ತೇನೆ."

ಈ ರೀತಿಯಲ್ಲಿ ಇಡುಮಿಾನಿಯುಸ್ಸನು ಹೇಳಲು, ಅವನಿಗೆ ಮೆಂಟರನು ಅಪ್ಪಣೆ ಕೊಡಿಸಿದ್ದೇನಂದರೆ:—

"ಯಥಾರಾಜಾತಥಾಪ್ರಜಾಃ" ಎಂಬ ಮಾತನ್ನು ನೀನು ಕೇಳಿರಬಹುದು. ರಾಜರೇ ಮೊದಲಾದ ಉಪಪನ್ನರು ಯಾವ ಮೇಲ್ಪಂಕ್ತಿಯನ್ನು ಹಾಕುವರೋ ಅದನ್ನು ಜನಗಳು ಅನುಸರಿಸುವರು. ನೀನು ಖುಷ್‌ಪಾಷ್ ಜೀವನವನ್ನು ಮಾಡಿದರೆ, ನೀನೂ, ನಿನ್ನ ಮುಖ್ಯವಾದ ಅಧಿಕಾರಿಗಳೂ ದುರ್ವಿಷಯಗಳಲ್ಲಿ ಆಸಕ್ತರಾದರೆ, ನಿನ್ನ ಪ್ರಜೆಗಳೂ ಕೂಡ ನಿಮ್ಮ ಮೇಲ್ಪಂಕ್ತಿಯನ್ನು ಅನುಸರಿಸುವರು. ಉದ್ಯೋಗವು ಪುರುಷನಿಗೆ ಹೇಗೋ ಹಾಗೆ ಸ್ತ್ರೀಗೂ ಲಕ್ಷಣವಾದದ್ದು. ನಿರುದ್ಯೋಗಿಗಳಿಗೆ ತಿಂದ ಅನ್ನವು ಮೈಹತ್ತುವುದಿಲ್ಲ. ಬಿಸಲಿನಲ್ಲಿ ಮೆಹನತ್ತು ಮಾಡಿದವನಿಗೆ ನೆರಳಿನ ಮಹಿಮೆಯು ಗೊತ್ತಾಗುತ್ತದೆ. ದೇಹಕ್ಕೂ, ಬುದ್ಧಿಗೂ ಯಾರು ಸರಿಯಾದ ಕೆಲಸಗಳನ್ನು ಕೊಡುತ್ತಾರೋ ಅವರ ದೇಹವೂ, ಬುದ್ಧಿಯೂ ಲಾಘವವುಳ್ಳದ್ದಾಗಿಯೂ, ಚುರುಕಾಗಿಯೂ ಇರುವುದು. ಹಾಗೆ ಮಾಡದಿದ್ದರೆ ದೇಹಕ್ಕೆ ಲಾಘವವು ತಪ್ಪುವುದು. ಬುದ್ಧಿಯು ಮಾಂದ್ಯವನ್ನು ಹೊಂದುವುದು. ಇಷ್ಟುಮಾತ್ರವೇ ಅಲ್ಲ. ಸೋಮಾರಿತನದಿಂದ ಅನೇಕ ಅನರ್ಥಗಳು ಉಂಟಾಗುವುವು. ತಿಂದ ಅನ್ನವು ಜೀರ್ಣಕ್ಕೆ ಬರುವುದಿಲ್ಲ. ನಾನಾವಿಧವಾದ ರೋಗಗಳು ಬರುವುವು. ಅಕಾಲಮರಣವು ಸನ್ನಿಹಿತವಾಗುವುದು. ಇದೆಲ್ಲಾ ಅನುಭವಸಿದ್ಧವಾದವುಗಳು. ಉಪಪನ್ನರಾದವರೂ, ಅವರ ಕುಟುಂಬಕ್ಕೆ ಸೇರಿದವರೂ ಎಷ್ಟು ಅನಾರೋಗ್ಯಕ್ಕೆ ಪಾತ್ರಸ್ಥಾನವಾಗುವರೋ ಅದು ಎಲ್ಲರಿಗೂ ಅನುಭವಸಿದ್ಧವಾಗಿರುವುದು. ಸಕಲ ಸಂಪತ್ತುಗಳಿಗೂ ಪುರುಷಕಾರವೇ ಉತ್ತೇಜಕವಾದದ್ದು. ಆಯುರಾರೋಗ್ಯೈಶ್ವರ್ಯ ಪ್ರಾಪ್ತಿಗೆ ಉದ್ಯೋಗವೇ ಮುಖ್ಯಕಾರಣ. ಪ್ರಯೋಜನಕ್ಕೋಸ್ಕರ ಮಾತ್ರವಲ್ಲದೆ, ಘನತೆಯನ್ನು ಪಡೆಯುವುದಕ್ಕೂ ಕೂಡ ಉದ್ಯೋಗವು ಸಾಧಕವಾದದ್ದು. ಕೃಷಿಯು ವೃತ್ತಿಗಳಲ್ಲಿ ಶ್ರೇಷ್ಠವಾದದ್ದು. ಅದನ್ನು ಕನಿಷ್ಠವಾದದ್ದೆಂದು ತಿಳಿದುಕೊಳ್ಳಬಾರದು. ಪೂರ್ವದಲ್ಲಿ ಮಹಾವೀರರಾದವರು ಕೃಷಿಯನ್ನು ಮಾಡುತ್ತಿದ್ದರು. ಯುದ್ಧವು ಸನ್ನಿಹಿತವಾದಾಗ ಅಸ್ತ್ರಶಸ್ತ್ರಗಳನ್ನು

ಹೇಗೆ ಉಪಯೋಗಿಸುತ್ತಿದ್ದರೋ ಹಾಗೆ ಸಮಾಧಾನದ ಕಾಲದಲ್ಲಿ ಈ ಮಹಾವೀರರು ನೇಗಿಲು, ಗುದ್ದಲಿ ಮೊದಲಾದವುಗಳನ್ನು ಉಪಯೋಗಿಸುತ್ತಿದ್ದರು. ಪ್ರಭುಗಳೂ, ಮಿಲಿಟರಿ ಅಧಿಕಾರಿಗಳೂ ಹಾಕತಕ್ಕ ಮೇಲ್ಪಂಕ್ತಿಯನ್ನು ನೋಡಿ, ಪ್ರಜೆಗಳೂ ಇವರನ್ನು ಅನುಸರಿಸಿ ನಡೆಯುತ್ತಿದ್ದರು. ಈ ದ್ವೀಪನಿವಾಸಿಗಳು ಅವರ ಮೆಹನತ್ತಿನಿಂದ ಉಂಟಾದ ಸಂಪತ್ತಿನ ಫಲವನ್ನು ಅನುಭವಿಸುತ್ತಿದ್ದರು. ನಾನಾ ವಿಧವಾದ ಫಲಗಳು ವೃಕ್ಷಗಳಿಂದ ಜೋಲಾಡುತ್ತಿದ್ದವು. ಫಲಗಳ ರಸಗಳು ನದಿಗಳಂತೆ ಹರಿಯುತ್ತಿದ್ದವು. ಫಲಗಳನ್ನು ತಿಂದು ಅವುಗಳ ರಸವನ್ನು ಪಾನ ಮಾಡಿ, ಗಾನಗಳನ್ನು ಮಾಡುತ್ತಾ, ಜನಗಳು ಆನಂದಭರಿತರಾಗಿರುತ್ತಿದ್ದರು. ಮೈನಾಸನ ಕಾಲದಲ್ಲಿ ಎಲ್ಲರೂ ಉದ್ಯೋಗಿಗಳಾಗಿ, ಎಲ್ಲರೂ ಜಿತೇಂದ್ರಿಯರಾಗಿ ಎಲ್ಲರೂ ಸನ್ಮಾರ್ಗಪ್ರವರ್ತಕರಾಗಿ ಇದ್ದರೆಂದು ಈ ದ್ವೀಪದ ಚರಿತ್ರೆಯಿಂದಲೇ ಗೊತ್ತಾಗುತ್ತದೆ. ನಿನ್ನ ಕಾಲದಲ್ಲಿ ಉದ್ಯೋಗಗಳನ್ನು ಮಾಡದೆ, ಉದ್ಯೋಗದ ಫಲವನ್ನು ಅಪೇಕ್ಷಿಸುವರು. ಕೃಷಿಯನ್ನು ಮಾಡದೆ, ಸಂಪತ್ತನ್ನು ಅಪೇಕ್ಷಿಸುವರು. ಜಿತೇಂದ್ರಿಯರಾಗಿ ತಪಸ್ಸನ್ನು ಮಾಡದೆ, ತಪಸ್ಸಿನ ಫಲವನ್ನು ಅಪೇಕ್ಷಿಸುವರು. ಇಂಥಾ ಅಪೇಕ್ಷೆಗಳು ಎಂದಿಗಾದರೂ ಸಫಲವಾಗುವುವೇ ? ಹೀಗೆ ಆಗುವುದಕ್ಕೆ ಕಾರಣವೇನೆಂದು ನೀನು ಪರ್ಯಾಲೋಚಿಸಿರುವಂತೆ ತೋರುವುದಿಲ್ಲ. “ ರಾಜಾಕಾಲಸ್ಯಕಾರಣಂ ” ಎಂಬದಾಗಿ ಹೇಳುವುದನ್ನು ನೀನು ಕೇಳಿರಬಹುದು. ದೇಶದ ಸಂಪತ್ತಿಗೂ, ವಿಪತ್ತಿಗೂ ಎರಡಕ್ಕೂ ರಾಜನೇ ಕಾರಣ. ಪ್ರಾಯಕವಾಗಿ ಜನಗಳೆಲ್ಲರೂ ರಾಜನ ಮನೋವಾಕ್ಕರ್ಮಗಳನ್ನು ನೋಡಿ, ತಾವು ಅವನ ಮೇಲ್ಪಂಕ್ತಿಯನ್ನು ಅನುಸರಿಸುವರು. ಲೋಕಹಿತಾರ್ಥವಾಗಿಯೂ, ಆತ್ಮಹಿತಾರ್ಥವಾಗಿಯೂ ರಾಜನು ಒಳ್ಳೇ ಮೇಲ್ಪಂಕ್ತಿಯನ್ನು ಹಾಕಬೇಕು. ಹಾಗೆ ಮಾಡಿದರೆ ಶಾಂತಿಯು ಉಂಟಾಗುವುದು. ದೊಂಬಿಗಳು ಕಡಮೆಯಾಗುವುವು. ಪರಸ್ಪರ ಪ್ರೀತಿಯು ಹುಟ್ಟುವುದು. ತಾಪತ್ರಯಗಳು ಕಡಮೆಯಾಗುವುವು. ಭಯವು ತಪ್ಪುವುದು. ಕ್ಷಾಮವು ತಪ್ಪುವುದು. ನಿರಾಶೆಯು ತಪ್ಪುವುದು. ಅಂಥಾ ಪ್ರಭುವಿನ ದೇಶವೇ ಸ್ವರ್ಗವಾಗಿ ಪರಿಣಮಿಸುವುದು. ” ಈ ರೀತಿಯಲ್ಲಿ ಆಗುವಂತೆ ನೀನೂ, ನಿನ್ನ ಅಧಿಕಾರಿಗಳೂ, ನಿನ್ನ ದೇಶದಲ್ಲಿ ಮುಖಂಡರಾದವರೂ ಸರಿಯಾದ ಮೇಲ್ಪಂಕ್ತಿಯನ್ನು ಹಾಕಲಿಲ್ಲ. ಸೋಮಾರಿತನದ ಮೇಲ್ಪಂಕ್ತಿಯನ್ನು ಹಾಕಿರುವಿರಿ ನಿನ್ನ ದೇಶದಲ್ಲಿ ಇರುವ ಅನರ್ಥಗಳಿಗೆ ನೀವೇ ಕಾರಣಭೂತರು

ಪ್ರಭುಗಳಾದವರು ಸೋಮಾರಿತನಕ್ಕೆ ಯಾರಿಗೂ ಅವಕಾಶ ಕೊಡಬಾರದು. ಎಲ್ಲರೂ ಒಳ್ಳೇ ಪ್ರತಿಫಲವುಳ್ಳ ಉದ್ಯೋಗಗಳಲ್ಲಿ ಆಸಕ್ತರಾಗಿರುವಂತೆ ಮಾಡಬೇಕು. ಉದ್ಯೋಗವನ್ನು ಮಾಡಿ ಬೇಜಾರನ್ನು ಹೊಂದಿದಾಗ ಸತ್ಕಾವ್ಯಾಲಾಪಗಳೇ ಮೊದಲಾದವುಗಳಲ್ಲಿಯೂ, ಸಮೀಚೀನವಾದ ವ್ಯಾಯಾಮಗಳಲ್ಲಿಯೂ ಸಂತೋಷಜನಕವಾದ ವಿಹಾರಗಳನ್ನು ಹೊಂದಬೇಕು. ಈ ವಿಹಾರಗಳು ನಮ್ಮ ಆಯುರಾರೋಗ್ಯೈಶ್ವರ್ಯಗಳಿಗೆ ಪ್ರತಿಕೂಲವಾಗದೆ ಇರುವಂತೆ ನೋಡಿಕೊಳ್ಳಬೇಕು. ಈ ಕೆಲಸಗಳೆಲ್ಲಾ ಪ್ರಭುವಿಗೆ ಸಂಬಂಧಪಟ್ಟವುಗಳು. ಆದುದರಿಂದ ಪ್ರಭುವಿನ ಜವಾಬ್ದಾರಿಯೂ, ಅಧಿಕಾರಿಗಳ ಜವಾಬ್ದಾರಿಯೂ ಬಹಳ ದೊಡ್ಡದು. ಈ ಜವಾಬ್ದಾರಿಯನ್ನು ದೇವರ ದಯೆಯಿಂದ ಯಾವ ಪ್ರಭುಗಳು ಸಮಗ್ರವಾಗಿ ನೆರವೇರಿಸುವರೋ ಆ ರಾಜ್ಯವು ಧರ್ಮರಾಜ್ಯವಾಗಿರುವುದು. ಅಲ್ಲಿನ ಪ್ರಜೆಗಳು ಅಕೃತ್ರಿಮವಾದ ರಾಜಭಕ್ತಿವಿಶ್ವಾಸಗಳುಳ್ಳವರಾಗಿರುವರು. ಪ್ರಭುವು ಈ ಜವಾಬ್ದಾರಿಯ ಮೇರೆಗಳನ್ನು ಉಲ್ಲಂಘಿಸಿ ನಡೆದರೆ, ಪ್ರಜೆಗಳೂ ಕೂಡ ಇವನ ಮೇಲ್ಪಂಕ್ತಿಯನ್ನು ಅನುಸರಿಸುವರು. ಇದರಿಂದ ತುಂಬಾ ಅನರ್ಥಗಳಿಗೆ ಅವಕಾಶವಾಗುವುದು ಆದುದರಿಂದ ನೀನು ನಿನ್ನ ಪ್ರಜೆಗಳಿಗೆ ನ್ಯಾಯವಾದ ಮೇರೆಯೊಳಗಿರುವಂತೆ ಮೇಲ್ಪಂಕ್ತಿಯನ್ನು ಹಾಕಬೇಕು. ನಿರಂಕುಶವಾಗಿ ನಡೆಯತಕ್ಕ ಪ್ರಭುಗಳಿಗೆ ಅವರ ಭೃತ್ಯರೂ ಮತ್ತು ಇತರ ಪ್ರಜೆಗಳೂ ಹೆದರುವರು. ಭಯದಿಂದ ಆಳುವುದಕ್ಕಿಂತಲೂ ಪ್ರೀತಿಯಿಂದ ಆಳುವುದೇ ಉತ್ತಮವು. ಭಯವು ಪರಾಕಾಷ್ಠದೆಸೆಗೆ ಬಂದರೆ ನಿರ್ಭಯವಾಗಿ ಪರಿಣಮಿಸುವುದು. ಭಯದಿಂದ ನಡೆದುಕೊಳ್ಳತಕ್ಕವರು ಕಾನೆ ಬಿಕ್ಕಟ್ಟಿಗೆಬಂದಾಗ, ಹುಲಿಗಳಂತೆ ಮೇಲೆ ಬೀಳುವರು. ನೀನು ಸರ್ವಪ್ರಯತ್ನದಿಂದಲೂ ನಿನ್ನ ಪ್ರಜೆಗಳಲ್ಲಿ ಸಕಲರಿಗೂ ಅನ್ನವಸ್ತ್ರಗಳಿಗೆ ನೆಮ್ಮದಿಯಾಗಿರುವಂತೆ ಪರಿಪಾಲಿಸು. ಪಾಪಕರ್ಮಗಳನ್ನು ಮಾಡುವುದಕ್ಕೆ ಮಾತ್ರ ಎಲ್ಲರೂ ಭಯಪಡುವಂತೆ ಮಾಡು. ಇದು ನಿನ್ನ ಮುಖ್ಯ ಕರ್ತವ್ಯ.

ಈ ಮಾತನ್ನು ಕೇಳಿ ಇಡುಮಿನಿಯಸ್ಸನು ಹೇಳಿದ್ದೇನಂದರೆ:—"ಪ್ರಜೆಗಳು ಧರ್ಮದಿಂದ ನಡೆಯುವಂತೆಯೂ, ಅಧರ್ಮವನ್ನು ಮಾಡುವುದಕ್ಕೆ ಭಯಪಡುವಂತೆಯೂ ಮಾಡುವುದು ಪ್ರಭುಗಳಿಗೆ ಕರ್ತವ್ಯ. ಈ ವಿಷಯದಲ್ಲಿ ನಾವು ಮೇಲ್ಪಂಕ್ತಿಗಳನ್ನು ಹಾಕಬಹುದು. ಈ ಮೇಲ್ಪಂಕ್ತಿಯನ್ನು ಅನುಸರಿಸುವರೂ

ಉಂಟು. ಉಲ್ಲಂಘಿಸತಕ್ಕವರೂ ಉಂಟು. ಉಲ್ಲಂಘಿಸತಕ್ಕವರನ್ನು ದಂಡಿಸ ಬೇಕೆಂಬದಾಗಿಯೂ, ಧರ್ಮದಿಂದ ನಡೆಯತಕ್ಕವರು ರಕ್ಷಿಸಲ್ಪಡಬೇಕೆಂಬದಾ ಗಿಯೂ ನೀನು ಹೇಳುತ್ತೀಯೆ. ಎಲ್ಲಾ ಸಂದರ್ಭಗಳಲ್ಲಿಯೂ ದುಷ್ಟನಿಗ್ರಹ, ಶಿಷ್ಟಪರಿಪಾಲನೆಯು ಮಾಡುವುದು ಬಹಳ ಕಷ್ಟ. ಪುತ್ರಮಿತ್ರಕಳತ್ರಾದಿಗಳೂ, ಬಂಧುಮಿತ್ರರೂ, ವಿಶೇಷ ಉಪಪನ್ನರಾದ ಇತರರೂ ಪ್ರಬಲರಾಗಿರುವುದುಂಟು. ಇವರು ಉಪಪನ್ನರಾಗಿಯೂ ಇರುವುದುಂಟು. ಇವರು ತಪ್ಪು ಮಾಡಿದಾಗ್ಯೂ ಮನ್ನಿಸಬೇಕಾಗುತ್ತದೆ. ಹಾಗಿಲ್ಲದಿದ್ದರೆ ನಾವು ಬದುಕುವುದೇ ಕಷ್ಟವಾಗುತ್ತದೆ. ಚರಿತ್ರೆಗಳನ್ನು ನೋಡಿದರೆ, ಈ ವಿಷಯವು ಸ್ಪಷ್ಟವಾಗುವುದು. ದುಷ್ಟನಿಗ್ರಹ, ಶಿಷ್ಟಪರಿಪಾಲನದಲ್ಲಿ ಆಸಕ್ತರಾದ ಎಷ್ಟು ಜನ ಪ್ರಭುಗಳು ತಮ್ಮ ಬಂಧುಮಿತ್ರರ ಆಗ್ರಹಕ್ಕೆ ಪಾತ್ರರಾಗಿ ನಾಶವಾಗಿರುವುದಿಲ್ಲ! ಉಪಪನ್ನರಾದ ಪ್ರಜೆಗಳನ್ನು ನಿಗ್ರಹಿಸತಕ್ಕ ಪ್ರಯತ್ನದಲ್ಲಿ ಎಷ್ಟು ಜನಗಳು ನಾಶವಾಗಿರುವುದಿಲ್ಲ ? ಇಂಥಾ ಸಂದರ್ಭಗಳಲ್ಲಿ ಬಂಧುಮಿತ್ರರೂ, ಉಪಪನ್ನರಾದ ಪ್ರಜೆಗಳೂ ಕೇವಲ ಧನಿಕರಾ ಗುವುದಕ್ಕೂ, ಅಪ್ರತಿಹತವಾದ ಅಧಿಕಾರಗಳನ್ನು ಹೊಂದುವುದಕ್ಕೂ ಅವಕಾಶ ಕೊಡಲ್ಪಡಬಹುದೇ ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ? ನನ್ನಲ್ಲಿ ಕೃಪೆ ಯನ್ನು ಇಟ್ಟು ತಿಳಿಸು.'' ಇದಕ್ಕೆ ಮೆಂಟರನು ಹೇಳಿದ್ದೇನಂದರೆ:—

"ನೀನು ಹಾಕಿದ ಪ್ರಶ್ನೆಯು ಯುಕ್ತಿಯುಕ್ತವಾದದ್ದು. ಬಂಧುಮಿ ತ್ರರೂ, ಉಪಪನ್ನರಾದ ಪ್ರಜೆಗಳೂ ಸದ್ಗುಣಸಂಪನ್ನರಾಗಿದ್ದರೆ ತುಂಬಾ ಉಪ ಯೋಗವಾಗುತ್ತಾರೆ. ಇವರು ಅಧಿಕಾರ ಮದದಿಂದಲೂ, ಐಶ್ವರ್ಯ ಮದ ದಿಂದಲೂ ಪ್ರವರ್ತಿಸುವುದುಂಟು. ಧರ್ಮಿಷ್ಠರಾದ ಪ್ರಜೆಗಳನ್ನು ಹಿಂಸಿಸುವು ದುಂಟು. ಇವರು ಮಾಡತಕ್ಕ ಅನ್ಯಾಯದಿಂದ ಬಡವರಾಗಿಯೂ, ಧರ್ಮಿಷ್ಠ ರಾಗಿಯೂ ಇರತಕ್ಕವರನ್ನು ರಕ್ಷಿಸಬೇಕಾಗುವುದು. ಅಂಥಾ ರಕ್ಷಣ ಕರ್ಮವು ಕಷ್ಟವಾದಾಗ, ಪ್ರಭುಗಳಿಗೆ ಅಸಾಧಾರಣವಾದ ಧೈರ್ಯಸ್ಥೈರ್ಯಗಳು ಬೇಕಾಗುತ್ತವೆ. ಅನ್ಯಾಯವನ್ನು ಮಾಡತಕ್ಕವರೂ ಮತ್ತು ಅಧಿಕಾರವನ್ನು ದುರುಪಯೋಗಪಡಿಸತ ಕ್ಕವರೂ ಗುರುಗಳಾಗಲಿ, ಹಿರಿಯರಾಗಲಿ, ಬಂಧುಗಳಾಗಲಿ, ಮಿತ್ರರಾಗಲಿ, ಪುತ್ರ ರಾಗಲಿ, ಕಳತ್ರರಾಗಲಿ ನಿರ್ದಾಕ್ಷಿಣ್ಯವಾಗಿ ನಿಗ್ರಹಿಸಲ್ಪಡಬೇಕು. ಅವರ ಅನ್ನವ ಸ್ತ್ರಗಳಿಗೆ ಬೇಕಾದಷ್ಟನ್ನು ಅವರಿಗೆ ಕೊಟ್ಟು ಉಳಿದ ಅವರ ಆಸ್ತಿಯನ್ನು ಸರ್ಕಾರ ದಲ್ಲಿ ಅವರ ಹೆಸರಿನಲ್ಲಿ ಠೇವಣಿಯಾಗಿ ಇಡಬೇಕು. ಅವರು ಧರ್ಮಿಷ್ಠರಾದರೆಂದು

ತೋರ್ಪಿದಾಗ, ಅವುಗಳನ್ನು ಅವರಿಗೆ ಕೊಡಬಹುದು. ಅವರು ಧರ್ಮಿಷ್ಠರಾಗು ವುದಿಲ್ಲವೆಂದು ತೋರಿದರೆ, ಅವರ ಆಸ್ತಿಯನ್ನು ಧರ್ಮಕೆಲಸಗಳಿಗೆ ಸೇರಿಸಿಬಿಡಬೇಕು. ಪ್ರಭುಗಳು ಉಪಕ್ರಮದಲ್ಲಿಯೇ ಜಾಗರೂಕರಾಗಿರಬೇಕು. ಬಂಧುಮಿತ್ರರೇ ಮೊದಲಾದವರು ಧರ್ಮಿಷ್ಠರೆಂದು ತೋರುವರೆಗೂ, ಅವರಿಗೆ ವಿಶೇಷ ದ್ರವ್ಯವೂ, ಅಪ್ರತಿಹತವಾದ ಅಧಿಕಾರವೂ ಬರದಂತೆ ಮಾಡುವುದು ಅತ್ಯಾವಶ್ಯಕ. ಈ ವಿಷ ಯದಲ್ಲಿ ಮೊಗಲ್ ಚಕ್ರವರ್ತಿಗಳು ಉದಾಸೀನಮಾಡಿದ್ದರಿಂದ ಅವರ ಚಕ್ರಾಧಿಪತ್ಯವೇ ನಾಮಾವಶೇಷವಾಯಿತು. ಈ ವಿಷಯವನ್ನು ಸಾವಧಾನವಾಗಿ ಪರ್ಯಾಲೋ ಚಿಸು. ನಿನ್ನ ಉಪಕಾರವನ್ನು ಹೊಂದಿ, ನಿಸರ್ಗವಾದ ಕೃತಜ್ಞತೆಯುಳ್ಳ ಜನಗ ಳನ್ನು ಸಮೀಪವರ್ತಿಗಳನ್ನಾಗಿಟ್ಟುಕೋ. ಬಂಧುಮಿತ್ರರು ಅಕೃತ್ರಿಮವಾದ ಪ್ರೀತಿಯುಳ್ಳವರೆಂದು ತೋರಿದ ಹೊರ್ತು, ಅವರನ್ನು ನಂಬಬೇಡ. ಅಧರ್ಮವನ್ನು ಯಾರು ಮಾಡಿದಾಗ್ಯೂ, ದಾಕ್ಷಿಣ್ಯಪರವಶತೆಯಿಂದ ಅವರ ತಪ್ಪನ್ನು ಮನ್ನಿಸ ಬೇಡ. ಅವರವರ ಕರ್ಮಗಳ ಫಲವನ್ನು ಅವರು ಅನುಭವಿಸಬೇಕಾಗುತ್ತದೆಂಬ ನಂಬಿಕೆಯು ಅವರಿಗೆ ಉಂಟಾಗುವಂತೆ ಮಾಡು. ಈ ವಿಷಯದಲ್ಲಿ ಪ್ರಭುಗಳು ದೇವರಂತೆ ಸಾಕ್ಷೀಭೂತರಾಗಿರಬೇಕು. ಅಮೃತವನ್ನು ಪಾನಮಾಡಿದವರು ಆಯುರಾರೋಗ್ಯ ಐಶ್ವರ್ಯವನ್ನು ಹೊಂದುವರು. ವಿಷಪಾನ ಮಾಡಿದವರು ಕಳೇ ಬರವನ್ನು ಬಿಡುವರು. ಇದು ಹೇಗೆ ನಿಜವಾಗುವುದೋ ಹಾಗೆಯೇ ನಿನ್ನ ಪ್ರಜೆ ಗಳಲ್ಲಿ ಧರ್ಮದಿಂದ ನಡೆಯತಕ್ಕವರು ಅದಕ್ಕೆ ಅನುರೂಪವಾದ ಫಲವನ್ನು ಹೊಂದು ವರು. ಅಧರ್ಮಿಷ್ಠರು ಅವರ ದುಷ್ಕರ್ಮದ ಫಲವನ್ನು ಹೊಂದಲಿ. ಹೀಗಾಗು ವುದಕ್ಕೆ ನೀನು ಸಾಕ್ಷಾತ್ಕಾರಣನಾಗಬೇಡ. ಯಾರು ನಿರಂಕುಶವಾಗಿ ಅಧರ್ಮ ಮಾಡುವರೋ ಅವರನ್ನು ನಿಸ್ಪೃಹರಾದ ಪಂಚಾಯಿತರ ವಿಚಾರಣೆಗೆ ಗುರಿಮಾಡು. ಸದರಿ ಪಂಚಾಯಿತರು ಧರ್ಮದಿಂದ ನಡೆಯುವಂತೆ ನೋಡಿಕೊಳ್ಳುವುದಕ್ಕೆ ನೀನು ಅಧ್ಯಕ್ಷನಾಗಿರು. ಅವರು ಮಾಡಿದ ನ್ಯಾಯವಾದ ತೀರ್ಪಿಗೆ ರುಜುಹಾಕು. ಜಗದೀಶ್ವರನಂತೆ ಪ್ರತಿಯೊಬ್ಬರೂ ಅವರವರ ಕರ್ಮಫಲವನ್ನು ಅನುಭವಿಸುವಂತೆ ಮಾಡು. ಹೀಗೆ ಮಾಡಿದರೆ, ದುಷ್ಟನಿಗ್ರಹವೂ, ಶಿಷ್ಟಪರಿಪಾಲನವೂ ತಾವಾ ಗಿಯೇ ಆಗುವುವು. ''

ಈ ರೀತಿಯಲ್ಲಿ ಮೆಂಟರನು ಹೇಳಲು, ಇಡುಮೀನಿಯಸ್ಸನು ಹೇಳಿದ್ದೇ ನೆಂದರೆ:—'' ದರಿದ್ರಾವಸ್ಥೆಯಲ್ಲಿ ಜನಗಳು ಧರ್ಮಿಷ್ಠರಾಗಿಯೂ, ವಿಧೇಯರಾ

ಗಿಯೂ ಇರುವರು. ಕ್ರಮಕ್ರಮವಾಗಿ ಉಪಪನ್ನರಾಗುವರು. ಅಧಿಕಾರ ವನ್ನು ಪಡೆಯುವರು ಉಪಪನ್ನತೆಯೂ, ಅಧಿಕಾರವೂ ಬಂದ ಮೇಲೆ ಅವರು ದೌರಾತ್ಮ್ಯವನ್ನು ತೋರಿಸುವರು. ಇದಕ್ಕೆ ಏನು ಮಾಡಬೇಕು ?" ಎಂಬ ದಾಗಿ ಇಡುವಿಾನಿಯುಸ್ಸನು ಕೇಳಿದನು. ಅದಕ್ಕೆ ಮೆಂಟರನು ಹೇಳಿದ್ದೇನಂದರೆ:—

"ಪ್ರಭುಗಳ ಸವಿಾಪದಲ್ಲಿ ಸೇವಕರಾಗಿ ಬರತಕ್ಕವರು ಪ್ರಾಯಕವಾಗಿ ಸ್ತುತಿಪಾಠಕರಾಗಿರುವರು. ಇಂದ್ರ, ಚಂದ್ರ, ಮಹೇಂದ್ರರೆಂದು ಪ್ರಭುಗಳನ್ನು ಸ್ತುತಿಸುವರು. ಈ ಸ್ತುತಿಯಿಂದ ಪ್ರಭುಗಳನ್ನು ತಮ್ಮ ಬಲೆಯಲ್ಲಿ ಹಾಕಿಕೊಳ್ಳುವರು. ಇಂಥಾ ಸಂದರ್ಭಗಳಲ್ಲಿ ಪ್ರಭುಗಳು ಬಹಳ ಜಾಗರೂಕರಾಗಿರಬೇಕು. ಹಾಗೆ ಜಾಗರೂಕರಾಗದಿದ್ದರೆ, ಅವರ ಅಧೀನರಾಗಿ ನರಳಬೇಕಾಗುತ್ತದೆ. ಅವರೇ ನಿಜವಾದ ಪ್ರಭುಗಳಾಗುತ್ತಾರೆ. ಪ್ರಭುಗಳು ಅವರ ಗುಲಾಮರಾಗುತ್ತಾರೆ ಬುದ್ಧಿಯು ಯಾರಿಗೆ ಹೆಚ್ಚಾಗಿರುವುದೋ ಅವರು ಕಾರ್ಯತಃ ಪ್ರಭುಗಳಾಗಿರುವರು. ಬುದ್ಧಿಯು ಪರಿಪೂರ್ಣವಾಗಿಲ್ಲದವರು ಬುದ್ಧಿಯುಳ್ಳವರ ಗುಲಾಮರಾಗಿರುವರು. ಈ ತಾರತಮ್ಯಗಳು ಎಲ್ಲೆಲ್ಲಿಯೂ ದೃಷ್ಟಿಪಥಕ್ಕೆ ಬೀಳುವುದು. ಪ್ರತಿ ಕುಟುಂಬವನ್ನು ಪರೀಕ್ಷಿಸಬಹುದು. ಕುಟುಂಬದಲ್ಲಿ ಗಂಡಸು ಬುದ್ಧಿವಂತನಾದರೆ ಅವನು ಪ್ರಭುವಾಗಿರುವನು. ಹೆಂಗಸು ಬುದ್ಧಿವಂತಳಾದರೆ ಅವಳು ರಾಣಿಯಾಗುವಳು. ಪರಿಚಾರಕನು ಬುದ್ಧಿವಂತನಾದರೆ ಕುಟುಂಬದವರೆಲ್ಲಾ ತನ್ನ ಸೇವಕರಾಗಿರುವಂತೆ ಮಾಡಿಕೊಳ್ಳುವನು. ಈ ಪ್ರಪಂಚದ ಧರ್ಮವು ಸರ್ವರಿಗೂ ವೇದ್ಯವಾಗಿಯೇ ಇರುವುದು. ಆದುದರಿಂದ ಪ್ರಭುತ್ವ ಮಾಡತಕ್ಕವರು ನಿಜವಾಗಿ ಪ್ರಭುಗಳಾಗಿರಬೇಕಾದರೆ ಪೂರ್ವಾಪರಜ್ಞಾನವುಳ್ಳವರಾಗಿರಬೇಕು. ಧೈರ್ಯಸ್ಥೈರ್ಯವುಳ್ಳವರಾಗಿರಬೇಕು. ಯಾವ ವಿಷಯದಲ್ಲಿಯೂ ಪರಾಧೀನರಾಗಿರಕೂಡದು. ಅವರು ಜಿತೇಂದ್ರಿಯರಾಗಿರಬೇಕು. ಅರಿಷಡ್ವರ್ಗಗಳಿಗೆ ಅಧೀನರಾಗಬಾರದು. ಎಂಥಾ ವಿಪತ್ತು ಬಂದಾಗ್ಯೂ ಸತ್ಯಕ್ಕೂ, ಧರ್ಮಕ್ಕೂ ಚ್ಯುತಿಬರದಂತೆ ನೋಡಿಕೊಳ್ಳಬೇಕು. ಈ ಬುದ್ಧಿಶಕ್ತಿಯನ್ನೂ, ಮನಸ್ಥೈರ್ಯವನ್ನೂ ಹೊಂದುವುದು ಕಷ್ಟವಲ್ಲ. ಅಭ್ಯಾಸದಿಂದ ಇವುಗಳೆಲ್ಲಾ ಸಾಧ್ಯವಾಗುವುವು. ವ್ಯಾಯಾಮಗಳಿಂದ ನಮ್ಮ ದೇಹಕ್ಕೆ ಹೇಗೆ ಶಕ್ತಿಯು ಬರುವುದೋ ಹಾಗೆ ನಮ್ಮ ಮನೋವ್ಯಾಪಾರಗಳಿಗೂ ಶಿಕ್ಷಣವನ್ನು ಕೊಡುವುದರಿಂದ ಮನಸ್ಸು ಧರ್ಮದಲ್ಲಿ ಆಸಕ್ತವಾಗುವಂತೆಯೂ, ಅಧರ್ಮದಲ್ಲಿ ಪರಾಙ್ಮುಖವಾಗು

ವಂತೆಯೂ ಮಾಡುವುದು ಕಷ್ಟವಲ್ಲ ಈ ವಿಷಯಕ್ಕೆ ನಿನ್ನ ಗಮನವು ಕೊಡಲ್ಪಡಬೇಕು. ಬಂಧುಮಿತ್ರರಾಗಲಿ, ಗುರುಹಿರಿಯರಾಗಲಿ, ಪುತ್ರಮಿತ್ರಕಳತ್ರರಾಗಲಿ ಯಾರು ತಮ್ಮ ಪದವಿಯ ಪ್ರಯೋಜನವನ್ನು ಹೊಂದಿ, ಸಜ್ಜನರಿಗೆ ಕೆಡಕನ್ನು ಮಾಡುವರೋ ಅವರನ್ನು ನಿರ್ದಾಕ್ಷಿಣ್ಯವಾಗಿ ನೀನು ನಿಗ್ರಹಿಸಿದರೆ, ಮೈನಾಸನಂತೆ ನೀನು ಸಜ್ಜನರಿಗೂ, ದೇವತೆಗಳಿಗೂ ಮಾನ್ಯನಾಗುತ್ತೀಯೆ. ನಿನ್ನ ರಾಜ್ಯದಲ್ಲಿ ಸತ್ಯಕ್ಕೂ, ಧರ್ಮಕ್ಕೂ ಅವಕಾಶ ಕೊಡುವುದೇ ಸಾಲದು. ಭೋಗಾಸಕ್ತಿಗೂ, ಸೋಮಾರಿತನಕ್ಕೂ ನೀನು ಅವಕಾಶವನ್ನು ಕೊಡಕೂಡದು. ಭೋಗದಲ್ಲಿ ಆಸಕ್ತರಾದವರು ಸೋಮಾರಿಗಳಾಗುವರು. ಸಂಪದಭಿವೃದ್ಧಿಯ ಕೆಲಸದಲ್ಲಿ ಇವರು ನಿರತರಾಗುವುದಿಲ್ಲ. ಇತರರು ಸಂಪಾದಿಸಿದ್ದನ್ನು ತಿನ್ನುತ್ತಾ, ಅವರಿಗೆ ಎರಡು ಬಗೆಯುತ್ತಾ ಇರುವರು. ನಿನ್ನ ದೇಶದ ಜಮೀನು ನಿನ್ನ ಪ್ರಜೆಗಳಲ್ಲಿ ಪ್ರತಿಯೊಂದು ಕುಟುಂಬಕ್ಕೂ ಹಂಚಲ್ಪಡಬೇಕು. ಪ್ರತಿಯೊಂದು ಕುಟುಂಬಕ್ಕೂ ಸುಖವಾಗಿ ಜೀವನವಾಗುವಷ್ಟು ಜಮೀನು ಅವರಿಗೆ ಕೊಡಲ್ಪಡಬೇಕು. ಕೆಲವು ಕುಟುಂಬಗಳಲ್ಲಿ ಸಂತತಿಯು ಹೆಚ್ಚುವುದು. ಕೆಲವು ಕುಟುಂಬಗಳಲ್ಲಿ ಸಂತತಿಯು ಕಡಮೆಯಾಗುವುದು. ಯಾವ ಕುಟುಂಬದವರು ಜಮೀನನ್ನು ಪಾಳುಕೆಡಹುವರೋ ಅದನ್ನು ಅವರಿಗೆ ಬೇಕಾದಷ್ಟು ಬಿಟ್ಟು, ಪಾಳುಕೆಡವಿರುವ ಜಮೀನನ್ನು ಅಕ್ವೈರ್ ಮಾಡಿ, ಯಾವ ಕುಟುಂಬದವರು ಚೆನ್ನಾಗಿ ವ್ಯವಸಾಯ ಮಾಡುವರೋ ಅವರಿಗೆ ಮಾರಿ, ಮೊಬಲಗನ್ನು ಒಟ್ಟಾಗಿಯಾಗಲಿ, ಕಿಸ್ತುವಾರಾಗಿಯಾಗಲಿ ವಸೂಲ್ಮಾಡಿಕೊಳ್ಳಬೇಕು. ಹೀಗೆ ಮಾಡದಿದ್ದರೆ, ದೇಶದ ಸಂಪತ್ತು ಅಭಿವೃದ್ಧಿಯಾಗುವುದಕ್ಕೆ ಅವಕಾಶವಾಗುವುದಿಲ್ಲ."

"ಶೇಂದಿ, ಷರಾಬು ಮೊದಲಾದ ನಿಷಾದ್ರವ್ಯಗಳು ಅನೇಕ ಕುಟುಂಬಗಳು ನಾಶವಾಗುವುದಕ್ಕೆ ಮುಖ್ಯಕಾರಣಗಳಾಗಿವೆ. ಆದುದರಿಂದಲೇ ಹಿಂದೂ ಮಹರ್ಷಿಗಳಿಂದ ಅವುಗಳು ನಿಷೇಧಿಸಲ್ಪಟ್ಟಿರುವುವು. ಅವುಗಳ ಸೇವನೆಯು ಪಂಚಮಹಾಪಾತಕಗಳಲ್ಲಿ ಒಂದೆಂದು ಗಣನೆ ಮಾಡಲ್ಪಟ್ಟಿರುವುದು. ಹೀಗೆ ಮಾಡಿರುವುದು ನ್ಯಾಯವಾದದ್ದು. ಶೇಂದಿ, ಷರಾಬು, ಸಾರಾಯಿಗಳು ಇವುಗಳನ್ನು ತಯಾರ್ಮಾಡುವುದಕ್ಕೂ ಅವಕಾಶ ಕೊಡಬಾರದು ಇದರ ಸೇವನೆಯಿಂದ ಅನೇಕ ರೋಗಗಳು ಉತ್ಪತ್ತಿಯಾಗುವುವು. ಜಗಳಗಳು ಹುಟ್ಟುವುವು. ರಾಜದ್ರೋಹಗಳಿಗೆ ಅವಕಾಶವಾಗುವುದು. ಸೋಮಾರಿತನವು ಉಂಟಾಗುವುದು. ಕೆಲಸ

ಮಾಡುವುದಕ್ಕೆ ಉತ್ಸಾಹ ಉಂಟಾಗುವುದಿಲ್ಲ. ಕುಟುಂಬಗಳು ನಾಶವಾಗುವುವು. ಔಷಧಗಳಿಗೋಸ್ಕರ ಉಪಯೋಗಿಸುವುದಕ್ಕೆ ವೈದ್ಯರುಗಳಿಗೆ ಅಲ್ಪಸ್ವಲ್ಪ ಅವಕಾಶ ಕೊಡಬಹುದೇ ಹೊರತು, ಪಾನಮಾಡತಕ್ಕವರಿಗೋಸ್ಕರ ಉತಾರು ಮಾಡುವುದಕ್ಕೆ ಅಥವಾ ಭಟ್ಟಿ ಇಳಿಸುವುದಕ್ಕೆ ಸರ್ಕಾರದವರು ಅವಕಾಶ ಕೊಡುವುದು ದೊಡ್ಡ ತಪ್ಪು. ಇದು ಭಾರಿ ಅಪರಾಧ. ಎಕ್ಸೈಜು ಹುಟ್ಟುವಳಿ ಮೇಲಿನ ಆಶೆಯಿಂದ ಸರ್ಕಾರದವರು ಜನಗಳನ್ನು ಉನ್ಮತ್ತರನ್ನಾಗಿ ಮಾಡುವುದು ಬಲವಾದ ಅಪರಾಧ. ಪ್ರಭುಗಳು ಇದಕ್ಕಾಗಿ ಬಲವಾದ ಶಿಕ್ಷೆಗೆ ಗುರಿಯಾಗಬೇಕು. ಆದರೆ ಅವರನ್ನು ಶಿಕ್ಷಿಸತಕ್ಕ ಅಧಿಕಾರವು ವಿವೇಕಶಾಲಿಗಳಾದ ಪ್ರಜೆಗಳ ಹಸ್ತಗತವಾಗಿರುವುದು. ಅವರು ಈ ಅಧಿಕಾರವನ್ನು ವಹಿಸಿ, ಪ್ರಭುಗಳನ್ನು ಧರ್ಮಿಷ್ಠರನ್ನಾಗಿ ಮಾಡುವುದು ಈಗ ಸಧ್ಯಕ್ಕೆ ಅಸಂಭವವಾಗಿದೆ. ಈ ಅಪರಾಧಗಳಿಗೆ ಮನುಷ್ಯರು ಮಾಡತಕ್ಕ ಶಿಕ್ಷೆಯು ತಪ್ಪಿದಾಗ್ಯೂ, ದೇವರು ಮಾಡತಕ್ಕ ಶಿಕ್ಷೆಯು ಎಂದಿಗೂ ತಪ್ಪುವುದಿಲ್ಲ. ಈ ವಿಷಯವನ್ನು ಪರ್ಯಾಲೋಚಿಸು. ನಿನ್ನ ರಾಜ್ಯದಲ್ಲಿ ನಿಸಾದ್ರವ್ಯ ಸೇವನೆಯನ್ನು ನಿರ್ಭಯವಾಗಿ ನಿಲ್ಲಿಸುವುದು ನಿನ್ನ ಕರ್ತವ್ಯ. ಈ ರೀತಿಯಲ್ಲಿ ನೀನು ಮಾಡುತ್ತೀ ಎಂದು ನಾನು ನಂಬಿದೇನೆ."

"ವಿದ್ಯಾಭ್ಯಾಸದ ವಿಷಯದಲ್ಲಿ ನಿನ್ನ ಪಿತಾಮಹನಾದ ಮೈನಾಸನ ಧರ್ಮಗಳನ್ನು ತಿಳಿದುಕೊಳ್ಳುವುದು ಆವಶ್ಯಕ. ನಿನ್ನ ಸಂಸ್ಥಾನದ ಪಾಠಶಾಲೆಗಳಲ್ಲಿ ಪಾಪಭೀತಿಯು ಉಂಟಾಗುವಂತೆ ಮಾಡಲ್ಪಡಬೇಕು. ದೇಶಾಭಿಮಾನವು ಹುಟ್ಟಿಸಲ್ಪಡಬೇಕು. ಧರ್ಮಗಳನ್ನು ಉಲ್ಲಂಘಿಸದೇ ಇರುವುದನ್ನು ಕಲಿಸಬೇಕು. ಪ್ರಾಮಾಣಿಕತೆಯು ಪ್ರಾಣಕ್ಕಿಂತಲೂ ಹೆಚ್ಚೆಂದು ಪ್ರತ್ಯಯವು ಹುಟ್ಟಿಸಲ್ಪಡಬೇಕು. ಪ್ರತಿಯೊಂದು ಕುಟುಂಬದಲ್ಲಿಯೂ ಪ್ರತಿಯೊಬ್ಬರೂ ಒಳ್ಳೆಯ ಶೀಲಸ್ವಭಾವಗಳುಳ್ಳವರಾಗಿರುವಂತೆ ಮಾಡುವುದಕ್ಕೋಸ್ಕರ ಮ್ಯಾಜಿಸ್ಟ್ರೇಟುಗಳು ನಿಯಮಿಸಲ್ಪಡಬೇಕು. ಅವರು ತಮ್ಮ ಕೆಲಸಗಳನ್ನು ಮಾಡುತ್ತಾರೆಯೇ ಇಲ್ಲವೇ ಎಂದು ನೀನು ಅಹೋರಾತ್ರಿಯಲ್ಲಿಯೂ ನೋಡಿಕೊಳ್ಳಬೇಕು. ಈ ವಿಷಯದಲ್ಲಿ ನೀನು ಉದಾಸೀನನಾದರೆ, ಅನೇಕ ದಂಗೆಗಳಾಗುವುವು. ಅನೇಕ ಅಪರಾಧಗಳು ಮಾಡಲ್ಪಡುವುವು. ಉಪಕ್ರಮದಲ್ಲಿ ಅವುಗಳನ್ನು ನಿವಾರಿಸುವುದು ಸುಲಭ. ಬಲವಾದ ಮೇಲೆ ಅವುಗಳನ್ನು ಅಡಗಿಸುವುದು ಕಷ್ಟ. ಮೊಳಕೆಯನ್ನು ಸುಲಭವಾಗಿ ಕಿತ್ತುಹಾಕಬಹುದು. ವೃಕ್ಷವನ್ನು ಕೀಳುವುದು ಕಷ್ಟ. ಬಾಲ್ಯದಲ್ಲಿ ಪ್ರ

ಗಳು ಪಾಪಭೀತರಾಗಿ ಪರಿಣಮಿಸುವಂತೆ ನೀನು ಮಾಡದಿದ್ದರೆ, ವಯಸ್ಸಾದ ಮೇಲೆ ಅವರ ಅಧರ್ಮಗಳು ಬಲವಾಗುವುವು. ಅವುಗಳನ್ನು ಮೂಲೋತ್ಪಾಟನ ಮಾಡುವುದು ಕಷ್ಟವಾಗುವುದು. ಬಾಲ್ಯದಿಂದ ಅಶಿಕ್ಷಿತರಾಗಿ ಬೆಳೆದವರು ದೊಡ್ಡ ವರಾದ ಮೇಲೆ ಸುಶಿಕ್ಷಿತರಾಗುವುದು ಬಹಳ ಕಷ್ಟ. ಸತ್ಪ್ರಜೆಗಳನ್ನು ಹೊಂದಲ ಪೇಕ್ಷೆಯುಳ್ಳವರೆಲ್ಲರೂ ಬಾಲ್ಯದಲ್ಲಿಯೇ ಜನಗಳು ದುರ್ಮಾರ್ಗಕ್ಕೆ ಬೀಳದಂತೆ ಮಾಡುವುದು ಆವಶ್ಯಕ."

ಪ್ರಭುಗಳಿಗೆ ಸಾಂಕುಶಪ್ರವರ್ತನವು ಕೇವಲ ಭೂಷಣವಾದದ್ದು. ಇಹ ಪರಸಾಧನೆಗಳಿಗೆ ಇದೇ ಮುಖ್ಯವಾದ ಕಾರಣ. ನಾವು ಪ್ರಾಯಕವಾಗಿ ಅಜಿ ತೇಂದ್ರಿಯರು. ಅರಿಷಡ್ವರ್ಗಗಳಿಗೆ ನಾವು ಸಾಮಾನ್ಯವಾಗಿ ಅಧೀನರಾಗುತ್ತೇವೆ. ಬಾಲ್ಯದಿಂದ ಜಿತೇಂದ್ರಿಯರಾಗುವುದಕ್ಕೂ, ಅರಿಷಡ್ವರ್ಗಗಳಿಗೆ ಅಧೀನರಾಗದೇ ಇರುವುದಕ್ಕೂ ಅಭ್ಯಾಸ ಮಾಡಬೇಕು. ಸಾಮಾನ್ಯ ಜನಗಳು ಜಿತೇಂದ್ರಿಯರಾಗಿ, ಕಾಮಕ್ರೋಧಾದಿಗಳನ್ನು ಗೆದ್ದರೆ, ಇಹಪರ ಸೌಖ್ಯಗಳನ್ನು ಹೊಂದುವರು. ಪ್ರಭುಗಳು ಜಿತೇಂದ್ರಿಯರಾಗಿ ಅರಿಷಡ್ವರ್ಗಗಳನ್ನು ನಿಗ್ರಹಿಸಿದರೆ, ದೇವರಿಗೆ ಸಮಾನರಾಗುವರು. ಇವರೇ ಅವತಾರಪುರುಷರೆನ್ನಿಸಿಕೊಳ್ಳುವರು. ಇವ ರೆಂದಿಗೂ ನಿರಂಕುಶಪ್ರವರ್ತಕರಾಗುವುದಿಲ್ಲ. ಅಷ್ಟಮದಗಳಲ್ಲಿ ಇವರು ಯಾವು ದಕ್ಕೂ ಅಧೀನರಾಗುವುದಿಲ್ಲ. ಯಮಧರ್ಮರಾಯನನ್ನು ಹೇಗೋ ಹಾಗೆ ಸರ್ವರೂ ಇವರನ್ನು ಭಯದಿಂದಲೂ; ಗೌರವದಿಂದಲೂ ಕಾಣುವರು. ಪ್ರತೀಕಾರಬುದ್ಧಿಯು ಳ್ಳವರು ಜ್ವಾಲೆಗೆ ಬಿದ್ದ ಪತಂಗದ ಹುಳುಗಳು ಹೇಗೆ ನಾಶವಾಗುತ್ತವೋ ಹಾಗೆ ನಾಶವಾಗುವರು. ಅಧಿಕಾರವು ದುಷ್ಟನಿಗ್ರಹ, ಶಿಷ್ಟಪರಿಪಾಲನೆಗೋಸ್ಕರ ಇವರ ಹಸ್ತಗತವಾಗಿರುವುದು. ಧರ್ಮಿಷ್ಠರಾದ ಪ್ರಭುಗಳಿಗ ಪ್ರತಿಪಕ್ಷವಾದವರು ಇರುವು ದಿಲ್ಲ. ಇವರು ಅಜಾತಶತ್ರುಗಳಾಗುವರು. ಸಕಲ ಸತ್ಪುರುಷರೂ ಇವ ರಿಗೆ ಬಾಡಿಗಾರ್ಡುಗಳಾಗುವರು. ಸತ್ಯದಿಂದಲೂ, ಧರ್ಮದಿಂದಲೂ ಪ್ರಭುಗ ಳಿಗೆ ಪಿತೃವಿಶೇಷವಾದ ಪ್ರೀತಿಯುಂಟಾಗುವುದು. ಹೀಗೆ ಪ್ರಜೆಗಳ ಅಕೃತ್ರಿ ಮವಾದ ಪ್ರೀತಿಗೆ ಪಾತ್ರನಾಗಿ, ಪ್ರಜೆಗಳನ್ನು ಪರಿಪಾಲಿಸುವ ಶಕ್ತಿಯನ್ನು ಸಂಪಾದಿಸಿಕೋ."

## ಹನ್ನೆರಡನೆಯ ಅಧ್ಯಾಯ.



"ಪ್ರಭುಗಳಿಗೆ ಕೀರ್ತಿಯು ಬರಬೇಕಾದರೆ, ಸಾರಾಸಾರ ವಿಚಾರಪರರಾಗಿಯೂ, ಧರ್ಮಮಾರ್ಗೈಕಪರಾಯಣರಾಗಿಯೂ, ರಾಜಧರ್ಮವಿಶಾರದರಾಗಿಯೂ ಇರತಕ್ಕ ಮಂತ್ರಿಗಳ ಸಹಾಯವು ಬೇಕು. ಇಡುಮಿಾನಿಯಸ್ಸನ ಪುಣ್ಯಪರಿಪಾಕದಿಂದ ಇವನಿಗೆ ರಾಜಧರ್ಮವಿಶಾರದನಾದ ಮೆಂಟರನ ಸಹಾಯವು ದೊರೆಯಿತು. ಪ್ರಭುಗಳ ಕರ್ತವ್ಯಗಳೆಲ್ಲಾ ಇಡುಮಿಾನಿಯಸ್ಸನಿಗೆ ವಿಸ್ತಾರವಾಗಿ ತಿಳಿಸಲ್ಪಟ್ಟಿತು. ಸದರಿ ಧರ್ಮಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳುವುದೂ ಕೂಡ ಬೋಧಿಸಲ್ಪಟ್ಟಿತು. ರಾಜಧರ್ಮಗಳ ಅನುಷ್ಠಾನದಲ್ಲಿ ಇಡುಮಿಾನಿಯಸ್ಸನು ಆಚಾರ್ಯನಾದನು. ಅಹೋರಾತ್ರಿಯಲ್ಲಿಯೂ ಪ್ರಜೆಗಳು ಸಂಪದಭಿವೃದ್ಧಿಯ ಕೆಲಸಗಳನ್ನು ಹೇಗೆ ಮಾಡಬೇಕೋ ಅದನ್ನು ಉಪದೇಶಿಸುತ್ತಾ, ತನ್ನ ಉಪದೇಶವನ್ನು ಆಚರಣೆಗೆ ತಂದವರಿಗೆ ಉಂಟಾದ ಪ್ರತಿಫಲಗಳನ್ನು ಅಜಮಾಯಿಷಿ ಮಾಡುತ್ತಾ, ವಿಶೇಷ ಮೆಹನತ್ತು ಮಾಡಿರತಕ್ಕವರಿಗೆ ಬಹುಮಾನಗಳನ್ನು ಕೊಡುತ್ತಾ ಬಂದನು. ಕೆಲವು ದಿವಸಗಳೊಳಗಾಗಿ ಈ ದ್ವೀಪದಲ್ಲಿ ಜಮಿಾನುಗಳು ಸಂಪೂರ್ಣವಾಗಿ ರೇಖೆ ಮಾಡಲ್ಪಟ್ಟವು. ಬೇಲಿಗಳಲ್ಲಿ ವಿನಾ ಮುಳ್ಳುಗಿಡಗಳು ಎಲ್ಲಿಯೂ ದೊರೆಯುತ್ತಿರಲಿಲ್ಲ. ಜಮಿಾನುಗಳೆಲ್ಲಾ ಚನ್ನಾಗಿ ಸಾಗುವಳಿಯಾದವು. ದ್ವೀಪನಿವಾಸಿಗಳ ಉಪಯೋಗಕ್ಕೆ ಎಷ್ಟು ದವಸವು ಬೇಕೋ ಅದಕ್ಕಿಂತಲೂ ನೂರಾರಷ್ಟು ಹೆಚ್ಚಾಗಿ ದವಸವು ಬೆಳೆಯಲ್ಪಟ್ಟಿತು. ಆ ದ್ವೀಪದಲ್ಲಿ ಅಪೂರ್ವವಾಗಿದ್ದ ಅನೇಕ ಫಲವೃಕ್ಷಗಳು ಫಲಗಳ ಭಾರದಿಂದ ಭೂಮಿ ಕಡೆಗೆ ಬಗ್ಗಿದ್ದವು. ಭೂಮಾತೆಯು ನೇಗಿಲನ್ನು ಉಪಯೋಗಿಸತಕ್ಕ ತನ್ನ ಮಕ್ಕಳಿಗೆ ಧಾನ್ಯರೂಪವಾದ ಸಂಪತ್ತನ್ನು ಬೇಕಾದ ಹಾಗೆ ಕೊಡುವಳು. ರೈತರ ಮೆಹನತ್ತಿಗೆ ಪ್ರತಿಫಲವು ಉದಾರವಾಗಿ ಬರುವುದಕ್ಕೆ ಉಪಕ್ರಮವಾಯಿತು. ಪ್ರತಿ ಒಬ್ಬ ಸ್ತ್ರೀ ಪುರುಷರ ಕಣ್ಣುಗಳಲ್ಲಿಯೂ ಸಂತೋಷವು ಪ್ರಜ್ವಲಿಸುತ್ತಿತ್ತು. ಬೆಟ್ಟಗಳ ಮೇಲೆಯೂ, ಕಣಿವೆಗಳಲ್ಲಿಯೂ ಕೊಬ್ಬಿದ ದನಕರುಗಳೂ, ಕುರಿಗಳೂ, ಆಡುಗಳೂ ಇಡುಮಿಾನಿಯಸ್ಸನ ರಾಜಧರ್ಮದ ಮಹಿಮೆಯನ್ನು ಪ್ರಕಾಶಪಡಿಸುತ್ತಿದ್ದವು. ಈ ಪ್ರಾಣಿಗಳ ಸಗಣಿ, ಹಿಕ್ಕೆ, ಮೊದಲಾದವುಗಳು

ಶೇಖರಿಸಲ್ಪಟ್ಟು, ಗೊಬ್ಬರಕ್ಕಾಗಿ ವಿನಿಯೋಗಿಸಲ್ಪಡುತ್ತಿದ್ದವು. ಪ್ರಜೆಗಳ ಇಷ್ಟಾರ್ಥರೂಪವಾದ ದವಸಗಳನ್ನೂ, ಫಲಗಳನ್ನೂ ಕೊಡುವಂತೆ ಮಾಡುವುದರಲ್ಲಿ ಗೋಪಾಲಕರೂ ಕೂಡ ವಿಶೇಷ ಸಹಾಯಭೂತರಾದರು. ಶ್ರೀ ಕೃಷ್ಣನೂ ಕೂಡ ಗೋಪಾಲಕ ಶಿರೋಮಣಿಯಾಗಿ ಹೇಗೆ ಇದ್ದನೋ ಹಾಗೆ ಇಡುಮೀನಿಯಸ್ಸನ ಪ್ರಜೆಗಳಲ್ಲಿ ಅನೇಕರು ಕರ್ಷಕ ವೃತ್ತಿಯಲ್ಲಿ ಶಿಖಾಮಣಿಗಳಾಗಿದ್ದರು. ಈ ದ್ವೀಪಕ್ಕೆ ಮೆಂಟರು ಬರುವುದಕ್ಕೆ ಮುಂಚೆ ಕುಟುಂಬವು ಹೆಚ್ಚಿದರೆ, ಅವರಿಗೆ ಅನ್ನ ವಸ್ತ್ರಗಳನ್ನು ಕೊಡುವುದು ಹೇಗೆ ಎಂಬ ಭಯದಿಂದ ವಿವಾಹವನ್ನು ಮಾಡಿಕೊಳ್ಳುವುದೇ ಕಡಮೆಯಾಗಿತ್ತು. ಮೆಂಟರು ಬಂದ ಮೇಲೆ ವಿವಾಹ ಮಾಡಿಕೊಂಡು, ಕುಟುಂಬಿಗಳಾಗಿರತಕ್ಕವರಿಗೆ ಪ್ರೋತ್ಸಾಹವು ಹೆಚ್ಚಾಯಿತು. ಹೆಂಡತಿ, ಮಕ್ಕಳು, ಬಂಧುಗಳು, ಮಿತ್ರರು ಇವರು ಯಾರಿಗೆ ಇರುವರೋ ಅಂಥಾವರು ನಂಬಿಕೆಗೆ ಪಾತ್ರರೆಂಬದಾಗಿಯೂ, ಅವರನ್ನು ಸರ್ಕಾರದವರು ಸುಲಭವಾಗಿ ಹತೋಟಿಯಲ್ಲಿಡಬಹುದೆಂಬದಾಗಿಯೂ, ವಿವಾಹವಿಲ್ಲದೆ ಸ್ವೇಚ್ಛಾಪ್ರವರ್ತಕರಾಗಿ ಇರತಕ್ಕವರನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದು ಕಷ್ಟವೆಂಬದಾಗಿಯೂ, ಎಲ್ಲಾ ಸ್ತ್ರೀಪುರುಷರೂ ಶಾಸ್ತ್ರವಿಧಿಗಳಿಗನುಸಾರವಾಗಿ ವಿವಾಹ ಮಾಡಿಕೊಂಡು, ಸಂಸಾರಿಗಳಾಗಿರಬೇಕೆಂಬದಾಗಿಯೂ, ಹಾಗೆ ಇಲ್ಲದೆ, ಅಗಾಡಿ, ಪಿಚಾಡಿ, ಲಗಾಮು ಇಲ್ಲದ ಕೊಬ್ಬಿದ ಕುದುರೆಗಳಂತೆ ಇರತಕ್ಕವರು ವಿಧೇಯರಾಗಿಯೂ, ಧರ್ಮಿಷ್ಠರಾಗಿಯೂ ಇರುವುದು ಅಪೂರ್ವವೆಂಬದಾಗಿಯೂ ಮೆಂಟರನು ಉಪದೇಶ ಮಾಡಿದನು. ಈ ಉಪದೇಶಕ್ಕನುಸಾರವಾಗಿ ಇಡುಮೀನಿಯುಸ್ಸನು ಸಾಕ್ಷಾತ್ತಾಗಿಯಾಗಲಿ, ತನ್ನ ಪ್ರತಿನಿಧಿಗಳ ಅಧಿಕಾರಿಗಳ ಮೂಲಕವಾಗಿಯಾಗಲಿ ವಿವಾಹಗಳನ್ನು ಪರಿಶೀಲಿಸುತ್ತಾ, ಅನುಕೂಲವಾದ ದಾಂಪತ್ಯವನ್ನು ಕಲ್ಪಿಸುತ್ತಾ, ಸ್ತ್ರೀಪುರುಷರೆಲ್ಲರೂ ತನಗೆ ಸಾಕ್ಷಾತ್ ಮಕ್ಕಳಾಗಿದ್ದರೆ ಹೇಗೋ ಹಾಗೆ ಅವರ ಯೋಗಕ್ಷೇಮಚಿಂತೆಯನ್ನು ಮಾಡುತ್ತಾ ಬಂದನು. ಇದರಿಂದ ಬಹು ಕುಟುಂಬಗಳು ಭೂಲೋಕದ ಸ್ವರ್ಗದಂತೆ ಪರಿಣಮಿಸಿದವು. ಮೆಂಟರನು ಆ ದ್ವೀಪಕ್ಕೆ ಪ್ರವೇಶಿಸುವುದಕ್ಕೆ ಮುಂಚೆ ಇಡುಮೀನಿಯುಸ್ಸನಲ್ಲಿ ಮಹಾಜನಗಳ ರಾಜಭಕ್ತಿವಿಶ್ವಾಸಗಳು ಸಾಮಾನ್ಯವಾಗಿದ್ದವು ಮೆಂಟರು ಬಂದ ಮೇಲೆ ಕೆಲವು ದಿವಸಗಳೊಳಗಾಗಿ ಇಡುಮೀನಿಯುಸ್ಸನೇ ಮೈನಾಸನಾಗಿದ್ದರೆ ಹೇಗೋ ಹಾಗೆ ರಾಜಭಕ್ತಿವಿಶ್ವಾಸಗಳು ವೃದ್ಧಿಗೆ

ಬಂದವು. ಇಡುಮಾನಿಯಸ್ಸನೇ ಮನೆದೇವರಾಗಿದ್ದರೆ ಹೇಗೋ ಹಾಗೆ ಮಹಾ ಜನಗಳು ಅವನನ್ನು ಪೂಜಿಸುವುದಕ್ಕೆ ಉಪಕ್ರಮಿಸಿದರು. ಪ್ರತಿನಿತ್ಯವೂ ದೇವತಾರಾಧನೆಯ ಜತೆಯಲ್ಲಿ ರಾಜಾಶೀರ್ವಾದವು ನಡೆಯುವುದಕ್ಕೆ ಉಪಕ್ರಮವಾಯಿತು. ಈ ಆಶೀರ್ವಾದ ಕಾಲದಲ್ಲಿ "ಜಗದೀಶ್ವರನೇ, ನಮ್ಮ ಪುಣ್ಯಪರಿಪಾಕದಿಂದ ಈ ಮಹಾತ್ಮನಾದ ಇಡುಮಿಾನಿಯಸ್ಸನು ನಮಗೆ ಪ್ರಭುವಾಗಿರುವಂತೆ ಅನುಗ್ರಹಿಸಿರುವಿ. ಇವನು ನಿನಗೆ ಪ್ರತಿನಿಧಿಯಾಗಿ ನಮ್ಮನ್ನು ಪುತ್ರನಿರ್ವಿಶೇಷದಿಂದ ರಕ್ಷಿಸುತ್ತಲಿರುವನು. ಲೋಕಹಿತಾರ್ಥವಾಗಿ ಇವನು ಅವತರಿಸಿರುವಂತೆ ತೋರುತ್ತದೆ. ನಮ್ಮನ್ನು ರಕ್ಷಿಸುವುದರಲ್ಲಿ ಇವನು ಮಾಡತಕ್ಕ ಮೆಹನತ್ತಿಗೆ ಇವನಿಗೆ ಪ್ರತಿಫಲವನ್ನು ಕೊಡು. ಈ ದ್ವೀಪನಿವಾಸಿಗಳನ್ನೆಲ್ಲಾ ಇವನು ಪುತ್ರನಿರ್ವಿಶೇಷವಾಗಿ ಕಾಪಾಡುತ್ತಲಿದಾನೆ. ಇವನಲ್ಲಿ ನಿನ್ನ ಅನುಗ್ರಹವು ಪರಿಪೂರ್ಣವಾಗಿರಲಿ." ಈ ರೀತಿಯಲ್ಲಿ ಸಕಲ ಕುಟುಂಬಗಳಲ್ಲಿಯೂ ಆಬಾಲವೃದ್ಧರೂ ದೇವತಾಪ್ರಾರ್ಥನೆಯನ್ನು ಮಾಡುತ್ತಾ ಬಂದರು. ಇಡುಮಿಾನಿಯಸ್ ಎಂಬ ಹೆಸರು ಈ ದ್ವೀಪದಲ್ಲಿ ಅತ್ಯಂತ ಪವಿತ್ರವಾದ ಹೆಸರಾಯಿತು. ಇವನ ಆಕಾರವು ಸರ್ವರ ಮನಸ್ಸಿನಲ್ಲಿಯೂ ನೆಲೆಯಾಗಿ ನಿಂತಿತು. ಇವನ ದರ್ಶನವು ದೇವರ ದರ್ಶನದಂತೆ ಭಾವಿಸ್ಪಡುತ್ತಾ ಬಂದಿತು. ಇವನಿಗೆ ಮರಣವು ಬಂದ ಪಕ್ಷದಲ್ಲಿ, ಈ ದ್ವೀಪನಿವಾಸಿಗಳ ಗತಿಯೇನು ಎಂದು ಅನಿರ್ವಚನೀಯವಾದ ಭಯವು ಉಂಟಾಯಿತು. ಇವನಿಗೆ ದೀರ್ಘಾಯುರಾರೋಗ್ಯಗಳನ್ನು ಕೊಟ್ಟು ಸಲಹು ಎಂದು ದೇವತಾಪ್ರಾರ್ಥನೆಗಳು ನಿರಂತರವಾಗಿ ನಡೆಯುತ್ತಾ ಬಂದವು. ಇದನ್ನು ನೋಡಿ, ಇಡುಮಿಾನಿಯಸ್ಸನು ಅನಿರ್ವಚನೀಯವಾದ ಸಂತೋಷಸಾಗರದಲ್ಲಿ ಶ್ರೀ ಮಹಾವಿಷ್ಣುವು ಕ್ಷೀರಸಮುದ್ರದಲ್ಲಿ ಹೇಗೆ ಲೀಲಾವಿನೋದವನ್ನು ಅನುಭವಿಸಿದನೋ ಹಾಗೆ ಸಂತೋಷಪರವಶನಾಗಿದ್ದನು. ಈ ಸಂತೋಷದಲ್ಲಿ ಮೆಂಟರನನ್ನು ಕುರಿತು ಇಡುಮಿಾನಿಯಸ್ಸನು ಹೇಳಿದ್ದೇನಂದರೆ: —

"ಜಗದೀಶ್ವರನಿಗೆ ಕೇವಲ ಪಾಪಿಷ್ಠನಾದ ನನ್ನಲ್ಲಿ ಇಷ್ಟು ಪ್ರೀತಿಯು ಹುಟ್ಟುವುದಕ್ಕೆ ಕಾರಣವೇನು ? ಈಶ್ವರಾವತಾರಪುರುಷನಾದ ನೀನು ಈ ದ್ವೀಪಕ್ಕೆ ಬಂದು, ಪಾಪಿಷ್ಠನಾದ ನನ್ನನ್ನು ಇಷ್ಟು ಪುಣ್ಯವಂತನನ್ನಾಗಿ ಮಾಡುವುದಕ್ಕೆ ಕಾರಣವೇನು ? ನಿನ್ನಂಥಾ ಧರ್ಮಿಷ್ಠರ ಉಪದೇಶವನ್ನು ಹೊಂದುವುದಕ್ಕೆ ನಾನು ಹೇಗೆ ಪಾತ್ರನಾದೆ? ಲೋಕದಲ್ಲಿ ನನ್ನಂತೆಯೇ ರಾಕ್ಷಸಾಂಶಭೂತರಾದ ಪ್ರಭು

ಗಳು ಅನೇಕರಿರುವರು. ಅವರಿಗೆ ನಿನ್ನ ಸಹವಾಸವೂ, ಹಿತೋಪದೇಶವೂ ಏತಕ್ಕೆ ದೊರೆಯಲಿಲ್ಲ ? ಜಗದೀಶ್ವರನ ಅನುಗ್ರಹಕ್ಕೆ ನಾನು ಹೇಗೆ ಪಾತ್ರನಾದೆ ? ನೀನು ಬರುವುದಕ್ಕೆ ಮುಂಚೆ ನನ್ನ ಮನೋಭಾವವು ಹೇಗಿತ್ತೋ ಅದನ್ನು ಸ್ಮರಿಸಿಕೊಂಡರೆ ನನಗೇ ಆಶ್ಚರ್ಯವಾಗುತ್ತದೆ. ಸಕಲ ಪ್ರಜೆಗಳಲ್ಲಿಯೂ ಇಂಥಾ ಪುತ್ರನಿರ್ವಿಶೇಷವಾದ ಪ್ರೀತಿಯು ಆಗ ನನಗೆ ಏತಕ್ಕೆ ಇರಲಿಲ್ಲ ? ನೀನು ಬಂದು ಹಿತೋಪದೇಶ ಮಾಡಿದ ಮೇಲೆ ಇದು ಹೇಗೆ ಬಂದಿತು ? ನೀನು ಬರುವುದಕ್ಕೆ ಮುಂಚೆ ಅಜಿತೇಂದ್ರಿಯನಾಗಿಯೂ, ಕಾಮಕ್ರೋಧಾದಿಗಳಿಗೆ ಅಧೀನನಾಗಿಯೂ ನಾನು ಇದ್ದದ್ದಕ್ಕೆ ಕಾರಣವೇನು ? ನಿನ್ನ ಹಿತೋಪದೇಶವಾದ ಕೂಡಲೆ, ನಾನು ಸಂಪೂರ್ಣವಾಗಿ ರಜೋಗುಣವನ್ನು ಬಿಟ್ಟು, ಸತ್ವಗುಣದಲ್ಲಿ ಆಸಕ್ತನಾಗುವುದಕ್ಕೆ ಕಾರಣವೇನು ? ಅನುಷ್ಠಾನ ಸಮಯದಲ್ಲಿ ಮುನಿಗಳೂ ಕೂಡ ಅಪಂಡಿತರಾಗುವರಲ್ಲಾ ! ನಾನು ಸಾಮಾನ್ಯ ಮನುಷ್ಯನಾದಾಗ್ಯೂ, ರಜೋಗುಣದಲ್ಲಿಯೂ, ತಮೋಗುಣದಲ್ಲಿಯೂ ಪರಾಙ್ಮುಖತೆಯು ನನಗೆ ಹೇಗೆ ಉಂಟಾಯಿತು ? ನೀನು ಉಪದೇಶ ಮಾಡತಕ್ಕ ಕಾಲದಲ್ಲಿ ನಿನ್ನನ್ನು ಪ್ರತಿಭಟಿಸುತ್ತಿದ್ದೆನಲ್ಲಾ ! ಇಂಥಾ ದುರಾತ್ಮನಾದ ನನಗೆ ಧರ್ಮದಲ್ಲಿ ಆಸಕ್ತಿಯೂ, ಪ್ರಜೆಗಳ ರಕ್ಷಣೆಯಲ್ಲಿ ಪ್ರೀತಿಯೂ, ಅವರ ಕ್ಷೇಮವೇ ನಮ್ಮ ಕ್ಷೇಮವೆಂಬ ಅಭಿನಿವೇಶವೂ ಹೇಗೆ ಉಂಟಾಯಿತು ? ಮೈನಾಸನು ಕೇವಲ ಸತ್ವಗುಣಪ್ರಧಾನನೆಂದು ಚರಿತ್ರೆಗಳು ಹೇಳುತ್ತವೆ. ನಾನು ಅವನ ಸಂತತಿಯವನೆಂದು ಈ ದ್ವೀಪದ ಚರಿತ್ರೆಯಿಂದ ತಿಳಿಯಬರುತ್ತದೆ. ಅಂಥಾ ಮಹಾತ್ಮನ ವಂಶಸ್ಥನಾದ ನಾನು ನೀನು ಈ ದ್ವೀಪಕ್ಕೆ ಬರುವುದಕ್ಕೆ ಮುಂಚೆ ಕೇವಲ ಪಾಮರನಾಗಿಯೂ, ಸ್ತುತಿಪಾಠಕರ ಹಸ್ತಗತವಾದ ಬೊಂಬೆಯಂತೆಯೂ ಇದ್ದದ್ದಕ್ಕೆ ಕಾರಣವೇನು ? ನಿನ್ನ ಸಹವಾಸವೂ, ಹಿತೋಪದೇಶವೂ ಲಭ್ಯವಾದ ಮೇಲೆ ಪ್ರಜಾರಂಜನೆಯಲ್ಲಿ ಇಂಥಾ ಅಭಿನಿವೇಶವು ಹೇಗೆ ಹುಟ್ಟಿತು ? ಅದೆಲ್ಲಾ ಹಾಗಿರಲಿ. ಅಪರಿಚಿತಸ್ಥನಾದ ನನ್ನಲ್ಲಿ ನಿನಗೆ ಈ ಪ್ರೀತಿಯು ಹೇಗೆ ಉಂಟಾಯಿತು ? ಇದೆಲ್ಲಾ ನನಗೆ ತುಂಬಾ ಆಶ್ಚರ್ಯವನ್ನುಂಟುಮಾಡುತ್ತಲಿದೆ. ಇದು ಜಗದೀಶ್ವರನ ಲೀಲೆಯೆಂದು ತೋರುತ್ತದೆ. ಖಂಡಿತವಾಗಿಯೂ ಏನೋ ಒಂದು ವಿಧವಾದ ಪೂಜಾಫಲದ ರಾಶಿಯು ನನಗೆ ಇರಬೇಕು. ಹಾಗಿಲ್ಲದಿದ್ದರೆ ಜಗದೀಶ್ವರನು ನಿನ್ನನ್ನು ಈ ದ್ವೀಪಕ್ಕೆ ಕಳುಹಿಸುತ್ತಿರಲಿಲ್ಲ. ನಾನು ಈ ಪಾಪಜಾಲದಿಂದ ವಿಮುಕ್ತನಾಗುತ್ತಿರಲಿಲ್ಲ. ನೀನೇ ನನ್ನ ಭಾಗದ ದೇವರೆಂದು ನಾನು ಭಾವಿಸುತ್ತೇನೆ.

ನೀನು ನನ್ನ ಭಾಗದ ದೇವರು ಮಾತ್ರವಾಗಿರುವುದಿಲ್ಲ. ನನ್ನ ಪ್ರಜೆಗಳ ಮನೆ ದೇವರಾಗಿಯೂ ಇರುತ್ತೀಯೆ. ನಿನ್ನ ಹಿತೋಪದೇಶದಂತೆ ನಾನು ಬದುಕಿರುವ ವರೆಗೂ ನಡೆಯುವ ಶಕ್ತಿಯನ್ನು ಕೊಟ್ಟ ದೇವರು ಸಲಹಲೆಂದು ನಾನು ಭಕ್ತಿ ಪುರಸ್ಸರವಾಗಿ ಪ್ರಾರ್ಥಿಸುತ್ತೇನೆ."

ಈ ರೀತಿಯಲ್ಲಿ ಇಡುಮಿನಿಯಸ್ಸನು ಹೇಳಲು, ಅದಕ್ಕೆ ಪ್ರತ್ಯುತ್ತರವಾಗಿ ಮೆಂಟರನು ಹೇಳಿದ್ದೇನಂದರೆ:—

"ಎಲೈ ಇಡುಮಿನಿಯಸ್ಸನೇ, ನಿನ್ನ ಪಿತಾಮಹನಾದ ಮೈನಾಸನ ಧರ್ಮ ರಾಶಿಯು ಅಪಾರವಾದದ್ದು. ಇದುವರೆಗೂ ಅದು ಪ್ರಚ್ಛನ್ನವಾಗಿತ್ತು. ನಾನು ಇಲ್ಲಿಗೆ ಬಂದ ಮೇಲೆ ಅದು ಪ್ರಕಾಶವನ್ನು ಹೊಂದಿತು. ಸಹವಾಸದೋಷದಿಂದ ನಿನ್ನ ತೇಜಸ್ಸಿಗೆ ಗ್ಲಾನಿಯುಂಟಾಗಿತ್ತು. ಈಗ ಅದು ಸ್ವಲ್ಪಮಟ್ಟಿಗೆ ತಪ್ಪಿರುವುದು. ನಾನಾವಿಧವಾದ ದುರಭಿಮಾನಗಳು ಪ್ರಭುಗಳನ್ನು ಆವರಿಸಿಕೊಂಡು, ಅವರನ್ನು ಅಧೋಗತಿಗೆ ತರುವುವು. ಈ ದುರಭಿಮಾನಗಳನ್ನೇ ಸಹಾಯವನ್ನಾಗಿ ಮಾಡಿಕೊಂಡು, ಸ್ವಾರ್ಥಪರರಾದ ಸಚಿವರು "ಪ್ರಭುಗಳು ಇಂದ್ರಿಯಪರವಶರಾಗುವಂತೆಯೂ, ಅರಿಷಡ್ವರ್ಗಗಳಿಗೆ ಅಧೀನರಾಗುವಂತೆಯೂ ಮಾಡಿ, ಪ್ರಭುಗಳನ್ನು ಅಧೋಗತಿಗೆ ತಂದು, ತನ್ಮೂಲಕ ತಮ್ಮ ಇಷ್ಟಾರ್ಥಸಿದ್ಧಿಯನ್ನು ಮಾಡಿಕೊಳ್ಳುವರು. ದೂರದೃಷ್ಟಿ ಇಲ್ಲದ ಪ್ರಭುಗಳಿಗೆ ಕಣ್ಣುಗಳಿದ್ದಾಗ್ಯೂ ಅವರು ಇತರರ ಕಣ್ಣುಗಳಿಂದ ನೋಡುವರು. ಕಿವಿಗಳಿದ್ದಾಗ್ಯೂ ಇತರರ ಕಿವಿಗಳಿಂದ ಕೇಳುವರು. ಮನಸ್ಸು ಇದ್ದಾಗ್ಯೂ ಇತರರ ಮನಸ್ಸಿನಿಂದ ಯೋಚಿಸುವರು. ದೂರದೃಷ್ಟಿ ಇದ್ದಾಗ್ಯೂ ತಾವು ಹಿಡಿದ ಕೆಲಸಗಳ ಪರಿಣಾಮ ಫಲವನ್ನು ಪರ್ಯಾಲೋಚಿಸದೆ ಕೆಲಸ ಮಾಡುವರು. ಸ್ತುತಿಮಾಡತಕ್ಕವರನ್ನು ಹಿತಚಿಂತಕರೆಂದು ಭಾವಿಸುವರು. ದೋಷಗಳನ್ನು ತೋರಿಸತಕ್ಕವರನ್ನು ಶತ್ರುಗಳೆಂದು ಭಾವಿಸುವರು. ಕೃತ್ರಿಮಿಗಳನ್ನು ಪರಮ ಮಿತ್ರರೆಂದು ಭಾವಿಸುವರು. ಸತ್ಸಹವಾಸವೂ, ಧರ್ಮಿಷ್ಠರ ಹಿತೋಪದೇಶವೂ ಜನ್ಮಾಂತರಕೃತವಾದ ಪುಣ್ಯಪರಿಪಾಕ ರಾಶಿಯಿಂದ ಬರುವುದೆಂದು ತಿಳಿದುಕೊಂಡಿರುವುದು ತಪ್ಪಲ್ಲ. ನಿನ್ನನ್ನು ರಕ್ಷಿಸಬೇಕೆಂದು ನಾನು ಈ ದ್ವೀಪಕ್ಕೆ ಬರಲಿಲ್ಲ. ಟೆಲಿಮಾಕಸ್ಸಿನೊಡನೆ ಇಥಾಕಾ ದ್ವೀಪಕ್ಕೆ ಪ್ರಯಾಣ ಮಾಡಿದ್ದೆನು. ನಮ್ಮ ಹಡಗು ಮುಳುಗಿ, ನಾವು ನಿನ್ನ

ದ್ವೀಪಕ್ಕೆ ಬರುವುದಕ್ಕೆ ಜಗದೀಶ್ವರನ ಸಂಕಲ್ಪವೇ ಕಾರಣವಾಗಿರಬೇಕು. ಮನೋವಾಕ್ಕರ್ಮಗಳಲ್ಲಿಯೂ ಇಲ್ಲಿಗೆ ಬರಬೇಕೆಂಬ ಅಭಿನಿವೇಶವು ಇಲ್ಲದ ನಾವು ಇಲ್ಲಿಗೆ ಬಂದದ್ದೂ, ನಿನ್ನ ಆಶ್ರಯವನ್ನು ಹೊಂದಿದ್ದೂ, ನಿನ್ನ ಸ್ನೇಹಕ್ಕೆ ಪಾತ್ರರಾದದ್ದೂ, ನಿನ್ನಲ್ಲಿ ಅನುರಕ್ತರಾದದ್ದೂ, ನಿನಗೂ, ನಿನ್ನ ಶತ್ರುಗಳಿಗೂ ಸ್ನೇಹಮಾಡಿಸಿದ್ದೂ, ಪ್ರಭುಗಳು ಪ್ರಜೆಗಳನ್ನು ಹೇಗೆ ರಕ್ಷಿಸಬೇಕೋ ಅದನ್ನು ನಾನು ನಿನಗೆ ಹೇಳಿದ್ದೂ, ಅದರಂತೆ ನಡೆದು, ಪ್ರಜೆಗಳಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯನ್ನು ನೀನು ಹೊಂದಿದ್ದೂ, ನಿನ್ನನ್ನು ದೇವರಂತೆ ಭಾವಿಸಿ, ಅವರು ಮನೋವಾಕ್ಕರ್ಮಗಳಲ್ಲಿಯೂ ನಿನ್ನಲ್ಲಿ ನಿಸರ್ಗವಾದ ಭಕ್ತಿಯನ್ನಿಟ್ಟಿರುವುದೂ ಇದನ್ನೆಲ್ಲಾ ನೋಡಿದರೆ, ಇದು ಜಗದೀಶ್ವರನ ಲೀಲೆಯೆಂದು ಹೇಳಬೇಕೇ ಹೊರತು, ಇದಕ್ಕೆ ನಾನೂ ಕಾರಣವಲ್ಲ. ನೀನೂ ಕಾರಣವಲ್ಲ. ಅದು ಹೇಗಾದರೂ ಇರಲಿ. ಶುಭವನ್ನು ಮಾಡತಕ್ಕವರಿಗೆ ಶುಭಫಲವು ಆಗುವುದು. ಇದನ್ನು ಯಾವಾಗ್ಯೂ ಮನಸ್ಸಿನಲ್ಲಿ ಇಟ್ಟುಕೊಂಡು, ಸದಾ ಮನನ ಮಾಡುತ್ತಿರು. ಇದು ನಿನ್ನನ್ನು ರಕ್ಷಿಸುವುದು. ನಾವೆಲ್ಲರೂ ಜಗದೀಶ್ವರನ ದೂತರು. ನಾವು ತಿನ್ನತಕ್ಕ ಅನ್ನವು ಎಲ್ಲಾ ಜನಗಳಿಂದ ನಿರ್ಮಾಣ ಮಾಡಲ್ಪಟ್ಟದ್ದು. ನಾವು ಹೊದೆಯತಕ್ಕ ಬಟ್ಟೆಯು ಕೋಟ್ಯಂತರ ಜನಗಳ ಮೆಹನತ್ತಿನಿಂದ ಆದದ್ದು. ನಾವು ಪಡತಕ್ಕ ಸೌಖ್ಯಕ್ಕೆ ಪ್ರಪಂಚವೆಲ್ಲಾ ಕಾರಣಭೂತವಾಗಿರುವುದು. ಎಲ್ಲರೂ ಸುಖವಾಗಿರುವಂತೆ ಕೆಲಸಮಾಡಿ, ತನ್ಮೂಲಕ ನಾವು ಈ ಲೋಕಯಾತ್ರೆಯನ್ನು ಮುಗಿಸಿಕೊಳ್ಳಬೇಕು. ಇದು ಸದಾ ನಿನ್ನ ಪರ್ಯಾಲೋಚನೆಯಲ್ಲಿ ಇದ್ದರೆ ನೀನು ಕೃತಕೃತ್ಯನಾಗುತ್ತೀಯೆ. ಮಧುರ ಪದಾರ್ಥಗಳನ್ನು ಮುತ್ತುವ ನೊಣವೇ ಮೊದಲಾದ ಕ್ರಿಮಿಕೀಟಗಳಂತೆಯೂ, ಸತ್ತ ಹೆಣವನ್ನು ಕಿತ್ತುತಿನ್ನುವ ದುಷ್ಟಜಂತುಗಳಂತೆಯೂ ಪ್ರಭುಪದವಿಯಲ್ಲಿರತಕ್ಕವರನ್ನು ಸ್ವಾರ್ಥಪರರು ಆವರಿಸಿಕೊಂಡು, ಮೃಷಾಸ್ತುತಿಗಳೇ ಮೊದಲಾದವುಗಳಿಂದ ಅಧೋಗತಿಗೆ ತರುತ್ತಾರೆ. ಇಂಥಾವರ ವಿಷಯದಲ್ಲಿ ಜಾಗರೂಕನಾಗಿರು. ಸ್ತುತಿಗಳನ್ನು ಕೇಳಿ ಹಿಗ್ಗಬೇಡ. ನಿಂದೆಗಳನ್ನು ಕೇಳಿ ತಗ್ಗಬೇಡ. ಸ್ತುತಿಯನ್ನು ಕೇಳಿದ ಕೂಡಲೆ, ಈ ಸ್ತುತಿಪಾಠಕರ ಉದ್ದೇಶವೇನಾಗಿರಬಹುದೆಂದು ಪರಿಶೀಲಿಸು. ನಿನ್ನ ನ್ಯೂನಾತಿರಿಕ್ತಗಳನ್ನು ಉದ್ಘಾಟಿಸಿ, ಯಾರಾದರೂ ನಿನ್ನನ್ನು ನಿಂದಿಸಿದರೆ, "ನನ್ನಲ್ಲಿ ಏನು ತಪ್ಪಿರಬಹುದೆಂದು ಪರೀಕ್ಷಿಸಿಕೋ. ತಪ್ಪುಗಳಿದ್ದರೆ ತಿದ್ದಿಕೋ." ಈ ರೀತಿಯಲ್ಲಿ ಮಾಡಿಕೊಂಡರೆ ಕೃತಕೃತ್ಯನಾಗುವಿ.

"ಎಲೈ ಮೆಂಟರನೇ, ಪ್ರಭುಗಳು ಪ್ರಾಯಕವಾಗಿ ಯಥಾಜಾತರು, ಹೆಸರಿಗೆ ಮಾತ್ರ ಇವರು ಪ್ರಭುಗಳಾಗಿರುವರು. ಕಾರ್ಯತಃ ಇವರು ದಾಸರಿಗೆ ದಾಸರಾಗಿರುವರು. ಗುಲಾಮರಿಗೆ ಗುಲಾಮರಾಗಿರುವರು. ಇತರ ಪ್ರಭುಗಳ ವಿಷಯವು ಹಾಗಿರಲಿ. ನನ್ನ ಪೂರ್ವೋತ್ತರಗಳನ್ನು ನೋಡಿದರೆ, ನಾನು ಹಾಗಿರುವೆನೆಂದು ಗೊತ್ತಾಗುವುದು. ನನ್ನ ವೃತ್ತಾಂತವನ್ನು ಹೇಳುತ್ತೇನೆ, ಕೇಳು. ಬಹುಕಾಲದಿಂದ ನನಗೆ ಇಬ್ಬರು ಮಂತ್ರಿಗಳು ಇದ್ದರು. ಒಬ್ಬನು ಪ್ರೋಟೆಸಿಲನು. ಮತ್ತೊಬ್ಬನು ಫೈಲೋಕ್ಲೀಸನು. ಪ್ರೋಟೆಸಿಲನು ನನಗೆ ಬಹಳ ಆಪ್ತನೆಂದು ತಿಳಿದುಕೊಂಡಿದ್ದೆನು. ಇವನು ನನ್ನ ಮನೋವೃತ್ತಿಗೆ ಅನುಸಾರವಾಗಿ ನಡೆಯುತ್ತಾ, ಸದಾ ನನ್ನ ಸಂತೋಷವು ಹೆಚ್ಚುವಂತೆಯೂ, ನನಗೆ ಯಾವ ಕ್ಲೇಶವೂ ಬರದಂತೆಯೂ ಮಾಡುವುದರಲ್ಲಿ ಬದ್ಧಾದರನಾಗಿರುವನು. ಫೈಲೋಕ್ಲೀಸನು ದೈವಭಕ್ತನು. ಸಕಲ ವಿದ್ಯಾವಿಶಾರದನು. ಜಿತೇಂದ್ರಿಯನು, ಹೊನ್ನು, ಹೆಣ್ಣು, ಮಣ್ಣುಗಳಲ್ಲಿ ಇವನಿಗೆ ಆಸಕ್ತಿಯು ಇರುವುದಿಲ್ಲ. ಪರೋಪಕಾರಾರ್ಥವಾಗಿ ಈ ಮಂತ್ರಿಪದವಿಯಲ್ಲಿದ್ದನು. ಧರ್ಮರಕ್ಷಣೆಗೋಸ್ಕರ ಇವನಿಗೆ ಅಧಿಕಾರದಲ್ಲಿ ಆಸಕ್ತಿ ಇತ್ತು. ಸ್ವಾರ್ಥಪ್ರಾಪ್ತಿಗೋಸ್ಕರ ಇವನು ಅಧಿಕಾರವನ್ನು ಉಪಯೋಗಿಸಲಿಲ್ಲ. ಪ್ರೋಟೆಸಿಲನು ನಾನು ತಪ್ಪುಗಳನ್ನು ಮಾಡಿದಾಗ್ಯೂ, ಅವುಗಳನ್ನು ಆಕ್ಷೇಪಿಸದೆ, ನಾನು ಮಾಡತಕ್ಕ ಸಾಮಾನ್ಯ ಕೆಲಸಗಳನ್ನೆಲ್ಲಾ ಶ್ಲಾಘಿಸುತ್ತಾ, ನನಗೆ ಯಾವಾಗ್ಯೂ ಸಂತೋಷಜನಕನಾಗಿದ್ದನು. ಫೈಲೋಕ್ಲೀಸನು ನಾನು ತಪ್ಪುಗಳನ್ನು ಮಾಡಿದಾಗ, ಅವುಗಳನ್ನು ತಿದ್ದಿಕೊಳ್ಳದೇ ಇದ್ದರೆ ಆಗತಕ್ಕ ಅನರ್ಥಗಳನ್ನು ತೋರಿಸುತ್ತಾ, ಪ್ರಭುಗಳಾದವರು ಪ್ರಜೆಗಳಿಗಿಂತಲೂ ಮನೋವಾಕ್ಕರ್ಮಗಳಲ್ಲಿ ಪರಿಶುದ್ಧರಾಗಿರಬೇಕೆಂಬದಾಗಿಯೂ, ಸತ್ಯದಲ್ಲಿಯೂ, ಧರ್ಮದಲ್ಲಿಯೂ ಸ್ಥಿರವಾದ ಸಂಕಲ್ಪವು ಇರಬೇಕೆಂಬದಾಗಿಯೂ ಇವರಿಗೆ ಹೇಳುತ್ತಾ ಅಜಿತೇಂದ್ರಿಯರಾಗಿಯೂ ಅರಿಷಡ್ವರ್ಗಗಳಿಗೆ ಅಧೀನರಾಗಿಯೂ ಆದ ಪ್ರಭುಗಳ ಗತಿಯು ಹೇಗೆ ಪರಿಣಮಿಸಿರುವುದೋ ಅದನ್ನು ಹೇಳುತ್ತಾ, ಯಾವಾಗ್ಯೂ ಶಿಷ್ಯನನ್ನು ಪಾಠಕನು ಹೇಗೆ ಕಾಣುವನೋ ಹಾಗೆ ನನ್ನನ್ನು ಕಾಣುತ್ತಲಿದ್ದನು. ಈತನು ಯಾವಾಗ್ಯೂ ಹುಬ್ಬು ಗಂಟುಹಾಕಿಕೊಂಡು ತಪ್ಪು ಮಾಡತಕ್ಕವರಿಗೆಲ್ಲಾ ಭಯಂಕರನಾಗಿದ್ದನು. ನಾನು ಮೊದಲುಗೊಂಡು ಈ ದ್ವೀಪನಿವಾಸಿಗಳಲ್ಲಿ ಯಾರು ಏನು ಕೊಡುವುದಕ್ಕೆ ಹೋದಾಗ್ಯೂ, ಅದನ್ನು ಮುಟ್ಟುತ್ತಿರಲಿಲ್ಲ. ಯಾರು ಯಾವ ತಪ್ಪು ಮಾಡಿದಾಗ್ಯೂ, ಅವರಲ್ಲಿ ಅಸಮಾ

ಧಾನವನ್ನು ತೋರಿಸದೇ ಇರುತ್ತಿರಲಿಲ್ಲ. ಇವನ ಸ್ವಭಾವವನ್ನು ನೋಡಿ, ಅನೇಕರು ಅಸಮಾಧಾನ ಪಡುತ್ತಿದ್ದರು. ಇವನ ಗುಣಗಳನ್ನು ನೋಡಿ, ನಾನು ಸಂತೋಷಪಡುತ್ತಿದ್ದೆನು. ಆದರೆ ಸದಾ ನನ್ನ ದೋಷಗಳನ್ನು ನಿರ್ಭಯವಾಗಿ ಇವನು ಉದ್ಘಾಟಿಸುತ್ತಿದ್ದದ್ದರಿಂದ ಕೆಲವು ಸಮಯಗಳಲ್ಲಿ ಇವನ ಸಹವಾಸವೇ ಬೇಡವೆಂದು ತೋರುತ್ತಿತ್ತು. ಆದಾಗ್ಯೂ ಇವನ ಪ್ರಾಮಾಣಿಕತೆಯನ್ನು ನೋಡಿ, ಇಂಥಾ ಮಹಾತ್ಮನ ಸಹಾಯವು ತಪ್ಪಿದರೆ ನನಗೇನು ಗತಿ? ರಾಜ್ಯಕ್ಕೆ ಏನು ಗತಿ? ಎಂಬ ಭಯವು ನನಗೆ ಉಂಟಾಗುತ್ತಿತ್ತು. ಹೀಗಿದ್ದಾಗ್ಯೂ ನನಗೆ ಇವನಲ್ಲಿ ಇರತಕ್ಕ ಪ್ರೀತಿಗಿಂತಲೂ ಪ್ರೋಟಿಸಲನಲ್ಲಿ ಹೆಚ್ಚಾದ ಪ್ರೀತಿಯು ಇರಲಿಲ್ಲ. ಅವನಲ್ಲಿ ಎಷ್ಟು ದುರ್ಗುಣಗಳಿದ್ದಾಗ್ಯೂ, ನನ್ನಲ್ಲಿ ವಿಶೇಷ ಭಕ್ತಿಯನ್ನು ತೋರಿಸುತ್ತಾ, ನನಗೆ ಕೇವಲ ಸಂತೋಷಜನಕನಾಗಿದ್ದನು. ಫೈಲೋಕ್ಲೀಸನ ಗುಣಾತಿಶಯಳು ನನ್ನ ಕ್ಷೇಮಕ್ಕೂ, ನನ್ನ ದೇಶದ ಕ್ಷೇಮಕ್ಕೂ ವಿಶೇಷ ಸಾಧಕವಾದದ್ದೆಂದು ನನಗೆ ತೋರಿದಾಗ್ಯೂ, ಅವನು ನನ್ನ ಮನಸ್ಸಂತೋಷ ಮಾಡುವುದಕ್ಕೆ ಪ್ರಯತ್ನ ಮಾಡದೇ ಇದ್ದದ್ದರಿಂದ, ಅವನಲ್ಲಿ ವಿಶೇಷ ಪ್ರೀತಿಯು ನನಗೆ ಇರಲಿಲ್ಲ. ಪ್ರೋಟಿಸಲನು ಧರ್ಮಿಷ್ಠನಾಗಿಯೂ, ಸತ್ಯವಂತನಾಗಿಯೂ ಇರಲಿಲ್ಲ. ಆದಾಗ್ಯೂ ಅವನಲ್ಲಿ ನಾನು ಸುಪ್ರೀತನಾಗಿದ್ದೆನು. ಅವನ ಸಲಹೆಗಳಿಗೆ ವಿರೋಧವಾಗಿ ನಡೆಯುವುದಕ್ಕೆ ನನಗೆ ಅಸಾಧ್ಯವಾಗಿತ್ತು. ಫೈಲೋಕ್ಲೀಸನು ಕೇವಲ ಪ್ರಾಮಾಣಿಕನೆಂಬದಾಗಿಯೂ, ಸತ್ಯವಂತನೆಂಬದಾಗಿಯೂ, ಧರ್ಮಿಷ್ಠನೆಂಬದಾಗಿಯೂ, ಹಿತಚಿಂತಕನೆಂಬದಾಗಿಯೂ, ಧರ್ಮಕ್ಕೋಸ್ಕರ ಪ್ರಾಣವನ್ನಾದರೂ ಬಿಡುವನೆಂಬದಾಗಿಯೂ ನಾನು ತಿಳಿದುಕೊಂಡಿದ್ದೆನು. ಆದಾಗ್ಯೂ ಅವನು ಸ್ತುತಿಪಾಠಕನಲ್ಲದೇ ಇದ್ದದ್ದರಿಂದ, ಅವನಲ್ಲಿ ನನಗೆ ಪ್ರೋಟಿಸಲನಲ್ಲಿ ಇದ್ದಷ್ಟು ಪ್ರೀತಿಯು ಇರಲಿಲ್ಲ. ಇದು ಶುದ್ಧ ತಪ್ಪೆಂದು ನಾನು ತಿಳಿದುಕೊಂಡಿದ್ದೆನು. ಆದಾಗ್ಯೂ ಪ್ರೋಟಿಸಲನಲ್ಲಿ ಇರತಕ್ಕ ಪ್ರೀತಿಯನ್ನು ಬಿಡುವುದಕ್ಕೂ, ಫೈಲೋಕ್ಲೀಸನಲ್ಲಿ ನಂಬಿಕೆಯನ್ನೂ, ಪ್ರೀತಿಯನ್ನೂ ಇಡುವುದಕ್ಕೂ ನನಗೆ ಶಕ್ತಿ ಇರಲಿಲ್ಲ. ಇದರಿಂದಲೇ ಪ್ರಭುಪದವಿಗೆ ನಾನು ಅನರ್ಹನೆಂದು ಗೊತ್ತಾಯಿತು. ಪ್ರೋಟಿಸಲನು ಮಂತ್ರಿಪದವಿಯಿಂದ ಫೈಲೋಕ್ಲೀಸನನ್ನು ತೆಗೆಯಬೇಕೆಂದು ಬಹಳ ಸಾಹಸ ಮಾಡಿದನು. ಅದಕ್ಕೆ ನಾನು ಅವಕಾಶವನ್ನು ಕೊಡಲಿಲ್ಲ. ಕೆಲವು ದಿವಸಗಳಿಗೆ ಮುಂಚೆ ಕಾರ್ಪೇಥಿಯರ್ಗೂ, ನಮಗೂ

ಯುದ್ಧವು ಸನ್ನಿಹಿತವಾಯಿತು. ಫೈಲೋಕ್ಲೀಸನನ್ನು ಪ್ರೋಟಿಸಲನು ಅದು ವರೆಗೂ ದ್ವೇಷಿಸುತ್ತಿದ್ದನು. ಆಗ ಸದರಿ ದ್ವೇಷವನ್ನು ಬಿಟ್ಟು, ಅವನನ್ನು ಸ್ತುತಿ ಸುವುದಕ್ಕೆ ಉಪಕ್ರಮಿಸಿದನು. ಫೈಲೋಕ್ಲೀಸನು ಯೋಧರಲ್ಲಿ ಅಗ್ರಗಣ್ಯನೆಂಬ ದಾಗಿಯೂ, ಮಿಲಿಟರಿ ಧರ್ಮರಹಸ್ಯಗಳನ್ನು ಚನ್ನಾಗಿ ಅರಿತವನೆಂಬದಾಗಿಯೂ, ಶತ್ರುಗಳನ್ನು ನಿಗ್ರಹಿಸುವುದಕ್ಕೆ ಇವನಿಗಿಂತಲೂ ಹೆಚ್ಚು ಸಾಮರ್ಥ್ಯವುಳ್ಳವರಿಲ್ಲ ವೆಂಬದಾಗಿಯೂ, ಇವನನ್ನು ಕಳುಹಿಸದಿದ್ದರೆ, ಈ ಯುದ್ಧದಲ್ಲಿ ಪರಾಜಯವಾ ಗುವ ಸಂಭವವು ಬರುವುದೆಂಬದಾಗಿಯೂ, ಇವನನ್ನು ಯುದ್ಧಕ್ಕೆ ಕಳುಹಿಸಬೇ ಕೆಂಬದಾಗಿಯೂ ಪ್ರೋಟಿಸಲನು ಹೇಳಿದನು. ಇದು ಸತ್ಯವೆಂದು ನಾನು ತಿಳಿದು ಕೊಂಡೆನು. ಇದಕ್ಕಾಗಿ ಸಂತೋಷಪಟ್ಟು, ಯುದ್ಧಕ್ಕೆ ಹೋಗಬೇಕೆಂದು ಫೈಲೋ ಕ್ಲೀಸನಿಗೆ ಆಜ್ಞೆಮಾಡಿದೆನು. ಈ ಆಜ್ಞೆಯನ್ನು ಕೊಟ್ಟ ಕೂಡಲೆ, ಫೈಲೋಕ್ಲೀ ಸನು ಪ್ರೋಟಿಸಲನ ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಯ ಉದ್ದೇಶವನ್ನು ತಿಳಿ ದುಕೊಂಡನು. ಅವನು ನನಗೆ ಹೇಳಿದ್ದೇನಂದರೆ:—

"ಈ ಯುದ್ಧಕ್ಕೆ ಕಾರಣವನ್ನು ನಾನು ಬಲ್ಲೆನು. ಶತ್ರುಗಳನ್ನು ನಿಗ್ರ ಹಿಸುವುದಕ್ಕೆ ನಾನು ಹೋಗಬೇಕೆಂದು ನೀನು ಆಜ್ಞೆಮಾಡುವುದಕ್ಕೆ ಕಾರಣವನ್ನೂ ನಾನು ಬಲ್ಲೆನು. ಅದನ್ನು ತಿಳಿದುಕೊಳ್ಳುವ ಶಕ್ತಿಯು ನಿನಗೆ ಇರುವುದಿಲ್ಲ. ಹೇಳಿದರೆ ಪರಿಗ್ರಹಿಸುವ ಶಕ್ತಿಯೂ ನಿನಗೆ ಇರುವುದಿಲ್ಲ ನಿನಗೆ ಹಿತೋಪದೇಶ ಮಾಡುವುದರಿಂದ ಪ್ರಯೋಜನವಿಲ್ಲ. ಮಿತ್ರರನ್ನು ಶತ್ರುಗಳೆಂಬದಾಗಿಯೂ, ಶತ್ರುಗಳನ್ನು ಮಿತ್ರರೆಂಬದಾಗಿಯೂ, ಆಪ್ತರನ್ನು ಅನಾಪ್ತರೆಂಬದಾಗಿಯೂ, ಅನಾಪ್ತರನ್ನು ಆಪ್ತರೆಂಬದಾಗಿಯೂ ನೀನು ತಿಳಿದುಕೊಂಡಿದ್ದೀಯೆ. ನೀನು ಮಾಡತಕ್ಕ ಕೆಲಸಗಳು ನಿನಗೂ, ನನಗೂ ಕ್ಷೇಮಕರವಾದದ್ದಲ್ಲ. ನನ್ನ ಕ್ಷೇ ಮವು ಗಣನೀಯವಾದದ್ದಲ್ಲ. ನಿನಗೆ ಅಕ್ಷೇಮವಾದರೆ, ಅದರ ಫಲವನ್ನು ನಿನ್ನ ಪ್ರಜೆಗಳೆಲ್ಲಾ ಅನುಭವಿಸಬೇಕಾಗುತ್ತದೆ. ಇದಕ್ಕಾಗಿ ನಾನು ವ್ಯಸನಪಡುತ್ತೇನೆ. ಪ್ರಾಣದ ಮೇಲೂ ಆಶೆಯಿಡದೆ ನಾನು ನಿನ್ನ ಸೇವೆಯನ್ನೂ, ನಿನ್ನ ಪ್ರಜೆಗಳ ಸೇವೆ ಯನ್ನೂ ಮಾಡುತ್ತಲಿದೇನೆ. ಈ ಸೇವೆಗೆ ಅಪಕಾರವೇ ಪ್ರತಿಫಲವಾಗಿ ಪರಿಣಮಿ ಸಿರುವುದು. ನಿನ್ನ ಆಜ್ಞೆಯಂತೆ ಯುದ್ಧಕ್ಕೆ ಹೋಗುತ್ತೇನೆ. ಪುನಃ ನಿನ್ನನ್ನು ನೋಡುವ ಸಂಭವವು ಬರುವುದಿಲ್ಲ. ಅದು ಬರಲೆಂದು ನಾನು ಅಪೇಕ್ಷಿಸು ವುದೂ ಇಲ್ಲ. ತನ್ನ ಕ್ಷೇಮಾರ್ಥವಾಗಿ ಮಾಡಬೇಕಾದ ಕೃಷಿಯನ್ನು ಯಾವ

ಪ್ರಭುವು ಮಾಡಿಕೊಳ್ಳುವುದಿಲ್ಲವೋ ಅವನನ್ನು ದೇವರೂ ಕೂಡ ರಕ್ಷಿಸಲಾರನು. ನಿನ್ನ ಗತಿಯು ಹೀಗಾಯಿತು. ನಿನಗೆ ನನ್ನಲ್ಲಿ ನಂಬಿಕೆಯಿಲ್ಲ. ಪ್ರೋಟಿಸಿಲನು ನಿನ್ನ ಕ್ಷೇಮಚಿಂತಕನೆಂದು ತಿಳಿದುಕೊಂಡಿದ್ದೀಯೆ. ಅವನ ಸ್ವಭಾವವು ತಿಳಿದು ಕೊಳ್ಳುವ ಕಾಲವು ಶೀಘ್ರದಲ್ಲಿಯೇ ಬರುವುದು." ಈ ರೀತಿಯಲ್ಲಿ ಅವನು ಹೇಳಲು, ನಾನು ಅವನಿಗೆ ಹೇಳಿದ್ದೇನಂದರೆ:—

"ಪ್ರೋಟಿಸಿಲನು ನಿನ್ನಲ್ಲಿ ತುಂಬಾ ಅನುರಕ್ತನಾಗಿರುವನು. ನಿನ್ನ ಶಕ್ತಿ ಯಲ್ಲಿ ಅವನಿಗೆ ತುಂಬಾ ನಂಬಿಕೆಯುಂಟು. ಈ ಯುದ್ಧದಲ್ಲಿ ಸರ್ವಾಧಿಕಾರವು ನಿನಗೆ ಒಪ್ಪಿಸಲ್ಪಟ್ಟರೆ, ದಿಗ್ವಿಜಯವಾಗುವುದೆಂದು ಅವನು ಅಭಿಪ್ರಾಯ ಪಟ್ಟಿರು ವನು. ಈ ಅಭಿಪ್ರಾಯದಂತೆ ನೀನು ಕಳುಹಿಸಲ್ಪಟ್ಟಿರುವಿ. ನಿನಗೆ ವಿಜಯ ವಾಗುತ್ತದೆ. ಹೋಗಿಬಿಟ್ಟು ಬಾ" ಎಂದು ಹೇಳಿ ನಾನು ಅವನನ್ನು ಕಳುಹಿಸಿ ಕೊಟ್ಟೆನು.

ಈ ರೀತಿಯಲ್ಲಿ ಅವನನ್ನು ಕಳುಹಿಸುವುದಕ್ಕೆ ಬೇರೆ ಕಾರಣಗಳಿದ್ದವು. ಈ ಯುದ್ಧದಲ್ಲಿ ವಿಜಯವಾಗಬೇಕೆಂಬುವುದು ಒಂದು ಕಾರಣ. ಎರಡನೇ ಕಾರಣ ಒಂದು ಉಂಟಾಗಿತ್ತು. ನನ್ನ ನೌಕರರಲ್ಲಿ ಟಿಮೋಕ್ರೆಟೀಸ್ ಎಂಬ ಒಬ್ಬ ಮನು ಷ್ಯನಿರುವನು. ಇವನು ಒಂದು ದಿನ ನನ್ನ ಬಳಿಗೆ ಬಂದು ಹೇಳಿದ್ದೇನಂದರೆ:—

"ಫೈಲೋಕ್ಲಿಸನು ಕಾರ್ಪೇಥಸ್ ಸಂಸ್ಥಾನವನ್ನು ಜಯಿಸಿ, ಅಲ್ಲಿಗೆ ತಾನೇ ಪ್ರಭುವಾಗಬೇಕೆಂದು ಪ್ರಯತ್ನಮಾಡುತ್ತಲಿದಾನೆ. ಎಲ್ಲಾ ಹುದ್ದೇದಾರರೂ ಅವನ ಪಕ್ಷವಾಗಿರುತ್ತಾರೆ. ಸೈನ್ಯದವರೆಲ್ಲಾ ಅವನ ಪಕ್ಷವಾಗಿರುತ್ತಾರೆ. ಕಾರ್ಪೇಥಿಯರ್ನರನ್ನು ಜಯಿಸಿ, ಸದರಿ ಜಯದಿಂದ ಉಂಟಾದ ಸಂತೋಷದಲ್ಲಿ ಪರ ವಶನಾಗಿರುತ್ತಾನೆ. ಅವನ ಸ್ನೇಹಿತರಲ್ಲಿ ಒಬ್ಬನಿಗೆ ಅವನು ಒಂದು ಲೇಖನವನ್ನು ಬರೆದಿರುವನು. ಅದನ್ನು ಚನ್ನಾಗಿ ಓದಿದರೆ, ಅವನ ಮನೋಭಾವವು ನಿನಗೇ ಗೊತ್ತಾಗುವುದು. ಅದರ ಮೇಲೆ ನಿನಗೆ ಸೂಕ್ತವಾದಂತೆ ನಡೆಯಬಹುದು" ಎಂದು ಹೇಳಿ, ನನ್ನ ಕೈಗೆ ಒಂದು ಲೇಖನವನ್ನು ಕೊಟ್ಟನು. ಸದರಿ ಲೇಖನ ವನ್ನು ನಾನು ಓದಿದೆನು. ಅದು ಫೈಲೋಕ್ಲೀಸನ ಕೈಬರಹದಂತೆ ಇತ್ತು. ಅದು ಅವನು ಬರೆದದ್ದಲ್ಲ. ಪ್ರಾಟಿಸಿಲನೂ, ಟಿಮೋಕ್ರೆಟೀಸನೂ ಇಬ್ಬರೂ ಸೇರಿ, ಸದರಿ ಲೇಖನವನ್ನು ಸೃಷ್ಟಿಮಾಡಿದ್ದರು. ಅದು ನನಗೆ ತುಂಬಾ ಆಶ್ಚರ್ಯವನ್ನುಂಟು

ಮಾಡಿತು. ಅದನ್ನು ಪುನಃ ಪುನಃ ನಾನು ಓದಿದೆನು. ಫೈಲೋಕ್ಲೀಸನು ಈ ಲೇಖನವನ್ನು ಬರೆದಿರಲಾರನೆಂಬುವುದಕ್ಕೆ ಎಷ್ಟೋ ನಿದರ್ಶನಗಳು ನನ್ನ ಮನಸ್ಸಿಗೆ ಹೊಳೆದವು. ಈ ಲೇಖನವನ್ನು ಅವನು ಬರದದ್ದೆಂದು ನಂಬುವುದಕ್ಕಾಗಲಿಲ್ಲ. ಆದಾಗ್ಯೂ ಈ ಲೇಖನದ ಅಕ್ಷರಗಳು ಅವನ ಅಕ್ಷರದಂತೆ ಇದ್ದದ್ದರಿಂದ, ನನಗೆ ಹಿಂದೂ ಮುಂದೂ ತೋರಲಿಲ್ಲ. ಆಗ ಟಿನೋಕ್ರೆಟೀಸನು "ಈ ಲೇಖನದಲ್ಲಿ ಒಂದು ರಹಸ್ಯವು ಇರುವುದು. ಫೈಲೋಕ್ಲೀಸನೂ, ಪ್ರಾಟಿಸಿಲನೂ ಇಬ್ಬರೂ ರಾಜಿಯನ್ನು ಮಾಡಿಕೊಂಡು; ನಿನಗೆ ದ್ರೋಹಮಾಡಬೇಕೆಂದು ಇರುತ್ತಾರೆ. ಈ ಯುದ್ಧಕ್ಕೆ ಫೈಲೋಕ್ಲೀಸನನ್ನು ಕಳುಹಿಸಬೇಕೆಂದು ನಿನಗೆ ಉಪದೇಶ ಮಾಡಿದವನೇ ಪ್ರೋಟಿಸಿಲನು. ಇವರಿಬ್ಬರಿಗೂ ಮನಸ್ತಾಪವಿತ್ತು. ಇವರಿಬ್ಬರೂ ರಾಜಿಯಾದರು. ರಾಜಿಯಾದ ಮೇಲೆ ಈ ಸೇನಾನಾಯಿಕ ಪದವಿಗೆ ಅವನನ್ನು ನಿಯಮಿಸಬೇಕೆಂದು ಪ್ರೋಟಿಸಿಲನೇ ನಿನಗೆ ಶಿಫಾರ್ಸು ಮಾಡಿದನು. ಈ ಜಯದ ಫಲಗಳನ್ನು ಇಬ್ಬರೂ ಹಂಚಿಕೊಳ್ಳಬೇಕೆಂದು ಪ್ರಯತ್ನಮಾಡಿದರು. ಇವರ ದುರಾಶೆಯಿಂದ ನಿನ್ನ ಹಡಗುಗಳ ಗುಂಪಿಗೆ ವಿಪತ್ತು ಉಂಟಾಯಿತು. ಇವರಿಬ್ಬರೂ ಪರಸ್ಪರ ವಿರೋಧಿಗಳಾಗಿದ್ದರೆ, ನಿನಗೆ ಬಾಧಕವಿರಲಿಲ್ಲ. ಇವರಿಬ್ಬರೂ ಸೇರಿ, ನಿನ್ನ ಚತುರಂಗ ಬಲಗಳನ್ನು ಸ್ವಾಧೀನ ಪಡಿಸಿಕೊಂಡು, ನಿನಗೆ ಪ್ರಭುತ್ವವನ್ನು ತಪ್ಪಿಸಬೇಕೆಂದಿರುತ್ತಾರೆ. ಈ ರಹಸ್ಯವನ್ನು ನಿನಗೆ ತಿಳಿಸಿದ್ದರಿಂದ, ಅವರ ದ್ವೇಷಕ್ಕೆ ಪಾತ್ರನಾಗಿರುತ್ತೇನೆ. ಆದರೆ ನೀನು ನನಗೆ ಅನ್ನವನ್ನು ಕೊಟ್ಟು ಸಾಕಿದ ಧಣಿಯಾದುದರಿಂದ ನಡೆದ ವಿದ್ಯಮಾನಗಳನ್ನು ನಿನಗೆ ತಿಳಿಸಿರುತ್ತೇನೆ." ಈ ಮಾತುಗಳನ್ನು ಕೇಳಿದ ಕೂಡಲೆ, ಇದು ನಿಜವಾಗಿರಬೇಕೆಂದು ನನಗೆ ತೋರಿತು. ಫೈಲೋಕ್ಲೀಸನು ರಾಜದ್ರೋಹಿಯಾಗಿರಬೇಕೆಂದು ತಿಳಿದುಕೊಂಡೆನು. ಪ್ರಾಟಿಸಿಲನು ಅವನ ಜೊತೆಯಲ್ಲಿ ಸೇರಿರಬಹುದೆಂದು ಭಾವನೆಯು ಉಂಟಾಯಿತು. ಫೈಲೋಕ್ಲೀಸನು ಕಾರ್ಫೇಥಿಯರ್‌ರನ್ನು ಗೆದ್ದ ಮೇಲೆ ಅವನನ್ನು ನಿಗ್ರಹಿಸುವುದು ಕಷ್ಟವೆಂಬದಾಗಿಯೂ, ಅವನನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂಬದಾಗಿಯೂ ಪ್ರೋಟಿಸಿಲನು ಹೇಳುತ್ತಿದ್ದನು. ಫೈಲೋಕ್ಲೀಸನು ರಾಜದ್ರೋಹಿಯಾದ ಪಕ್ಷದಲ್ಲಿ, ಲೋಕದಲ್ಲಿ ಪ್ರಾಮಾಣಿಕತೆ ಇರುವುದಿಲ್ಲವೆಂದು ನನ್ನ ಮನಸ್ಸಿಗೆ ತೋರಿತು. ಫೈಲೋಕ್ಲೀಸನನ್ನು ಕೆಲಸದಿಂದ ವಜಾ ಮಾಡಬೇಕೆಂದು ನಿಷ್ಕರ್ಷೆ ಮಾಡಿದೆನು. ಪ್ರೋಟಿಸಿಲನನ್ನು ಏನು ಮಾಡಬೇಕು ? ಆ ವಿಷಯದಲ್ಲಿ ನನಗೆ ಸಂದೇಹವು

ಉಂಟಾಯಿತು. ಅವನ ಮೇಲೆ ಟಿಮೋಕ್ರೆಟೀಸನು ಹೇಳಿದ ಮಾತು ರುಜುವಾತ್ತ ಆಗುವವರೆಗೂ ಅವನು ನಿರಪರಾಧಿಯೆಂದು ಭಾವಿಸಬೇಕೆಂದು ನಿಷ್ಕರ್ಷೆ ಮಾಡಿದೆನು. ಅಷ್ಟರಲ್ಲಿಯೇ ಪ್ರೋಟಿಸಿಲನು ನನ್ನ ಬಳಿಗೆ ಬಂದನು. ಫೈಲೋಕ್ಲೀಸನು ಪ್ರಾಮಾಣಿಕನಾಗಿಯೂ, ಪಾಪಭೀತನಾಗಿಯೂ, ಧರ್ಮಿಷ್ಠನಾಗಿಯೂ ಇರುವನೆಂಬದಾಗಿಯೂ, ಅಂಥಾ ಮನುಷ್ಯನು ರಾಜದ್ರೋಹ ಬುದ್ಧಿಯನ್ನು ತೋರಿಸಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆಂಬದಾಗಿಯೂ ಹೇಳಿದನು. ಈ ಮಧ್ಯೆ ಟಿಮೋಕ್ರೆಟೀಸನು ಸರ್ವ ಪ್ರಯತ್ನದಿಂದಲೂ ಫೈಲೋಕ್ಲೀಸನು ಬಲವಾಗಿ ದಂಡಿಸಲ್ಪಡಬೇಕೆಂದು ಉಪದೇಶ ಮಾಡುತ್ತಾ ಬಂದನು. ಇವರ ಕೈಗೊಂಬೆಯಂತೆ ನಾನು ಪರಿಣಮಿಸಿದ್ದನ್ನೂ, ಅತ್ಯುತ್ತಮವಾದ ರಾಜಭಕ್ತಿವಿಶ್ವಾಸಗಳನ್ನೂ, ಪ್ರಾಮಾಣಿಕತೆಯನ್ನೂ ಹೊಂದಿರುವ ಸಚಿವರೇ ಮೊದಲಾದ ಅಧಿಕಾರಿಗಳು ಪ್ರಭುಗಳಿಗೆ ಅವರ ಪುಣ್ಯಪರಿಪಾಕದಿಂದ ದೊರೆಯಬೇಕೆಂಬದಾಗಿಯೂ, ಪ್ರಾಯಕವಾಗಿ ನೌಕರರು ಭಯಭ್ರಾಂತರಾಗಿರುವಂತೆ ಅಭಿನಯಿಸುತ್ತಾ, ಪ್ರಭುಗಳನ್ನು ಇವರು ನಿರಂಕುಶವಾಗಿ ಆಳುವರೆಂಬದಾಗಿಯೂ ನನಗೆ ತೋರಿತು. ಫೈಲೋಕ್ಲೀಸನನ್ನು ಕೆಲಸದಿಂದ ನಿವೃತ್ತಿ ಮಾಡಬೇಕೆಂದು ನಾನು ನಿಷ್ಕರ್ಷೆ ಮಾಡಿದೆನು. ಅವನನ್ನು ಉದ್ಯೋಗದಿಂದ ನಿವೃತ್ತಿ ಮಾಡಿರುವುದಾಗಿ ಹುಕುಂನ್ನು ಮಾಡಿ, ಸದರಿ ಹುಕುಂ ಟಿಮೋಕ್ರೆಟೀಸನ ಮೂಲಕವಾಗಿ ಫೈಲೋಕ್ಲೀಸನಿಗೆ ಕಳುಹಿಸಿಕೊಟ್ಟೆನು. ಟಿಮೋಕ್ರೆಟೀಸನು ಈ ಹುಕುಂನ್ನು ಅವನಿಗೆ ಕೊಡುವುದಕ್ಕೆ ಹೋದಾಗ, ಅವನು ಶತ್ರುಗಳ ಮೇಲೆ ಯುದ್ಧಕ್ಕೆ ಉಪಕ್ರಮಮಾಡುವ ಸನ್ನಿವೇಶವು ಉಂಟಾಗಿತ್ತು. ಈ ಯುದ್ಧದಲ್ಲಿ ಅವನು ಪರಾಜಿತನಾಗಿ ಸತ್ತರೆ ಉತ್ತಮ. ವಿಜಯವನ್ನು ಹೊಂದಿಬಂದರೆ, ಈ ಬರ್ತರಫ್‌ನ ಹುಕುಂನ್ನು ಅವನಿಗೆ ಕೊಡೋಣವೆಂದು ಗೊತ್ತುಮಾಡಿಕೊಂಡನು. ಈ ಮಧ್ಯೆ ಪ್ರಾಟಿಸಲನು ಟಿಮೋಕ್ರೆಟೀಸ್‌ನಿಂದಲೇ ಫೈಲೋಕ್ಲೀಸನನ್ನು ಸಂಹರಿಸುವುದಕ್ಕೆ ಏರ್ಪಾಡು ಮಾಡಿದ್ದನು. ಆಗ ಉಪಕ್ರಮವಾದ ಯುದ್ಧದಲ್ಲಿ ಫೈಲೋಕ್ಲೀಸನಿಗೆ ವಿಜಯವಾಗುವುದೆಂದು ಯಾರೂ ಭಾವಿಸಿರಲಿಲ್ಲ. ಪರಾಜಯವಾಗಬಹುದೆಂಬ ಭಯವು ಎಲ್ಲರಿಗೂ ಇತ್ತು. ಆದರೆ ಫೈಲೋಕ್ಲೀಸನು ತನ್ನ ಯೋಧರಿಗೆ ಅಸಾಧಾರಣವಾದ ಉತ್ಸಾಹವನ್ನು ಹುಟ್ಟಿಸಿ, ತಾನೇ ಮುಂದಾಳಾಗಿ, ಶತ್ರುಗಳ ಮೇಲೆ ಬಿದ್ದನು. ಇವನ ಸತ್ಯಸಂಧತೆಯಿಂದ ಇವನಿಗೆ ಜಯಲಕ್ಷ್ಮಿಯು ಪ್ರಸನ್ನಳಾದಳು. ಶತ್ರುಗಳು ನಿಗ್ರಹಿಸಲ್ಪಟ್ಟರು. ಫೈಲೋ

ಕ್ಲೀಸನಿಗೆ ವಿಜಯವಾಯಿತು. ಸೈನ್ಯದವರೆಲ್ಲರೂ ಫೈಲೋಕ್ಲೀಸನನ್ನು ದೇವರಂತೆ ಕಾಣುತ್ತಿದ್ದರು. ಈ ಬರ್ತರಫ್‌ನ ಹುಕುಂನ್ನು ತೋರಿಸಿದರೆ, ಇದನ್ನು ಅವನು ನಿರಾಕರಿಸಿ, ಇಡುಮಿಾನಿಯುಸ್ಸನನ್ನೂ, ಪ್ರಾಟಿಸಿಲನನ್ನೂ, ತನ್ನನ್ನೂ ಲಕ್ಷ್ಯ ಮಾಡದೆ ಹೋಗುವ ಸಂಭವವು ಬರಬಹುದೆಂದು ಟಿಮೋಕ್ರೆಟೀಸನು ಯೋಚಿಸಿದನು. ಫೈಲೋಕ್ಲೀಸನನ್ನು ಸಂಹರಿಸಿದರೆ, ಪ್ರಾಟಿಸಿಲನೂ, ತಾನೂ ಸೇರಿ ನನ್ನನ್ನು ಆಳಬಹುದೆಂದು ತಿಳಿದುಕೊಂಡರು.

ಫೈಲೋಕ್ಲೀಸನ ಸಮಿಾಪದಲ್ಲಿ ಯಾವಾಗ್ಯೂ ಇರುತ್ತಿದ್ದ ಇಬ್ಬರು ಊಳಿಗದವರನ್ನು ಸ್ನೇಹಮಾಡಿಕೊಂಡು, ಅವರಿಗೆ ಭಾರಿ ರುಷುವತ್ತನ್ನು ಕೊಟ್ಟು, ತನ್ನ ವಶಪಡಿಸಿಕೊಂಡು, ಫೈಲೋಕ್ಲೀಸನ ಭೇಟಿಗೆ ಹೋದನು. ಫೈಲೋಕ್ಲೀಸನು ಇವನನ್ನು ತನ್ನ ಕೊಠಡಿಗೆ ಬರಮಾಡಿಕೊಂಡನು. ಕೊಠಡಿಯನ್ನು ಪ್ರವೇಶಿಸಿದ ಕೂಡಲೆ, ಟಿಮೋಕ್ರೆಟೀಸನು ಒಂದು ಭರ್ಜಿಯಿಂದ ಫೈಲೋಕ್ಲೀಸನನ್ನು ತಿವಿದನು. ಟಿಮೋಕ್ರೆಟೀಸನಿಂದ ರುಷುವತ್ತು ತೆಗೆದುಕೊಂಡಿದ್ದ ತನ್ನ ಸ್ವಂತ ಭೃತ್ಯರೂ ಕೂಡ ತನ್ನನ್ನು ಕೊಲ್ಲುವ ವಿಷಯದಲ್ಲಿ ಟಿಮೋಕ್ರೆಟೀಸನಿಗೆ ಸಹಾಯ ಮಾಡಿದರು. ಈ ಮೂರು ಜನಗಳಿಂದಲೂ ತನ್ನನ್ನು ರಕ್ಷಿಸಿಕೊಳ್ಳುತ್ತಾ, ಘಟ್ಟಿಯಾಗಿ ಕೂಗಲು, ಇವನ ಭೃತ್ಯರು ಬಾಗಿಲು ಒಡೆದು ಒಳಕ್ಕೆ ನುಗ್ಗಿ, ಈ ಮೂವರು ದುರಾತ್ಮರನ್ನು ದಸ್ತಗಿರಿ ಮಾಡಿದರು. ಇವರನ್ನು ಅಲ್ಲಿಯೇ ಸಂಹರಿಸುವುದರಲ್ಲಿದ್ದರು ಆದರೆ ಫೈಲೋಕ್ಲೀಸನು ಹಾಗೆ ಮಾಡದಂತೆ ಆಜ್ಞಾಪಿಸಿದನು. ಪರಾಜಿತನಾದ ಟಿಮೋಕ್ರೆಟೀಸನನ್ನು ಕುರಿತು ಶಾಂತಿಯಿಂದ ಇಂಥಾ ದುಷ್ಕೃತ್ಯಕ್ಕೆ ನೀನು ಏತಕ್ಕೆ ಪ್ರಯತ್ನ ಮಾಡಿದಿ ಎಂದು ಕೇಳಿದನು. ಆಗ ಟಿಮೋಕ್ರೆಟೀಸನು ತನ್ನನ್ನು ಎಲ್ಲಿ ಕೊಲ್ಲಿಸುವನೋ ಎಂಬ ಭಯದಿಂದ ನಾನು ಕೊಟ್ಟಿದ್ದ ಹುಕುಂನ್ನು ಫೈಲೋಕ್ಲೀಸನಿಗೆ ಒಪ್ಪಿಸಿ, ಪ್ರಾಟಿಸಿಲನು ಮಾಡಿದ್ದ ಪಿತೂರಿಗಳನ್ನು ಅವನಿಗೆ ತಿಳಿಸಿ, ಅದರಿಂದ ತನ್ನ ಪ್ರಾಣವನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡಿದನು. ಫೈಲೋಕ್ಲೀಸನಿಗೆ ಮನಸ್ಸು ಕೆಟ್ಟಿತು. ನನ್ನ ದೌರಾತ್ಮ್ಯವು ಅವನಿಗೆ ತುಂಬಾ ಖೇದವನ್ನುಂಟುಮಾಡಿತು. ಟಿಮೋಕ್ರೆಟೀಸನು ನಿರಪರಾಧಿಯೆಂದು ಹೇಳಿ, ಅವನ ಅಪರಾಧವನ್ನು ಮನ್ನಿಸಿ, ಅವನನ್ನು ಕ್ರೀಟ್ ದ್ವೀಪಕ್ಕೆ ಕಳುಹಿಸಿಕೊಟ್ಟನು. ಇವನಿಂದ ಅಧಿಕಾರದ ಚಾರ್ಜು ವಹಿಸುವುದಕ್ಕೆ ನಾನು ಪಾಲಿಮಿಾನೀಸ್ ಎಂಬುವನನ್ನು ಕಳುಹಿಸಿದ್ದೆನು. ಫೈಲೋಕ್ಲೀಸನು ತನ್ನ ಅಧಿಕಾರದ

ಚಾರ್ಜನ್ನು ಅವನಿಗೆ ವಹಿಸಿ, ಸೇಮೊಸ್ ದ್ವೀಪಕ್ಕೆ ಹೊರಟು ಹೋಗಿ, ಅಲ್ಲಿ ಏಕಾಂತವಾಗಿ ಶಾಂತಿಯಿಂದ ಬಡತನದಲ್ಲಿ ತೃಪ್ತನಾಗಿರುವಂತೆ ತಿಳಿಯಬರುತ್ತದೆ ಅಲ್ಲಿ ಕಲ್ಲುಕೆಲಸವನ್ನು ಮಾಡಿಕೊಂಡು ಜೀವಿಸುತ್ತಲಿದಾನೆ. ಪ್ರಪಂಚವೇ ಮೋಸಗಾರರ ಮಯವಾಗಿರುವುದೆಂದು ತಿಳಿದುಕೊಂಡು, ಸರ್ವಸಂಗವನ್ನೂ ಪರಿತ್ಯಾಗ ಮಾಡಿರುತ್ತಾನೆ ಪ್ರಭುಗಳೂ ಕೂಡ ನಂಬಿಕೆಗೆ ಅರ್ಹರಲ್ಲವೆಂಬ ಅಭಿಪ್ರಾಯವು ಇವನಿಗೆ ಉಂಟಾಗಿದೆ. ಇದಕ್ಕೆ ನನ್ನ ದೌರಾತ್ಮ್ಯವೇ ಮುಖ್ಯಕಾರಣ."

ಈ ರೀತಿಯಲ್ಲಿ ಇಡುಮಿಾನಿಯುಸ್ಸನು ಹೇಳಿದನು. ಇದನ್ನು ಕೇಳಿ, ಮೆಂಟರನು ಈ ವಿದ್ಯಮಾನಗಳು ನಿನಗೆ ಗೊತ್ತಾಗಿ ಎಷ್ಟು ಕಾಲವಾಯಿತು ಎಂದು ಕೇಳಿದನು. ಪ್ರಾಟಿಸಿಲನಿಗೂ, ಟಿಮೋಕ್ರೆಟೀಸನಿಗೂ ಪರಸ್ಪರ ದ್ವೇಷವುಂಟಾಗಿ ಅವರಿಬ್ಬರೂ ಒಬ್ಬರ ದೋಷವನ್ನು ಈಗತಾನೇ ಒಬ್ಬರು ಉದ್ಘಾಟಿಸಿರುವರು ಎಂಬದಾಗಿ ಇಡುಮಿಾನಿಯುಸ್ಸನು ಹೇಳಿದನು. ಈ ಇಬ್ಬರು ದುರಾತ್ಮರನ್ನೂ ಏತಕ್ಕೆ ಬರ್ತರಫ್ ಮಾಡಲಿಲ್ಲಾ ಎಂದು ಮೆಂಟರನು ಕೇಳಿದನು. ಅದಕ್ಕೆ ಇಡುಮಿಾನಿಯುಸ್ಸನು ಹೇಳಿದ್ದೇನಂದರೆ:—

"ಇವರು ಬಹಳ ದುಷ್ಟರು. ಬಹಳ ಪ್ರಬಲರು. ಇವರನ್ನು ವಜಾ ಮಾಡಿದರೆ, ನನಗೇ ದೊಡ್ಡ ವಿಪತ್ತನ್ನು ತರುವರು. ದುರಾತ್ಮರ ಕೈಗೆ ಸಿಕ್ಕಿದ ಪ್ರಭುಗಳು ಅವರ ಬಲೆಯಿಂದ ತಪ್ಪಿಸಿಕೊಳ್ಳುವುದು ಕಷ್ಟ. ಯಾರು ಕೇವಲ ದುರಾತ್ಮರೆಂದು ನಾವು ತಿಳಿದುಕೊಂಡಿರುತ್ತೇವೋ ಅವರ ಬಲೆಗಳಿಂದ ನಾವು ತಪ್ಪಿಸಿಕೊಳ್ಳುವುದು ಅಸಾಧ್ಯ. ಹಾಗೆ ತಪ್ಪಿಸಿಕೊಳ್ಳುವ ಪ್ರಯತ್ನವನ್ನು ಮಾಡಿದರೆ, ಅವರು ನಮ್ಮ ಮೂಲೋತ್ಪಾಟನಕ್ಕೆ ಕಾರಣವಾಗುತ್ತಾರೆ. ಪ್ರಾಟಿಸಿಲನು ಬಹಳ ದುರಾತ್ಮನು. ಆದಾಗ್ಯೂ ನನ್ನ ಅಧಿಕಾರವನ್ನೆಲ್ಲಾ ನಾನು ಅವನಿಗೆ ವಹಿಸಿರುತ್ತೇನೆ. ಅವನು ಕೇವಲ ಅಯೋಗ್ಯನು. ಆದಾಗ್ಯೂ ಅವನ ಅಧಿಕಾರದಿಂದ ತಪ್ಪಿಸುವ ಶಕ್ತಿಯು ನನಗಿಲ್ಲ. ಅವನನ್ನು ಬರ್ತರಫ್ ಮಾಡಬೇಕೆಂದು ನಾನು ಪ್ರಯತ್ನ ಮಾಡಿದರೆ, ನನ್ನ ಪ್ರಾಣಕ್ಕೇ ಅಪಾಯ ಬರುವುದು. ಇವನನ್ನು ಬರ್ತರಫ್ ಮಾಡಿದರೆ, ಇವನಿಗಿಂತ ಸಂಪನ್ನರು ನನಗೆ ಸಿಕ್ಕುವುದಿಲ್ಲ ಧರ್ಮಿಷ್ಠರಾದವರು ಪ್ರಪಂಚದಲ್ಲೇ ಇರುವುದಿಲ್ಲ. ಈ ಪ್ರಾಟಿಸಿಲನು ಬಹು ಕಾಲದಿಂದ ತಿಂದು, ತೇಗಿ, ತೃಪ್ತನಾಗಿರುತ್ತಾನೆ. ಇವನ ಕೆಲಸಕ್ಕೆ ಹೊಸಬನನ್ನು ತಂದರೆ, ಅವನು ತೃಪ್ತನಾಗುವುದಕ್ಕೆ ಬಹು ಕಾಲವಾಗುತ್ತದೆ.

ಅದುವರೆಗೂ ನಾನಾವಿಧವಾದ ಕ್ಲೇಶಗಳನ್ನು ನಾನು ಅನುಭವಿಸಬೇಕಾಗುತ್ತದೆ. ಸೇಮಾಸ್ ದ್ವೀಪದಲ್ಲಿ ಫೈಲೋಕ್ಲೀಸನು ಇನ್ನೂ ಬದುಕಿರುವನಲ್ಲಾ ಎಂದು ಪ್ರಾಟಿಸಿಲನು ಸಂತಾಪಪಡುತ್ತಲಿದಾನೆ. ಸತ್ಯವಂತನಾದ ಫೈಲೋಕ್ಲೀಸನಿಗೆ ಇಷ್ಟು ದ್ರೋಹವನ್ನು ಮಾಡಿದ್ದಕ್ಕೋಸ್ಕರ ನಾನೂ ಸಂತಾಪಪಡುತ್ತೇನೆ. ಮಾಡತಕ್ಕದ್ದೇನು ? ಪ್ರಾಟಿಸಿಲನು ಇಷ್ಟು ದುರಾತ್ಮನಾದಾಗ್ಯೂ, ಇನ್ನೂ ಅಧಿಕಾರದಲ್ಲಿರುವನು. ಅನೇಕ ಸಂದರ್ಭಗಳಲ್ಲಿ ಪ್ರಾಟಿಸಿಲನ ತೀರ್ಪುಗಳನ್ನು ನಾನು ರದ್ದುಮಾಡುತ್ತೇನೆ. ನಾನು ಕೋಪಮಾಡಿಕೊಂಡಾಗ ನಾನಾವಿಧವಾದ ಉಪಚಾರಗಳಿಂದ ಅವನು ನನ್ನ ಕೋಪವನ್ನು ಶಮನಮಾಡಿ, ನನ್ನ ಪ್ರಸನ್ನತೆಗೆ ಪಾತ್ರನಾಗುತ್ತಾನೆ. ನಾನು ಪ್ರಭುವಾಗಿದ್ದಾಗ್ಯೂ, ಈ ದುರಾತ್ಮನಿಗೆ ನಾನು ದಾಸನಾಗಿರುತ್ತೇನೆ. ಇವನನ್ನು ಬರ್ತರಫ್ ಮಾಡಿ, ಫೈಲೋಕ್ಲೀಸನನ್ನು ಕರೆಸಿಕೊಳ್ಳಬೇಕೆಂಬ ಯೋಚನೆಯು ಬರುತ್ತದೆ. ಇವನನ್ನು ಬರ್ತರಫ್ ಮಾಡುವುದರಿಂದ ಏನು ವಿಪತ್ತು ಬರುವುದೋ ಎಂಬ ಭಯವು ತೋರುವುದು. ಫೈಲೋಕ್ಲೀಸನನ್ನು ವಾಪಸು ಬರಬೇಕೆಂದು ಕೇಳಿಕೊಂಡರೆ, ಅವನು ತಿರಸ್ಕಾರ ಮಾಡಬಹುದೆಂಬ ಭಯವೊಂದಿರುವುದು. ಈ ಕಾರಣಗಳಿಂದ ಕರ್ತವ್ಯತಾಮೂಢನಾಗಿ ನಾನು ಇರುತ್ತೇನೆ. ನನ್ನ ದುರದೃಷ್ಟಗಳಿಗೆಲ್ಲಾ ಈ ಪ್ರಾಟಿಸಿಲನೇ ಮುಖ್ಯಕಾರಣನು. ಕ್ರೀಟ್ ದ್ವೀಪನಿವಾಸಿಗಳಿಗೂ, ನನಗೂ ಮನಸ್ತಾಪ ಬರುವುದಕ್ಕೆ ಇವನೇ ಕಾರಣಭೂತನು. ಅನೇಕ ಪಾಪಕರ್ಮಗಳನ್ನು ಮಾಡುವುದಕ್ಕೆ ಇವನೇ ಪ್ರೇರಕನಾಗಿದ್ದನು. ನನ್ನ ಮಗನನ್ನು ನಾನು ಕಳೆದುಕೊಂಡದ್ದಕ್ಕೆ ಇವನೇ ಕಾರಣಭೂತನು. ಅಧಿಕಾರವಿರುವಾಗ್ಯೆ, ಜನಗಳು ಉನ್ಮತ್ತರಾಗಿರುತ್ತಾರೆ. ಅಧಿಕಾರವು ತಪ್ಪಿದ ಕೂಡಲೆ ಹೇಡಿಗಳಾಗಿಯೂ, ನೀಚರಾಗಿಯೂ, ತಿರಸ್ಕಾರಕ್ಕೆ ಪಾತ್ರರಾಗಿಯೂ ಆಗುತ್ತಾರೆ. ನೀನು ಬಂದ ಮೇಲೆ ಈ ಪ್ರಾಟಿಸಿಲನು ನಮ್ಮಿಬ್ಬರಿಗೂ ಪರಸ್ಪರ ವೈಮನಸ್ಯವನ್ನು ತಂದುಹಾಕಬೇಕೆಂದು ಎಷ್ಟೋ ಪ್ರಯತ್ನವನ್ನು ಮಾಡಿದನು. ನಮ್ಮಿಬ್ಬರನ್ನೂ ನಾಶಮಾಡುವುದಕ್ಕೆ ಆಗುವುದಿಲ್ಲವೇ ಎಂದು ಇವನು ಯೋಚನೆಯನ್ನು ಮಾಡುತ್ತಲಿದಾನೆ. ದೇವರ ದಯೆಯಿಂದಲೂ, ನಿನ್ನ ಹಿತೋಪದೇಶದಿಂದಲೂ ಈ ದುರಾತ್ಮರ ದುರ್ವಿದ್ಯೆಗಳೆಲ್ಲಾ ನನಗೆ ಸ್ವಲ್ಪಮಟ್ಟಿಗೆ ಗೊತ್ತಾಗುವುದಕ್ಕೆ ಅವಕಾಶವಾಯಿತು. ಇವರ ದೌರಾತ್ಮ್ಯದಿಂದ ಮೋಕ್ಷವನ್ನು ಹೊಂದಬೇಕೆಂಬ ಅಪೇಕ್ಷೆಯು ನನಗೆ ಹುಟ್ಟಿರುವುದು. ಯಾವ ರೀತಿಯಲ್ಲಿ ಮೋಕ್ಷವನ್ನು ಹೊಂದಬೇಕೋ ಅದನ್ನು ಪರ್ಯಾಲೋ

ಚಿಸುತ್ತಲಿದೇನೆ. ಈ ಮೋಕ್ಷಮಾರ್ಗವನ್ನು ತೋರಿಸುವುದಕ್ಕೆ ನೀನು ವಿನಾ ಇನ್ಯಾರಿಂದಲೂ ಆಗುವುದಿಲ್ಲ. ದಯೆಯಿಟ್ಟು ನನ್ನನ್ನು ರಕ್ಷಿಸಬೇಕು." ಈ ಮಾತನ್ನು ಕೇಳಿ, ಮೆಂಟರನು ಹೇಳಿದ್ದೇನಂದರೆ:—

"ಈ ದ್ವೀಪಕ್ಕೆ ನಾನೂ, ಟೆಲಿಮಾಕಸ್ಸನೂ ಬಂದ ಮೇಲೆ ಅನೇಕ ಬದಲಾವಣೆಗಳು ನಡೆದಿರುವುವು. ನೀನು ನಮ್ಮ ಸಲಹೆಯಂತೆ ನಡೆದು, ಬಹಳ ಬದಲಾವಣೆಗಳನ್ನು ಮಾಡಿರುವಿ. ಈ ಭಾಗದಲ್ಲಿ ಪ್ರಾಟೆಸಿಲನು ಹೇಗೆ ನಡೆದುಕೊಳ್ಳುತ್ತಲಿದಾನೆ?" ಈ ಪ್ರಶ್ನೆಗೆ ಇಡುಮಿನಿಯುಸ್ಸನು ಹೇಳಿದ್ದೇನಂದರೆ:—

"ನಿನ್ನನ್ನೂ, ಟೆಲಿಮಾಕಸ್ಸನನ್ನೂ ಕಂಡರೆ ಪ್ರಾಟೆಸಿಲನು ಬಹಳ ಭಯವುಳ್ಳವನಾಗಿದಾನೆ. ನೀವು ಬಂದ ಕೂಡಲೆ, ನಿಮ್ಮ ಮೇಲೆ ನಾನಾವಿಧವಾದ ತಪ್ಪುಗಳನ್ನು ಆಪಾದನೆ ಮಾಡಿದನು. ಅವುಗಳಲ್ಲಿ ಯಾವುದೂ ರುಜುವಾತಾಗಲಿಲ್ಲ. ಅನಂತರ ಇಬ್ಬರು ಪರದೇಶೀಯರನ್ನು ನನ್ನ ಬಳಿಗೆ ಕಳುಹಿಸಿದನು. ಈ ಜನಗಳು ನಿಮ್ಮಿಬ್ಬರ ಮೇಲೂ ಅನೇಕ ದೋಷಗಳನ್ನು ಹೇಳಿರುವರು. ಯೂಲಿಸಸ್ಸನು ಬಹಳ ವಂಚಕನೆಂಬದಾಗಿಯೂ, ಅವನ ಮಗನಾದ ಟೆಲಿಮಾಕಸ್ಸನು ವಂಚನೆಯನ್ನು ಮಾಡುವುದರಲ್ಲಿ ತಂದೆಯನ್ನು ಮೀರಿಸಿರುವನೆಂಬದಾಗಿಯೂ, ನೀನು ಅಭೇದ್ಯವಾದ ಸ್ವಭಾವವುಳ್ಳವನೆಂಬದಾಗಿಯೂ, ಈ ಸಂಸ್ಥಾನಕ್ಕೇ ನೀನು ಮೃತ್ಯುವಾಗುವಿ ಎಂಬದಾಗಿಯೂ, ನೀವು ಯಾವ ದೇಶಕ್ಕೆ ಪ್ರವೇಶಿಸುವಿರೋ ಆ ದೇಶವು ನಾಶವಾಗುವುದೆಂಬದಾಗಿಯೂ ಈ ಜನಗಳು ನನಗೆ ದುರ್ಬೋಧನೆಯನ್ನು ಮಾಡುತ್ತಲಿದಾರೆ. ನಿನ್ನ ಸಲಹೆಗಳಿಂದ ನಾನು ಯಾವ ಯಾವ ಕೆಲಸಗಳನ್ನು ಮಾಡಿರುವೆನೋ ಅವುಗಳೆಲ್ಲಾ ಪರಿಣಾಮದಲ್ಲಿ ಅನರ್ಥಕ್ಕೆ ಹೇತುವಾಗುವುದೆಂದು ಇವರು ಹೇಳುತ್ತಾರೆ. ಜನಗಳಿಗೆ ಸಂಪತ್ತು ಹೆಚ್ಚಿದರೆ, ಅವರು ದುರಹಂಕಾರಿಗಳಾಗುವರೆಂಬದಾಗಿಯೂ, ಹಠೋಟಿ ತಪ್ಪುವರೆಂಬದಾಗಿಯೂ, ತುಂಟರಾಗುವರೆಂಬದಾಗಿಯೂ ಹೇಳುತ್ತಾರೆ. ಜನಗಳು ಉಪಪನ್ನರಾದರೆ, ಪ್ರಭುಗಳ ಶಕ್ತಿಯೂ, ದರ್ಪವೂ ಕಡಮೆಯಾಗುವುದೆಂದು ಇವರು ಹೇಳುತ್ತಲಿದಾರೆ. ಜನಗಳನ್ನು ನಾವು ಪ್ರೀತಿಸಿದರೆ, ನಮ್ಮನ್ನು ಅವರು ಪ್ರೀತಿಸುವರೆಂಬದಾಗಿಯೂ, ದುಷ್ಟನಿಗ್ರಹ, ಶಿಷ್ಟಪರಿಪಾಲನವನ್ನು ಸಮಗ್ರವಾಗಿ ಮಾಡಿದರೆ, ದೇಶವು ತಹಬಂದಿಯಲ್ಲಿರುವುದೆಂಬದಾಗಿಯೂ, ನನಗೆ ತೋರುತ್ತದೆ. ಅನ್ನವಸ್ತ್ರಗಳಿಗೆ ಇಲ್ಲದೆ ತಾಪತ್ರಯ ಪಡುವ ಸ್ಥಿತಿಯಲ್ಲಿ ಜನಗಳನ್ನು ಇಡಬೇಕೆಂಬದಾಗಿಯೂ, ಅನ

ವಸ್ತ್ರಗಳಿಗೆ ನೆಮ್ಮದಿಯಾದರೆ, ಅವರು ನಮ್ಮ ಮಾತುಗಳನ್ನು ಕೇಳು ವುದಿಲ್ಲವೆಂಬದಾಗಿಯೂ ಉಪಪನ್ನತೆಯು ದಂಗೆಗೆ ಕಾರಣವಾಗುವುದೆಂಬದಾಗಿಯೂ ಇವರು ಹೇಳುತ್ತಾರೆ. ಈ ಅಭಿಪ್ರಾಯಗಳೆಲ್ಲಾ ತಪ್ಪು ಅಭಿಪ್ರಾಯಗಳೆಂದು ಇವರಿಗೆ ನಾನು ತೋರಿಸುತ್ತಲಿದೇನೆ. ನನ್ನ ಮನೋಭಾವವನ್ನು ತಿಳಿದುಕೊಂಡು, ನನ್ನ ಮುಖೋಲ್ಲಾಸವಾಗಲೆಂದು ಪ್ರಾಟಿಸಿಲನೂ, ಟಿನೋಕ್ರೈಟೀಸನೂ ಇಬ್ಬರೂ ನನಗೋಸ್ಕರ ಪ್ರಜಾರಂಜನೆಯಲ್ಲಿ ಪರಾಯಣರಾಗುತ್ತಲಿದಾರೆ. ದುರಾತ್ಮರಲ್ಲಿ ಸ್ನೇಹವು ಇರುವುದು ಅಪೂರ್ವ. ಪ್ರಾಟಿಸಿಲನೂ, ಟಿನೋಕ್ರೈಟೀಸನೂ ಒಬ್ಬರಿಗೊಬ್ಬರು ದ್ರೋಹಮಾಡಬೇಕೆಂದು ಪ್ರವರ್ತಿಸಿ, ಇಬ್ಬರೂ ಒಬ್ಬರ ಮೇಲೆ ಒಬ್ಬರು ಚಾಡಿಗಳನ್ನು ಹೇಳುತ್ತಲಿದಾರೆ. ಇವರ ಪರಸ್ಪರ ಜಗಳದಿಂದ ಇವರ ದೌರಾತ್ಮ್ಯವು ಗೊತ್ತಾಯಿತು." ಈ ಮಾತನ್ನು ಕೇಳಿ, ಇಡುಮಿನಿಯಸ್ಸನಿಗೆ ಮೆಂಟರು ಹೇಳಿದ್ದೇನಂದರೆ:—

"ಪ್ರಭುಗಳಾದವರು ಯಮಧರ್ಮರಾಯನಂತೆ ದುಷ್ಟನಿಗ್ರಹ, ಶಿಷ್ಟಪರಿಪಾಲನೆಯಲ್ಲಿ ನಿರ್ಭೀತರಾಗಿರಬೇಕು. ಮಾಡಬಾರದ ಕೆಲಸಗಳನ್ನು ಮಾಡುವುದಕ್ಕೆ ಭಯಪಡಬೇಕೇ ಹೊರತು, ದುಷ್ಟನಿಗ್ರಹವನ್ನು ಮಾಡುವುದರಲ್ಲಿ ನಿನಗೆ ಭಯವೇಕೆ ? ರಾಜದ್ರೋಹಿಗಳ ವಿಷಯದಲ್ಲಿ ಭಯಪಡಬಹುದೇ ? ಅವರ ದ್ರೋಹವೇ ಅವರನ್ನು ಸಂಹರಿಸುವುದಕ್ಕೆ ವಜ್ರಾಯುಧಪ್ರಾಯವಾಗಿರುವುದು, ಅತಂಹ ವಜ್ರಾಯುಧದ ಏಟಿನಿಂದ ಅವರನ್ನು ರಕ್ಷಿಸುವ ಪ್ರಯತ್ನವನ್ನು ನೀನು ಏತಕ್ಕೆ ಮಾಡಬೇಕು ? ಅವರ ದ್ರೋಹದಿಂದ ಭಯವುಂಟಾಗುವುದೆಂದು ನೀನು ಭಾವಿಸಿರುವುದು ತಪ್ಪು. ಅವರು ಮಾಡಿರುವ ದ್ರೋಹವನ್ನು ಪ್ರಕಾಶಮಾಡು. ಅದರಿಂದಲೇ ಅವರು ಹತರಾಗುವರು. ಅವರಿಗೆ ಬೇರೆ ಶಿಕ್ಷೆಯು ಆವಶ್ಯಕವಿಲ್ಲ. ದೌರ್ಬಲ್ಯವನ್ನು ತೋರಿಸಬೇಡ. ಸಂಶಯಾತ್ಮನಾಗಬೇಡ. ಪ್ರಾಟಿಸಿಲನ ದೌರಾತ್ಮ್ಯವು ಗೊತ್ತಾಗುವವರೆಗೂ ಅವನು ಪ್ರಾಮಾಣಿಕನೆಂದು ತಿಳಿದುಕೊಂಡು ಅವನಿಗೆ ಸರ್ವಾಧಿಕಾರವನ್ನೂ ಒಪ್ಪಿಸಿದ್ದೆ. ಅವನು ದ್ರೋಹಿಯೆಂದು ತಿಳಿದ ಮೇಲೆ ಅವನಲ್ಲಿ ನೀನು ಏತಕ್ಕೆ ನಂಬಿಕೆಯನ್ನಿಡಬೇಕು ? ಪ್ರಜೆಗಳು ಕಂದಾಯವನ್ನು ಕೊಟ್ಟು, ಅದಕ್ಕೆ ಸರಿಯಾದ ಪ್ರತಿಫಲವನ್ನು ನಿರೀಕ್ಷಿಸುತ್ತಾರೆ. ಧರ್ಮವಾದ ಪ್ರತಿಫಲವನ್ನು ಅವರಿಗೆ ಉಂಟುಮಾಡುವುದು ನಿನಗೆ ಹೇಗೆ ಕರ್ತವ್ಯವೋ, ನಿನ್ನ ಸಚಿವರೇ ಮೊದಲಾದ ಸರ್ವರಿಗೂ ಕರ್ತವ್ಯ. ನೀನು ನಿನ್ನ ಕರ್ತವ್ಯವನ್ನು ಮಾಡ

ದಿದ್ದರೆ, ಪ್ರಜೆಗಳಿಗೆ ನೀನು ದ್ರೋಹಿಯಾಗುವಿ. ನಿನ್ನ ಸಚಿವರೇ ಮೊದಲಾದವರು ಅವರ ಕರ್ತವ್ಯವನ್ನು ಮಾಡದಿದ್ದರೆ, ಅವರು ಪ್ರಜೆಗಳಿಗೆ ದ್ರೋಹಿಗಳಾಗುವರು. ಪ್ರಜೆಗಳ ಉಪ್ಪನ್ನು ತಿಂದು, ಅವರಿಗೆ ಎರಡು ಬಗೆಯುವುದು ನ್ಯಾಯವಲ್ಲ. ಅದು ದೊಡ್ಡ ಅಪರಾಧ. ಇಂಥಾ ಅಪರಾಧಕ್ಕೆ ನಿನ್ನಂಥಾ ಪ್ರಾಜ್ಞರು ಗುರಿಯಾಗಬಹುದೇ? ದುಷ್ಟನಿಗ್ರಹವು ನಿನಗೆ ಮುಖ್ಯ ಕರ್ತವ್ಯ. ಪ್ರಭುಗಳಿಗೆ ಶಿಷ್ಟಪರಿಪಾಲನೆಗಿಂತಲೂ ದುಷ್ಟನಿಗ್ರಹವು ದೊಡ್ಡ ಕರ್ತವ್ಯ. ಈ ಕರ್ತವ್ಯವನ್ನು ಮಾಡುವುದರಲ್ಲಿ ತುಂಬಾ ದೌರ್ಬಲ್ಯವನ್ನು ನೀನು ತೋರಿಸಿರುತ್ತೀಯೆ. ಪ್ರಾಟಿಸಿಲನು ಮಹಾ ಪಾಪಿಯೆಂದು ನೀನು ಹೇಳಿರುವಿ. ಪಾಪಿಷ್ಠರಾಗಿದ್ದುಕೊಂಡು, ಒಂದೊಂದು ಒಳ್ಳೇ ಕೆಲಸಗಳನ್ನು ಮಾಡತಕ್ಕವರಿರುವುದೂ ಉಂಟು. ಕೆಲಸ ಮಾಡತಕ್ಕವರ ಮನೋಭಾವವು ಪರಿಶುದ್ಧವಾಗಿರುವುದೇ ಇಲ್ಲವೇ ಎಂಬುವುದನ್ನು ಪರಿಶೀಲಿಸಿ ನೋಡಬೇಕು. ಧರ್ಮಬುದ್ಧಿಯಿಂದ ಮಾಡಿದ ಕೆಲಸದಿಂದ ಬಾಧಕ ಉಂಟಾದರೆ, ಆ ಕೆಲಸವನ್ನೂ ಕೂಡ ಮಾಡಬಾರದು. ಅಧರ್ಮವನ್ನು ಮಾಡಬೇಕೆಂಬ ಉದ್ದೇಶದಿಂದ ಕೆಲಸಮಾಡಿ, ಅದರಿಂದ ಅಧರ್ಮ ಉಂಟಾದರೆ, ಅವರು ಕೇವಲ ಪಾಪಿಷ್ಠರೆನ್ನಿಸಿಕೊಳ್ಳುವರು. ಧರ್ಮಿಷ್ಠರಂತೆ ಅಭಿನಯಿಸುತ್ತಾ, ಅಧರ್ಮವನ್ನು ಮಾಡತಕ್ಕವರು ಮಹಾಪಾಪಿಗಳು. ಅಪರಾಧಗಳನ್ನು ಕ್ಷಮಿಸುವುದಿಲ್ಲವೆಂದು ನಂಬಿಕೆಯುಂಟಾಗುವಂತೆ ಮಾಡುವುದು ನಿನ್ನ ಕರ್ತವ್ಯ. ವಿಷವನ್ನು ಸೇವಿಸಿದವರು ಹೇಗೆ ಸಾಯುವರೋ, ಅಮೃತವನ್ನು ಸೇವಿಸಿದವರು ಹೇಗೆ ಆಯುರಾರೋಗ್ಯವನ್ನು ಹೊಂದುವರೋ ಹಾಗೆ ಪಾಪಮಾಡಿದವರು ಪಾಪದ ಫಲವನ್ನೂ, ಪುಣ್ಯಮಾಡಿದವರು ಪುಣ್ಯದ ಫಲವನ್ನೂ ಅನುಭವಿಸುವಂತೆ ನೀನು ಮಾಡಬೇಕು. ದಾಕ್ಷಿಣ್ಯಪರವಶನಾಗಿ, ದುಷ್ಟನಿಗ್ರಹದಲ್ಲಿ ನೀನು ಪರಾಙ್ಮುಖನಾದರೆ, ದುಷ್ಟರು ಅತ್ಯಂತ ದುಷ್ಟರಾಗುವರು. ನೀನು ಅತ್ಯಂತ ದುರ್ಬಲನಾಗುವಿ. ಪಾಪಕರ್ಮಗಳು ಹೆಚ್ಚುವುವು. ನಿನ್ನ ಪ್ರಾಮಾಣಿಕತೆಯಲ್ಲಿ ನಿನ್ನ ಪ್ರಜೆಗಳಿಗೆ ನಂಬಿಕೆಯು ಹೋಗುವುದು. ಅಕೃತ್ರಿಮವಾದ ರಾಜಭಕ್ತಿವಿಶ್ವಾಸಗಳಿಗೆ ನ್ಯೂನತೆಯುಂಟಾಗುವುದು. ಅಧಿಕಾರ ಭಯದಿಂದ ಜನರು ಮೌನವನ್ನು ಅವಲಂಬಿಸಿದಾಗ್ಯೂ, ಅಂತರಂಗದಲ್ಲಿ ನೀನು ನಿನ್ನ ಪದವಿಗೆ ಅನರ್ಹನೆಂದು ತಿಳಿದುಕೊಳ್ಳುವರು. ಈ ಭಾವನೆಯು ಪ್ರಥಮತಃ ಪ್ರಚ್ಛನ್ನವಾ

ಗಿದ್ದಾಗ್ಯೂ, ಸಂಕಟದಿಂದಲೂ, ಕೋಪದಿಂದಲೂ ಪ್ರಜೆಗಳು ಪರವಶರಾದಾಗ, ನಿರ್ಭಯವಾಗಿ ನಿನ್ನ ದೋಷಗಳನ್ನು ಉದ್ಘಾಟಿಸುವರು. ಪ್ರಾಮಾಣಿಕನಾಗಿಯೂ, ಸತ್ಯಸಂಧನಾಗಿಯೂ, ಧರ್ಮಿಷ್ಠನಾಗಿಯೂ ಇರುವ ಫೈಲೋಕ್ಲೀಸನು ಸೇವಾಸ್ ದ್ವೀಪದಲ್ಲಿ ದುರ್ದೆಸೆಯಲ್ಲಿರುವುದೂ, ದುರಾತ್ಮಶಿಖಾಮಣಿಯಾದ ಪ್ರಾಟಿಸಿಲನು ನಿನಗೆ ಮುಖ್ಯಸಚಿವನಾಗಿರುವುದೂ ಇವೆರಡೂ ನಿನ್ನ ದೌರ್ಬಲ್ಯವನ್ನು ತೋರಿಸುವುವು. ಮೈನಾಸನ ಸಂತತಿಯಲ್ಲಿ ಹುಟ್ಟಿದ ನಿನಗೆ ಈ ದೌರ್ಬಲ್ಯವು ಹೇಗೆ ಉಂಟಾಯಿತು ? ಪ್ರಾಟಿಸಿಲನು ದುರಾತ್ಮಶಿಖಾಮಣಿಯೆಂದು ನೀನೇ ಹೇಳುವಿ. ಅವನಿಗೆ ಅಪ್ರತಿಹತ ವಾದ ಅಧಿಕಾರವನ್ನು ಕೊಟ್ಟಿರುವಿ. ಇದು ಧರ್ಮವೇ ? ಕೇವಲ ಪಾಮರರಾ ದವರೂ ಕೂಡ ಹೀಗೆ ಮಾಡುವುದಿಲ್ಲ. ಇಂಥಾ ದೌರ್ಬಲ್ಯವು ನಿನಗೆ ಬರಬಹುದೇ? ನಿನ್ನ ಪದವಿಯು ಎಂಥಾದ್ದು ? ನಿನ್ನ ನಡತೆಯು ಹೇಗಿರುವುದು ? ದುರಾ ತ್ಮರ ಕೈಗೊಂಬೆಯಾಗಿ ಇದ್ದರೆ, ಪ್ರಜೆಗಳಿಗೆ ನಿನ್ನಲ್ಲಿ ಪ್ರೀತಿಯೂ, ಭಕ್ತಿಯೂ ಇರುವುದೇ ? ದುರಾತ್ಮರ ದುಷ್ಟ ಸಲಹೆಗಳಿಂದ ನಡೆಯುತಕ್ಕವರು ಶೀಘ್ರ ದಲ್ಲಿಯೇ ಅಧೋಗತಿಗೆ ಬರುವುದಿಲ್ಲವೇ ? ಪ್ರಾಟಿಸಿಲನೂ, ಟಿಮೋಕ್ರೈಟೀ ಸನೂ ಮಾಡಿರುವ ಅಪರಾಧಗಳು ಜ್ಯುಡಿಷಲ್ ವಿಚಾರಣೆಗೆ ಗುರಿಮಾಡಲ್ಪಡಲಿ. ಈ ಸಂಸ್ಥಾನದ ಪ್ರಜೆಗಳ ಪ್ರತಿನಿಧಿಗಳಿಗೆ ಈ ವಿದ್ಯಮಾನಗಳು ತಿಳಿಸಲ್ಪಡಲಿ. ಅವ ರ ಅಭಿಪ್ರಾಯಗಳು ತೆಗೆದುಕೊಳ್ಳಲ್ಪಡಲಿ. ಇವರು ಅಪರಾಧಿಗಳೆಂದು ಗೊತ್ತಾ ದರೆ, ಮಹಾಜನಗಳ ಅಭಿಪ್ರಾಯಕ್ಕೆ ಅನುಸಾರವಾದ ಶಿಕ್ಷೆಯು ಈ ದುರಾತ್ಮರಿಗೆ ಮಾಡಲ್ಪಡಲಿ. ಫೈಲೋಕ್ಲೀಸನು ಪ್ರಾಮಾಣಿಕನೆಂದು ಗೊತ್ತಾದರೆ, ಸಚಿವ ಪದವಿಯನ್ನು ಅಲಂಕರಿಸುವುದಕ್ಕೆ ಅವನು ನಿನ್ನಿಂದಲೂ, ನಿನ್ನ ಪ್ರಜೆಗಳಿಂದಲೂ ಪ್ರಾರ್ಥಿಸಲ್ಪಡಲಿ. ಈ ರೀತಿಯಲ್ಲಿ ಮಾಡುವುದು ನಿನಗೆ ಮುಖ್ಯ ಕರ್ತವ್ಯ. ಮೈ ನಾಸನ ಧರ್ಮಗಳು ಈ ರೀತಿಯಲ್ಲಿರುವುವು" ಎಂದು ಮೆಂಟರನು ಹೇಳಿದನು. ಇದು ಸಾಧುವಾದದ್ದೆಂದು ಆ ರೀತಿಯಲ್ಲಿ ನಡೆಯುವುದಕ್ಕೆ ಇಡುಮೀನಿಯಸ್ಸನು ಒಪ್ಪಿದನು.

---

# ಹದಿಮೂರನೆಯ ಅಧ್ಯಾಯ.



ಈ ಹಿತೋಪದೇಶದಂತೆ ತನ್ನ ದೇಶದ ಪ್ರತಿನಿಧಿಗಳ ಪ್ರಜೆಗಳನ್ನು ಕರೆಸಿ, ಫೈಲೋಕ್ಲೀಸ್, ಪ್ರಾಟಿಸಿಲಾಸ್, ಟಿಮೋಕ್ರೆಟೀಸ್ ಈ ಮೂರು ಜನಗಳ ವೃತ್ತಾಂತಗಳನ್ನೆಲ್ಲಾ ಅವರಿಗೆ ಶ್ರುತಪಡಿಸಿ, ಇವರ ಮೊಕದ್ದಮೆಯನ್ನು ನೀವು ವಿಚಾರಣೆ ಮಾಡಿ, ನಿಮ್ಮ ಅಭಿಪ್ರಾಯವನ್ನು ಕೊಡಬೇಕೆಂದು ಇಡುಮಿನಿಯಸ್ಸನು ಹೇಳಿದನು. ಅವರೆಲ್ಲರೂ ಸೇರಿ ಧರ್ಮಶಾಸ್ತ್ರವಿಶಾರದರಾದ ಪಂಚಾಯಿತರನ್ನು ನಿಯಮಿಸಿ, ವಿಚಾರಣೆಯನ್ನು ಮಾಡಿ, ತೀರ್ಮಾನವನ್ನು ಹೇಳಬೇಕೆಂದು ಅವರಿಗೆ ಆಜ್ಞೆಮಾಡಿದನು. ಅನಂತರ ಫೈಲೋಕ್ಲೀಸನನ್ನು ಸಚಿವ ಪದವಿಗೆ ಒಪ್ಪುವಂತೆ ಮಾಡುವುದಕ್ಕೋಸ್ಕರ ಇಡುಮಿನಿಯಸ್ಸನೂ, ಮೆಂಟರೂ ಆ ಸಂಸ್ಥಾನದಲ್ಲಿ ಮುಖಂಡರಾದ ಪ್ರಜೆಗಳೆಲ್ಲರೂ ಸೇಮಾಸ್ ದ್ವೀಪಕ್ಕೆ ಹೋಗಿ ಫೈಲೋಕ್ಲೀಸನನನ್ನು ಪುನಃ ಸಚಿವ ಪದವಿಯನ್ನು ವಹಿಸಬೇಕೆಂದು ಪ್ರಾರ್ಥಿಸಿದರು. ಆಗ ಫೈಲೋಕ್ಲೀಸನು ಹೇಳಿದ್ದೇನಂದರೆ:—

"ನನ್ನನ್ನು ಸೇನಾನಾಯಕಪದವಿಯಿಂದ ನೀನು ಬರ್ತರಫ್ ಮಾಡಿದಾಗಲೇ ಇನ್ನುಮೇಲೆ ಯಾರ ಸೇವೆಯನ್ನೂ ಮಾಡುವುದಿಲ್ಲವೆಂದು ನಾನು ಪ್ರತಿಜ್ಞೆ ಮಾಡಿದೆನು. ಆದುದರಿಂದ ನನಗೆಈ ಸಚಿವಪದವಿಯು ಆವಶ್ಯಕವಿಲ್ಲ. ಈ ವಿಷಯದಲ್ಲಿ ನನ್ನ ಅನಂಗೀಕಾರವನ್ನು ಕ್ಷಮಿಸು" ಎಂದು ಹೇಳಿದನು. ಇಡುಮಿನಿಯಸ್ಸನು ಮಹಾಜನಗಳ ಸನ್ನಿಧಿಯಲ್ಲಿ ಮೆಂಟರನನ್ನು ನೋಡಿ ಹೇಳಿದ್ದೇನಂದರೆ:—

"ಎಲೈ ಮೆಂಟರೇ ನಾನು ಈತನಿಗೆ ಮಾಡಿದ ಅಪರಾಧವು ಬಲವಾದದ್ದು. ಇವನು ನನ್ನ ಪ್ರಾರ್ಥನೆಯನ್ನೂ, ಮಹಾಜನಗಳ ಪ್ರಾರ್ಥನೆಯನ್ನೂ, ಪಂಚಾಯಿತರ ಪ್ರಾರ್ಥನೆಯನ್ನೂ ತಿರಸ್ಕರಿಸುವುದೇನಾಶ್ಚರ್ಯವಲ್ಲ. ನಾನೇ ಫೈಲೋಕ್ಲೀಸಾಗಿ, ಫೈಲೋಕ್ಲೀಸನೇ ನಾನಾಗಿದ್ದರೆ, ನಾನು ಮಂತ್ರಿಪದವಿಯನ್ನು ತಿರಸ್ಕರಿಸುತ್ತಿದ್ದೆನು. ಅದು ಹಾಗಿರಲಿ. 'ನಾನು ಪ್ರಭುವು, ಐಶ್ವರ್ಯಮದವೂ, ಅಧಿಕಾರಮದವೂ ಪ್ರಭುಗಳಿಗೆ ನಿಸರ್ಗವಾದದ್ದು. ಫೈಲೋಕ್ಲೀಸನು ಶಾಂತಮೂರ್ತಿಯು. ಈತನು ಜಿತೇಂದ್ರಿಯನು. ಇವನು ಕಾಮಕ್ರೋಧಾದಿಗಳನ್ನು ಜಯಿಸಿರುವನು. ಈ ಪ್ರಜೆಗಳು ಇವನಿಗೆ ಯಾವ ದ್ರೋಹವನ್ನೂ ಮಾಡಿರುವುದಿಲ್ಲ. ಸಮಸ್ತ ದ್ರೋಹಕ್ಕೂ ನಾನು ಕಾರಣಭೂತನು. ನನ್ನ ಮಾತನ್ನು ನಿರಾಕರಿಸಲಿ. ನನ್ನ ಸೇವೆಯನ್ನು ಈತನು ಮಾಡಲವಶ್ಯಕವಿಲ್ಲ. ಪ್ರಜೆಗಳ ಸೇವೆಯನ್ನು ಮಾಡಬೇ

ಕೆಂದು ಅವರು ಪ್ರಾರ್ಥಿಸುತ್ತಾರೆ. (ಅತ್ಯಂತ ಭಕ್ತಿಪುರಸ್ಸರವಾಗಿ ಪ್ರಾರ್ಥಿಸುತ್ತೇವೆ ಎಂದು ಮಹಾಜನಗಳು ಹೇಳಿದರು.) ಇವರ ಪ್ರಾರ್ಥನೆಯನ್ನು ತಿರಸ್ಕರಿಸುವುದು ಫೈಲೋಕ್ಲೀಸನಿಗೆ ಧರ್ಮವಲ್ಲ. ನನ್ನ ಅಪರಾಧವನ್ನು ಕ್ಷಮಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಪ್ರಜೆಗಳಿಗೋಸ್ಕರ ನನ್ನ ಅಪರಾಧವನ್ನು ಮನ್ನಿಸಿ, ಪುನಃ ಸಚಿವಪದವಿಯನ್ನು ವಹಿಸುವಂತೆ ನೀನು ಸಿಫಾರ್ಸು ಮಾಡಬೇಕು." ಈ ರೀತಿಯಲ್ಲಿ ಇಡುಮಿನಿಯುಸ್ಸನು ಹೇಳಲು, ಫೈಲೋಕ್ಲೀಸನನ್ನು ಕುರಿತು ಮೆಂಟರು ಹೇಳಿದ್ದೇನಂದರೆ:—

"ಎಲೈ ಫೈಲೋಕ್ಲೀಸನೇ, ಇಡುಮಿನಿಯುಸ್ಸನು ದುರದೃಷ್ಟವಂತನು. ಪ್ರಭುತ್ವವು ನಿಷಾದ್ರವ್ಯದಂತೆ ಸಾಮಾನ್ಯ ಜನಗಳನ್ನು ಉನ್ಮತ್ತರನ್ನಾಗಿ ಮಾಡುತ್ತದೆ. ಈ ಇಡುಮಿನಿಯುಸ್ಸನು ಮೈನಾಸನ ವಂಶಸ್ಥನಾದಾಗ್ಯೂ, ಸಾರಾಸಾರ ವಿಚಾರವಿಹೀನನಾಗಿ, ಸಜ್ಜನನನ್ನು ದುರ್ಜನನೆಂಬದಾಗಿಯೂ, ದುರ್ಜನರನ್ನು ಸಜ್ಜನರೆಂಬದಾಗಿಯೂ ತಿಳಿದುಕೊಂಡು, ಉನ್ಮತ್ತತೆಯಿಂದ ನಡೆದದ್ದಕ್ಕೋಸ್ಕರ ನಾನು ತುಂಬಾ ವಿಷಾದಿಸುತ್ತೇನೆ. ಪ್ರಭುಗಳು ಸ್ತುತಿಪಾಠಕರ ಮಾತಿಗೆ ಮರುಳಾಗಿ, ಮಾಡಬಾರದ ಕೆಲಸಗಳನ್ನು ಮಾಡುವರು. ಇಡುಮಿನಿಯುಸ್ಸನು ಬುದ್ಧಿಶಾಲಿಯಾದಾಗ್ಯೂ ವಿವೇಕಹೀನರಂತೆ ನಡೆದಿರುವನು. ಇದು ನನಗೆ ತುಂಬಾ ವ್ಯಸನವನ್ನುಂಟುಮಾಡಿರುವುದು. ಪ್ರಾಟಿಸಿಲನ ಸ್ತುತಿಪಾಠಗಳನ್ನು ಕೇಳಿ ಇವನು ಪರವಶನಾದನು. ಪ್ರಾಮಾಣಿಕನಾದ ನಿನ್ನನ್ನು ಕೆಟ್ಟವನೆಂದು ಭಾವಿಸಿದನು. ದುರಾತ್ಮರಾದ ಪ್ರಾಟಿಸಿಲನನ್ನೂ, ಟಿಮೋಕ್ರೇಟೀಸನನ್ನೂ ಆಪ್ತರೆಂದು ಭಾವಿಸಿದನು. ಇದಕ್ಕೆ ತಕ್ಕ ಫಲವು ಇವನಿಗೆ ಆಯಿತು. ನಿನಗೆ ಇಡುಮಿನಿಯುಸ್ಸನು ಬಹಳ ಅನ್ಯಾಯವನ್ನು ಮಾಡಿರುವನು. ನೀನು ಅವನ ಬಾಲ್ಯದಿಂದಲೂ ಅವನನ್ನು ಬಲ್ಲೆ. ಅವನು ಶ್ರೀಮಂತನು. ಬಾಲ್ಯದಿಂದಲೂ ಸ್ತುತಿಪಾಠಕರು ಗುಣಗಳನ್ನು ಅವನಲ್ಲಿ ಆರೋಪಿಸಿ, ಅವನನ್ನು ಸ್ತೋತ್ರಮಾಡುತ್ತಲಿರುವರು. ಪ್ರಪಂಚದಲ್ಲಿ ಯಾವುದೂ ಅವನಿಗೆ ಸ್ವಸ್ವರೂಪದಲ್ಲಿ ಕಾಣುವುದಿಲ್ಲ ಎಲ್ಲರೂ ದಾಸಾನುದಾಸರಾಗಿರುವರು. ಎಲ್ಲರೂ ಇವನ ಪ್ರಸನ್ನತೆಗೆ ಪಾತ್ರರಾಗಬೇಕೆಂದು ಮನಸ್ವೀ ಹೊಗಳುವರು. ಇವನ ದೋಷಗಳನ್ನು ಇವನಿಗೆ ತೋರಿಸತಕ್ಕವರೇ ಅಪೂರ್ವವಾಗಿದ್ದರು. ಇಂಥಾ ಸಂದರ್ಭಗಳಲ್ಲಿ ನಿನ್ನ ನಡತೆಯು ಇತರರ ನಡತೆಯಂತೆ ಇರಲಿಲ್ಲ. ಇವನು ತಪ್ಪುಮಾಡಿದಾಗ ನೀನು

ಅಸಮಾಧಾನವನ್ನು ತೋರಿಸುತ್ತಿರುವಿ. ಗುರುಗಳು ಶಿಷ್ಯನನ್ನು ಹೇಗೆ ಕಾಣುವರೋ ಹಾಗೆ ನೀನು ಇವನನ್ನು ಕಾಣುತ್ತಿದ್ದೆ. ಏಕಾಂತವಾಗಿ ಇವನಿಗೆ ವಾಗ್ದಂಡನೆಯನ್ನು ಮಾಡುತ್ತಿದ್ದೆ. ಅವನು ಮಾಡತಕ್ಕ ಸಾಮಾನ್ಯ ತಪ್ಪುಗಳನ್ನೂ ಕೂಡ ನೀನು ಕ್ಷಮಿಸುತ್ತಿರಲಿಲ್ಲ. ಪ್ರಾಟಿಸಿಲನೂ, ಟಿಮೋಕ್ರೆಟೀಸನೂ ಇವನ ಮುಖೋಲ್ಲಾಸವನ್ನು ಮಾಡುವುದಕ್ಕೋಸ್ಕರ ನಾನಾವಿಧವಾದ ಸ್ತುತಿಗಳನ್ನು ಮಾಡುತ್ತಿದ್ದರು. ಕೇವಲ ವಂಚಕರಾಗಿದ್ದರು. ಪ್ರಾಮಾಣಿಕನಾದ ನಿನ್ನನ್ನು ಸಂಹರಿಸುವ ಪ್ರಯತ್ನವನ್ನೂ ಮಾಡಿದರು. ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳಿಂದ ಇವನನ್ನು ಸುಪ್ರೀತನನ್ನಾಗಿ ಮಾಡಿಕೊಂಡು, ಸಜ್ಜನರನ್ನೆಲ್ಲಾ ಅನಿರ್ವಚನೀಯವಾದ ಸಂಕಟಕ್ಕೆ ಗುರಿಮಾಡಿದರು. ಇದು ಇಡುಮಿಾನಿಯಸ್ಸನ ತಪ್ಪಾಗಿರುವುದು. ಅವನಿಗೆ ಪ್ರಾಟಿಸಿಲನೂ, ಟಿಮೋಕ್ರೆಟೀಸನೂ ಎಷ್ಟು ದುರಾತ್ಮರೋ, ನೀನು ಎಷ್ಟು ಪ್ರಾಮಾಣಿಕನೋ ಅದು ಈಗ ಗೊತ್ತಾಗಿರುವುದು. ನಿನಗೆ ತಾನು ಮಾಡಿದ ಅಪರಾಧಗಳಿಗೋಸ್ಕರ ಅವನು ವ್ಯಸನಪಡುತ್ತಲಿದಾನೆ. ಅವನು ಮನಃಪೂರ್ವಕವಾಗಿ ನಿನಗೆ ದ್ರೋಹವನ್ನು ಮಾಡಲಿಲ್ಲ. ಪ್ರಾಟಿಸಿಲನೂ, ಟಿಮೋಕ್ರೆಟೀಸನೂ ಪ್ರಾಮಾಣಿಕರೆಂಬದಾಗಿಯೂ, ನೀನು ಪ್ರಭುತ್ವವನ್ನೇ ಆಕ್ರಮಿಸುವುದಕ್ಕೆ ಯತ್ನಿಸುತ್ತೀಯೆ ಎಂಬದಾಗಿಯೂ ಈ ದುರಾತ್ಮರು ಹೇಳಿದ ಮಾತನ್ನು ನಂಬಿದನು. ಹೀಗೆ ನಂಬಿ, ನಿನ್ನಲ್ಲಿ ಇಲ್ಲದ ದೋಷಗಳನ್ನಾರೋಪಿಸಿ, ನಿನ್ನ ಅಧಿಕಾರದಿಂದ ನಿನ್ನನ್ನು ನಿವೃತ್ತಿಮಾಡಿದನು. ತಾನು ಮಾಡಿದ್ದೆಲ್ಲಾ ತಪ್ಪಾದದ್ದೆಂದು ಈಗ ಇವನಿಗೆ ಗೊತ್ತಾಯಿತು. ತಾನು ಮಾಡಿದ ಅಪರಾಧಕ್ಕೆ ನೀನು ವಿಧಿಸುವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಕ್ಕೆ ಅವನು ಸಿದ್ಧನಾಗಿರುತ್ತಾನೆ. ದುರಾತ್ಮರ ವಂಚನೆಗೆ ಒಳಪಟ್ಟು, ಅವನು ನಿನ್ನಲ್ಲಿ ಅಪ್ರೀತಿಯನ್ನು ತೋರಿಸಿದನೇ ಹೊರತು, ಮನಃಪೂರ್ವಕವಾಗಿ ಅವನು ಅಪರಾಧವನ್ನು ಮಾಡಿರುವುದಿಲ್ಲ. ಇಂಥಾ ತಪ್ಪು ಕ್ಷಮಿಸಲ್ಪಡುವುದಕ್ಕೆ ಅರ್ಹವಾದದ್ದಲ್ಲವೇ ? ತಾನು ಮೋಸಹೋದೆನೆಂದು ತಿಳಿದ ಕೂಡಲೆ, ಮಾಡಿದ ತಪ್ಪನ್ನೂ, ಅನ್ಯಾಯವನ್ನೂ ಒಪ್ಪಿಕೊಂಡು, ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಕ್ಕೆ ಒಪ್ಪುವುದು ಪ್ರಭುತ್ವ ಮಾಡತಕ್ಕವರಲ್ಲಿ ಸುಗುಣವಲ್ಲವೇ ? ಈ ವಿಷಯವನ್ನು ಸಾವಧಾನವಾಗಿ ಯೋಚಿಸು. ನಾವೆಲ್ಲರೂ ಮನುಷ್ಯರು, ನಾವು ಸರ್ವಜ್ಞರಲ್ಲ, ನಾವು ಎಷ್ಟೋ ತಪ್ಪುಗಳನ್ನು ಮಾಡುತ್ತೇವೆ. ತಲೆ ತಗಲಿದ ಮೇಲೆ ಬುದ್ಧಿ ಬರುವುದು. ತಲೆ ತಗಳಿದ ಮೇ

ಲೂ ಎಷ್ಟೋ ಜನಗಳಿಗೆ ಬುದ್ಧಿ ಬರುವುದಿಲ್ಲ. ಅಂಥಾವರಿಗಿಂತಲೂ ಇಡುಮಿಾ ನಿಯಸ್ಸನು ಹೆಚ್ಚಾದ ಸುಗುಣವುಳ್ಳವನಲ್ಲವೇ? ಅವನ ಅಪರಾಧಗಳನ್ನು ಕ್ಷಮಿಸು. ಅವನು ಹೇಳುವುದನ್ನು ಸಾವಧಾನವಾಗಿ ಕೇಳು. ಅವನು ಯೋಗ್ಯನೆಂದು ತೋರಿದರೆ, ಭಕ್ತಿಯಿಂದ ಅವನು ಒಪ್ಪಿಸುವ ಸಚಿವ ಪದವಿಯನ್ನು ಪರಿಗ್ರಹಿಸು. ಈಗ ಅವನಿಗೆ ತಲೆಯು ತಗುಲಿರುವುದು. ದುರಾತ್ಮರ ಸಹವಾಸದಿಂದುಂಟಾಗ ತಕ್ಕ ಕಷ್ಟಗಳು ಗೊತ್ತಾಗಿರುವುವು. ಹಿಂದೆ ಮಾಡಿದಷ್ಟು ತಪ್ಪುಗಳನ್ನು ಅವನು ಮುಂದೆ ಮಾಡುವುದಿಲ್ಲ. ನಿನ್ನ ಪ್ರಾಮಾಣಿಕತೆಯು ಅವನಿಗೆ ಚೆನ್ನಾಗಿ ಗೊತ್ತಾಗಿರುವುದು. ನಿನ್ನ ಮೇಲೆ ಯಾರು ಏನು ಹೇಳಿದಾಗ್ಯೂ ಅದನ್ನು ಅವನು ನಂಬುವುದಿಲ್ಲ. ಅಕೃತ್ರಿಮವಾದ ಭಕ್ತಿಯನ್ನು ನಿನ್ನಲ್ಲಿಟ್ಟು, ದೇಶಸೇವೆಯನ್ನು ನಿನ್ನಂಥಾ ಸತ್ಪುರುಷರ ಮೂಲಕ ಮಾಡಿಸಬೇಕೆಂಬ ಅಭಿಲಾಷೆಯು ಅವನಿಗೆ ಪರಿಪೂರ್ಣವಾಗಿ ಉಂಟಾಗಿರುವುದು. ನಿರ್ಭಯವಾಗಿ ದುಷ್ಟನಿಗ್ರಹ, ಶಿಷ್ಟಪರಿಪಾಲನೆಯನ್ನು ಮಾಡುವುದರಲ್ಲಿ ಅವನು ಬದ್ಧಸಂಕಲ್ಪನಾಗಿರುವನು. ಅವನ ಅಪರಾಧವನ್ನು ಕ್ಷಮಿಸಿ, ಈ ಸಂಸ್ಥಾನದ ಮಂತ್ರಿಪದವಿಯನ್ನು ಸ್ವೀಕರಿಸು. ಪ್ರಾಟಿಸಿಲನೂ, ಟಿನೋಕ್ರೆಟೀಸನೂ ನಿನ್ನ ವಿಷಯದಲ್ಲಿ ಅಪರಾಧವನ್ನು ಮಾಡಿರುವರು. ನ್ಯಾಯವಾದ ದಂಡನೆಗಳನ್ನು ಸೂಚಿಸು. ಇಡುಮಿಾನಿಯಸ್ಸನು ಅದನ್ನು ಜಾರಿಗೆ ತರುವನು. ಈ ದುರಾತ್ಮರೂ ಮತ್ತು ಇಡುಮಿಾನಿಯಸ್ಸನೂ ನಿನಗೆ ಅನ್ಯಾಯವನ್ನು ಮಾಡಿರುವರು. ಈ ದೇಶದ ಪ್ರಜೆಗಳು ನಿನಗೇನಾದರೂ ಅನ್ಯಾಯವನ್ನು ಮಾಡಿರುವರೇ? ಅವರು ನಿನ್ನಲ್ಲಿ ಅಕೃತ್ರಿಮವಾದ ಭಕ್ತಿಯುಳ್ಳವರಾಗಿರುವುದಿಲ್ಲವೇ? ಅವರನ್ನು ಧರ್ಮದಿಂದ ಪರಿಪಾಲಿಸುವುದಕ್ಕೆ ಸಹಾಯ ಮಾಡುವುದಿಲ್ಲವೆಂದು ಹೇಳಿದರೆ, ಅದನ್ನು ದೇವರು ಮೆಚ್ಚುವನೇ? ಮನುಷ್ಯರು ಮೆಚ್ಚುವರೇ? ನಿನ್ನ ಮನಸ್ಸು ಮೆಚ್ಚುವುದೇ? ಈ ವಿಷಯಗಳನ್ನು ಚೆನ್ನಾಗಿ ಪರ್ಯಾಲೋಚಿಸು. ಇಡುಮಿಾನಿಯಸ್ಸನು ಸಚಿವ ಪದವಿಯನ್ನು ಪರಿಗ್ರಹಿಸಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತಾನೆ ಮಹಾಜನಗಳು ಇದನ್ನು ಅನುಮೋದಿಸುತ್ತಾರೆ. ನಾನು ಇದನ್ನು ಪರಿಪೋಷಿಸುತ್ತೇನೆ. ನಮ್ಮ ಪ್ರಾರ್ಥನೆಗಳನ್ನೆಲ್ಲಾ ನಿರಾಕರಿಸುವುದು ನಿನಗೆ ಧರ್ಮವಲ್ಲ. ಲೋಕದಲ್ಲಿ ಎಲ್ಲಾ ಪುಣ್ಯಗಳಿಗಿಂತಲೂ ಪರೋಪಕಾರರೂಪವಾದ ಪುಣ್ಯವೇ ಸರ್ವೋತ್ತಮವಾದದ್ದು. ಇಂಥಾ ಪುಣ್ಯವು ನಿನ್ನ ಹಸ್ತಗತವಾಗಿದೆ. ಇದನ್ನು ತಿರಸ್ಕರಿಸುವುದು ನಿನಗೆ ಶ್ರೇಯಸ್ಕರವಲ್ಲ. ಈ ವಿಷಯಗಳನ್ನೆಲ್ಲಾ ಚೆನ್ನಾಗಿ ಪರ್ಯಾಲೋಚಿಸಿ, ಧನ್ಯತೆಯು ಉಂಟಾಗುವಂತೆ ನಡೆದುಕೊ."

ಈ ರೀತಿಯಲ್ಲಿ ಮೆಂಟರು ಹೇಳಿದನು. ಕೂಡಲೆ ಇಡುಮಿಾನಿಯಸ್ಸನು ಫೈಲೋಕ್ಲೀಸನನ್ನು ಕುರಿತು ಹೇಳಿದ್ದೇನಂದರೆ:—"ಎಲೈ ಫೈಲೋಕ್ಲೀಸನೇ, ಈ ದೇಶಕ್ಕೆ ಪ್ರಭುವಾದ ನಿನ್ನ ಸತ್ಯಕ್ಕೂ, ಧರ್ಮಕ್ಕೂ ದಾಸನಾಗಿ ನಿನ್ನನ್ನು ವಂದಿಸುವೆನು. ನಾನು ಮಾಡಿದ ಅಪರಾಧಗಳನ್ನೆಲ್ಲಾ ಮೆಂಟರು ಹೇಳಿದಂತೆ ನಾನು ವಂಚಿತನಾಗಿ ಮಾಡಿರುವೆನೇ ಹೊರತು, ಮನಃಪೂರ್ವಕವಾಗಿ ಮಾಡಿರುವುದಿಲ್ಲ. ಇದಕ್ಕೆ ದೇವರು ಹೇಗೋ ಹಾಗೆ ನನ್ನ ಮನಸ್ಸೂ ಸಾಕ್ಷಿಯಾಗಿರುವುದು. ಸಾವಧಾನದಿಂದ ಪರ್ಯಾಲೋಚಿಸಿದರೆ, ಇದು ಸತ್ಯವೆಂದು ನಿನಗೆ ತೋರಬಹುದು. ಪ್ರಾಟೆಸಿಲನೂ, ಟಿನೋಕ್ರೆಟೀಸನೂ ಅಸಾಧಾರಣವಾದ ರಾಜದ್ರೋಹವನ್ನೂ, ಪ್ರಜಾದ್ರೋಹವನ್ನೂ ಮಾಡಿರುವರು. ಸತ್ಯಕ್ಕೂ, ಧರ್ಮಕ್ಕೂ ಕಳಂಕವನ್ನುಂಟುಮಾಡಿರುವರು. ಸತ್ಯಸಂಧನಾಗಿಯೂ, ಧರ್ಮಿಷ್ಠನಾಗಿಯೂ ಇರತಕ್ಕ ನಿನ್ನನ್ನು ಕೊಲ್ಲುವುದಕ್ಕೂ ಪ್ರಯತ್ನ ಮಾಡಿದರು. ಈ ವಿದ್ಯಮಾನಗಳೆಲ್ಲಾ ನನಗೆ ತಿಳಿಯಬಂತು. ನೀನು ಸಚಿವ ಪದವಿಯನ್ನು ಪರಿಗ್ರಹಿಸು. ಈ ದುರಾತ್ಮರು ಪಂಚಾಯಿತರ ವಿಚಾರಣೆಗೆ ಗುರಿಮಾಡಲ್ಪಡಲಿ. ಅವರ ಅಭಿಪ್ರಾಯಗಳು ತೆಗೆದುಕೊಳ್ಳಲ್ಪಡಲಿ. ಅವರಿಗೆ ತಕ್ಕ ಶಿಕ್ಷೆಯು ಸೂಚಿಸಲ್ಪಡಲಿ. ನೀನು ಅದನ್ನು ಪರ್ಯಾಲೋಚಿಸು. ನಿನ್ನ ಸಲಹೆಯನ್ನು ಕೊಡು. ಆ ಸಲಹೆಯೇ ವೇದವಾಕ್ಯಾಗಿದ್ದರೆ ಹೇಗೋ ಹಾಗೆ ನಾನು ಅದನ್ನು ಜಾರಿಗೆ ತರುತ್ತೇನೆ. ಮೆಂಟರು ಹೇಳಿದ ಪ್ರತಿಯೊಂದು ಅಭಿಪ್ರಾಯವನ್ನೂ ನಾನು ಅನುಮೋದಿಸುತ್ತೇನೆ. ನಿನ್ನ ಪ್ರಜೆಗಳ ಅಭಿಪ್ರಾಯವೂ ಇದೇ ರೀತಿಯಲ್ಲಿರುವುದು."

ಈ ರೀತಿಯಲ್ಲಿ ಇಡುಮಿಾನಿಯಸ್ಸನು ಹೇಳಲು, ಫೈಲೋಕ್ಲೀಸನು ಮೆಂಟರನನ್ನೂ, ಇಡುಮಿಾನಿಯಸ್ಸನನ್ನೂ ಕುರಿತು ಹೇಳಿದ್ದೇನಂದರೆ:—"ನನಗೆ ಬುದ್ಧಿ ಬಂದಾರಭ್ಯ ನನ್ನ ಕಾಲವನ್ನೂ, ಶಕ್ತಿಯನ್ನೂ ಈ ದೇಶಸೇವೆಗಾಗಿ ವಿನಿಯೋಗಿಸಿದೆನು. ಈ ಸೇವೆಯಿಂದುಂಟಾದ ಕ್ಲೇಶಗಳಿಂದ ನಾನು ದುರ್ಬಲನಾಗಿರುತ್ತೇನೆ. ನಾನು ಯಾರಿಗೆ ಉಪಕಾರ ಮಾಡಬೇಕೆಂದು ಪ್ರಯತ್ನ ಮಾಡಿದೆನೋ ಅಂಥವರ ಪೈಕಿ ಕೆಲವರ ಅಪಕಾರದಿಂದಲೂ, ಕೆಲವರ ಔದಾಸೀನ್ಯದಿಂದಲೂ ನನ್ನ ದೌರ್ಬಲ್ಯವು ಹೆಚ್ಚಾಗಿರುವುದು. ಈ ದೇಶವನ್ನು ರಕ್ಷಿಸಬೇಕೆಂದು ಕಳೆದ 20 ವರ್ಷಗಳಿಂದ ನಾನು ಬಹಳ ಸಾಹಸ ಮಾಡಿದೆನು. ಆದಾಗ್ಯೂ ನನ್ನ ಪ್ರಯತ್ನವು ಸಫಲವಾಗಲಿಲ್ಲ. ಪ್ರಾಟೆಸಿಲನೇ ಮೊದಲಾದವರ ಸಲಹೆಗಳಿಗೆ ಹೆಚ್ಚು ಗೌರವವು ಕೊಡ

ಲ್ಪಟ್ಟಿತು. ಅನಿರ್ವಚನೀಯವಾದ ಹಿಂಸೆಗೆ ಗುರಿಮಾಡಲ್ಪಟ್ಟವರಿಗೆ ಗೋಣಗುಟ್ಟುವುದಕ್ಕೂ, ಕಣ್ಣೀರು ಸುರಿಸುವುದಕ್ಕೂ ಅವಕಾಶವಾಗಲಿಲ್ಲ. ಪ್ರಿಯವಾದಿಗಳಾದ ದುರಾತ್ಮರ ಪ್ರಾಬಲ್ಯವು ಹೆಚ್ಚಿತು. ಪಥ್ಯವಾದ ಪ್ರಿಯವಚನಗಳು ಇಡುಮಿನಿಯಸ್ಸನಿಗೆ ವಿಷದಂತೆ ಪರಿಣಮಿಸಿದವು. ಕೇವಲ ದುರ್ಬಲನಾದಮೇಲೆ ಇವನ ಮನೋಭಾವದಲ್ಲಿ ವ್ಯತ್ಯಾಸ ಉಂಟಾಗಿರುವುದು. ಕೆಟ್ಟ ಮೇಲೆ ಬುದ್ಧಿಬಂದರೂ, ಅಟ್ಟಮೇಲೆ ಒಳೆ ಉರಿದರೂ ಪ್ರಯೋಜನವೇನಾದರೂ ಇರುವುದೇ ? ನನ್ನ ದೇಹಶಕ್ತಿಯೂ ಕಡಮೆಯಾಯಿತು. ಬುದ್ಧಿಶಕ್ತಿಯೂ ಮಂದವಾಯಿತು, ಈಗ ನಾನು ಸಚಿವ ಪದವಿಯನ್ನು ವಹಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ವೃದ್ಧನಾದ ನನ್ನನ್ನು ಸಚಿವ ಪದವಿಯನ್ನು ಪರಿಗ್ರಹಿಸುವುದಕ್ಕೆ ಬಲಾತ್ಕರಿಸಬೇಡ" ಎಂದು ಹೇಳಿ, ಇಡುಮಿನಿಯಸ್ಸನ ಕಡೆಗೆ ತಿರುಗಿ, "ಎಲೈ ಇಡುಮಿನಿಯಸ್ಸನೇ, ಪ್ರಾಟಿಸಿಲನ ದೌರಾತ್ಮ್ಯವನ್ನು ತಿಳಿದುಕೊಳ್ಳುವುದಕ್ಕೆ ನಿನಗೆ 20 ವರ್ಷಗಳು ಅವಧಿಯು ಬೇಕಾಯಿತು. ಈಗ ನಿನಗೆ ಬುದ್ಧಿಯು ಬಂದಿರುವುದು. ನಿನ್ನ ಸೇವೆಯನ್ನು ಮಾಡುವುದಕ್ಕೆ ನನಗೆ ಶಕ್ತಿಯು ಕಡಮೆಯಾಯಿತು. ಈ ಪದವಿಗೆ ನಾನು ಅರ್ಹನಲ್ಲ. ನನ್ನಿಂದ ಈ ಕೆಲಸ ಮಾಡುವುದಕ್ಕೆ ಸಾಧ್ಯವಿಲ್ಲ. ಈ ಪದವಿಯನ್ನು ತಿರಸ್ಕರಿಸಿದೆನೆಂದು ವ್ಯಸನಪಡಬೇಡ. ಇದನ್ನು ತಿರಸ್ಕರಿಸುವುದರಲ್ಲಿ ನಾನು ಮಾಡುವ ಅಪರಾಧವನ್ನು ಕ್ಷಮಿಸು. ಈ ಸಂಸ್ಥಾನದ ಮಂತ್ರಿಪದವಿಗೆ ವೈನಾಸನಿಗೆ ಸಮಾನನಾದವನು ನಿನ್ನ ಮಿತ್ರನಾಗಿರುವನು. ನಿನ್ನಲ್ಲಿ ಅವನ ಪ್ರೀತಿಯು ಪರಿಪೂರ್ಣವಾಗಿರುವುದು. ಇವನೇ ಮೆಂಟರು. ಇವನು ಮನುಷ್ಯರಂತೆ ಕಾಣುವನು. ಇವನ ಮಾತುಗಳನ್ನು ಕೇಳಿದರೆ, ಇವನು ದೇವರ ಅವತಾರವಾಗಿರಬಹುದೆಂದು ತೋರುತ್ತದೆ. ಇಂಥಾ ಮಹನೀಯನು ಸಿಕ್ಕಿರುವಾಗ, ಕೇವಲ ಪಾಮರನಾಗಿಯೂ, ಅಜ್ಞಾನಿಯಾಗಿಯೂ ಇರುವ ನನಗೆ ಸಚಿವ ಪದವಿಯನ್ನು ಕೊಡುವುದು ಧರ್ಮವಲ್ಲ. ಸಚಿವ ಪದವಿಯು ಬಹಳ ಜವಾಬ್ದಾರಿಯುಳ್ಳದ್ದು. 'ರಾಜನೇ ಕಾಲಕ್ಕೆ ಕಾರಣನು' ಎಂಬ ವಚನವನ್ನು ನೀನು ಕೇಳಿರಬಹುದು. ಪ್ರಾಯಕವಾಗಿ ರಾಜರು ಪರತಂತ್ರರು. ಅವರಿಗೆ ಸಜ್ಜನರ ಸಹವಾಸವು ದೊರೆತರೆ ಸಜ್ಜನರಾಗುವರು. ದುರ್ಜನರ ಸಹವಾಸವು ದೊರೆತರೆ ದುರ್ಜನರಾಗುವರು. ನಿನ್ನ ರಾಜ್ಯವನ್ನು ಪರಿಪಾಲನೆ ಮಾಡುವುದು ಕಷ್ಟವಲ್ಲ. ನೀನು ದುರಾತ್ಮರ ಸಹವಾಸಕ್ಕೆ ಬೀಳದಂತೆ ಮಾಡುವುದು ಬಹಳ ಕಷ್ಟ.

ನಾನು ಜಿತೇಂದ್ರಿಯನಲ್ಲ. ಕೋಪತಾಪಗಳನ್ನು ನಿಗ್ರಹಿಸಿದವನಲ್ಲ. ನೀನು ಪ್ರಭುವಾಗಿದ್ದಾಗ್ಯೂ, ನಾನು ನಿನ್ನ ಸೇವಕನಾಗಿದ್ದಾಗ್ಯೂ, ನೀನು ಸತ್ಯವನ್ನೂ, ಧರ್ಮವನ್ನೂ ಬಿಟ್ಟು ನಡೆದರೆ, ನನಗೆ ಕೋಪವು ಬರುವುದು. ನೀನು ಪ್ರಭುವಾಗಿದ್ದಾಗ್ಯೂ, ನಿನ್ನ ಮೇಲೂ ಕೋಪವನ್ನು ಮಾಡಿಕೊಳ್ಳುತ್ತೇನೆ. ಕೋಪವೂ, ಸಾರಾಯಿಯೂ, ಉನ್ಮತ್ತತೆಯೂ ಇವುಗಳೆಲ್ಲಾ ಒಂದಕ್ಕೊಂದು ಸಹೋದರಭಾವವುಳ್ಳವುಗಳು. ಕೋಪ ಬಂದ ಕೂಡಲೆ ನನಗೆ ಜ್ವರಬಂದಂತಾಗುವುದು. ಆರೋಗ್ಯವು ತಪ್ಪುವುದು. ಅಕಾಲ ಮರಣ ಒದಗುವ ಸಂದರ್ಭವು ಬಂದರೂ ಬರಬಹುದು. ಇಂಥಾ ಅವಸ್ಥೆಯಲ್ಲಿರತಕ್ಕ ನನ್ನ ಸೇವೆಯನ್ನೇಕೆ ಅಪೇಕ್ಷಿಸುವೆ? ಸರ್ವೋತ್ತಮನಾದ ಮೆಂಟರನ ಸಚಿವ ಪದವಿಯನ್ನು ಪ್ರಾರ್ಥಿಸಿ, ಧನ್ಯತೆಯನ್ನು ಪಡೆ. ಪರಿಣಾಮಾವಸ್ಥೆಯಲ್ಲಾದರೂ ಇವನ ಸಹಾಯವನ್ನು ನೀನು ಹೊಂದಿದರೆ, ನಿನ್ನ ಸಂಸ್ಥಾನದಲ್ಲಿ ಸತ್ಯವೂ, ಧರ್ಮವೂ ರೂಢಮೂಲವಾಗುವುವು, ಧರ್ಮಯುಗವು ಆವಿರ್ಭವಿಸುವುದು. 'ರಾಜಾಕಾಲಸ್ಯ ಕಾರಣಂ' ಎಂಬ ವಚನವು ಅನ್ವರ್ಥವಾಗುವುದು."

ಈ ರೀತಿಯಲ್ಲಿ ಫೈಲೋಕ್ಲೀಸನು ಹೇಳಿದನು. ಅಲ್ಲಿದ್ದ ಮಹಾಜನಗಳೆಲ್ಲಾ ಇವನ ಸಲಹೆಯನ್ನು ಕೇಳಿ ಆನಂದಪರವಶರಾಗಿ ತಮ್ಮ ಸಮ್ಮತಿಯನ್ನು ಪ್ರದರ್ಶನ ಮಾಡಿದರು. ಇಡುಮಿನಿಯಸ್ಸನು ಇದು ಸಾಧುವಾದದ್ದೆಂದು ಮೆಂಟರನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಈ ಫೈಲೋಕ್ಲೀಸನ ಸಲಹೆಯನ್ನು ನೆರವೇರಿಸಬೇಕೆಂದು ಮೆಂಟರನನ್ನು ಪ್ರಾರ್ಥಿಸಿದನು. ಈ ಮಾತುಗಳನ್ನು ಕೇಳಿ, ಮೆಂಟರು ಹೇಳಿದ್ದೇನೆಂದರೆ:—

"ಫೈಲೋಕ್ಲೀಸನಿಗೂ, ನಿಮಗೂ ನನ್ನ ವಂದನೆಯನ್ನು ಸಮರ್ಪಿಸುತ್ತೇನೆ. ಫೈಲೋಕ್ಲೀಸನು ಹೇಳಿದ್ದನ್ನು ನೀವೆಲ್ಲರೂ ಒಪ್ಪಿರುವಿರಿ. ಇದಕ್ಕಾಗಿ ನಾನು ತುಂಬಾ ವಿಷಾದಿಸುತ್ತೇನೆ. ಸ್ವಧರ್ಮಗಳಲ್ಲಿ ನ್ಯೂನತೆ ಇದ್ದಾಗ್ಯೂ, ಪರಧರ್ಮಾವಲಂಬನಕ್ಕಿಂತ ಸ್ವಧರ್ಮಾವಲಂಬನವು ಶ್ರೇಯಸ್ಕರವಾದದ್ದೆಂದು ಮೈನಾಸನೇ ಮೊದಲಾದ ಧರ್ಮಶಾಸ್ತ್ರಜ್ಞರು ವಿಧಾಯಕ ಮಾಡಿರುವರು. ಇದು ನಿಮಗೆ ತಿಳಿಯದ ಅಂಶವಲ್ಲ. ದತ್ತಪುತ್ರನಿಗೆ ಇರುವ ಪಿತೃಭಕ್ತಿಗಿಂತಲೂ ಔರಸನ ಪಿತೃಭಕ್ತಿಯು ಅಕೃತ್ರಿಮವಾದದ್ದೆಂದು ಹಿರಿಯರು ಹೇಳುವರು. ಅದೂ ನಿಮಗೆ ತಿಳಿ

ಯದ ವಿಷಯವಲ್ಲ. ಫೈಲೋಕ್ಲೀಸನು ಈ ದೇಶದಲ್ಲಿ ಹುಟ್ಟಿದವನು, ಈ ದೇಶದಲ್ಲಿ ಬೆಳೆದವನು, ಈ ದೇಶೀಯರ ನಡೆನುಡಿಗಳನ್ನೂ, ಗುಣಾತಿಶಯಗಳನ್ನೂ ಬಲ್ಲವನು. ಈ ದೇಶದ ಜನಗಳಿಗೂ, ಪ್ರಭುಗಳಿಗೂ ತೊಂದರೆಯುಂಟಾದರೆ, ಅದು ಇವನಿಗೂ ತೊಂದರೆಯಾಗಿ ಪರಿಣಮಿಸುವುದು. ಇವನ ಬಂಧು, ಮಿತ್ರ, ಪುತ್ರ, ಕಳತ್ರಾದಿಗಳೆಲ್ಲಾ ಈ ದೇಶೀಯರು. ಅವರಿಗೆ ಬಾಧಕವಾದೀತೆಂಬ ಭಯದಿಂದಲಾದರೂ ಇವನು ಸತ್ಯದಿಂದಲೂ, ಧರ್ಮದಿಂದಲೂ ನಡೆಯಬೇಕಾಗುತ್ತದೆ. ಈ ಗುಣಾತಿಶಯಗಳಲ್ಲಿ ಯಾವುವೂ ನನ್ನಲ್ಲಿರುವುದಿಲ್ಲ. ನಾನು ಪರದೇಶದವನು, ನನಗೆ ಈ ದೇಶದಲ್ಲಿ ಭೂಮಿ, ಕಾಣಿ, ಬಂಧುಗಳು, ಮಿತ್ರರು ಯಾರೂ ಇರುವುದಿಲ್ಲ. ಕೇವಲ ಸತ್ಯವಂತನಾಗಿಯೂ, ಧರ್ಮಿಷ್ಠನಾಗಿಯೂ ಇರುವುದಕ್ಕೆ ಸಾಧಕವಾದ ಸಂಕಲೆಗಳು ನನಗೆ ಯಾವುವೂ ಹಾಕಲ್ಪಟ್ಟಿಲ್ಲ. ಕೇವಲ ಪಾರಮಾರ್ಥಿಕತೆಯಿಂದ ನಾನು ನಿನ್ನ ಸೇವೆಯನ್ನೂ, ಈ ದೇಶೀಯರ ಸೇವೆಯನ್ನೂ ಮಾಡಬೇಕು. ಅಂಥಾ ಪಾರಮಾರ್ಥಿಕತೆಯು ಲಭ್ಯವಾಗುವುದೆಂಬ ನಂಬಿಕೆಯು ನಿಮಗಿದ್ದಾಗ್ಯೂ, ಫೈಲೋಕ್ಲೀಸನಿಗಿರುವಂತೆ ಈ ದೇಶದ ಅನುಭವವು ನನಗಿರುವುದಿಲ್ಲ. ನನ್ನ ಲೋಕವ್ಯವಹಾರಜ್ಞಾನವನ್ನು ನೋಡಿ, ನೀವು ಮೋಸಹೋಗಿರುವಿರಿ. ಫೈಲೋಕ್ಲೀಸನೂ ಮೋಸಹೋಗಿರುವನು. ಈ ಸಂಸ್ಥಾನದ ಕೋಟ್ಯಂತರ ಜನಗಳ ಇಹಪರಸೌಖ್ಯಗಳು ಸಚಿವಾಯತ್ತವಾಗಿರುವುವು. ನಿಮ್ಮ ಕ್ಷೇಮಚಿಂತೆಯಲ್ಲಿ ಫೈಲೋಕ್ಲಿಸನಿಗಿರತಕ್ಕ ಆಸಕ್ತಿಯೂ, ಉತ್ಸಾಹವೂ ನನಗಿರುವುದಿಲ್ಲ. ಈತನು ಬಹಳ ಧರ್ಮಿಷ್ಠನು, ಕೇವಲ ನಿಸ್ಪೃಹನು, ನಿಮ್ಮ ಕ್ಷೇಮಕ್ಕೋಸ್ಕರ ಸರ್ವಸ್ವವನ್ನೂ ತ್ಯಾಗಮಾಡಿ, ಅಸಾಧಾರಣವಾದ ವೈರಾಗ್ಯವನ್ನು ಧರಿಸಿ, ಸೇಮಾಸ್ ದ್ವೀಪದಲ್ಲಿ ಕೃಷಿಯಿಂದ ಜೀವಿಸುತ್ತಿದ್ದದ್ದು ನಿಮಗೆ ಗೊತ್ತಾಗಿರುವುದು. ಅನೇಕ ವರ್ಷಗಳಿಂದ ದುರ್ಮಾರ್ಗಪ್ರವರ್ತನ ಪ್ರತಿಭಟನಕ್ಕೂ ಗುರಿಯಾಗಿ, ಪರಿಣಾಮದಲ್ಲಿ ಸತ್ಯವೂ, ಧರ್ಮವೂ ಗೆಲ್ಲುವುದೆಂಬ ನಂಬಿಕೆಯಿಂದ ಇವನು ನಿಮ್ಮ ಸೇವೆಯನ್ನು ಮಾಡಿರುತ್ತಾನೆ. ತನಗಾದ ಅನ್ಯಾಯದಿಂದ ಇವನ ಮನಸ್ಸು ಕೆಟ್ಟಿರುವುದು. ಇವನ ದೇಹಶಕ್ತಿಯೂ, ಬುದ್ಧಿಶಕ್ತಿಯೂ ಇವನ ವೈರಾಗ್ಯದಿಂದ ಹೀನಸ್ಥಿತಿಗೆ ಬಂದಿರುವುವು. ಪ್ರಭುವಿನ ಪ್ರೀತಿಯೂ, ಪ್ರಜೆಗಳ ಪ್ರೀತಿಯೂ ಅಮೃತದಂತೆ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ನೀವು ಈತನಲ್ಲಿ ಪರಿಪೂರ್ಣವಾದ ಪ್ರೀತಿಯನ್ನಿಟ್ಟು, ಇವನು ಪುನಃ ಮಂತ್ರಿಪದವಿಯನ್ನು ಸ್ವೀಕರಿಸುವಂತೆ ಮಾಡಿ

ದರೆ, ನಿಮ್ಮ ಪ್ರೀತಿರೂಪವಾದ ಅಮೃತಸೇವನೆಯಿಂದ ಇವನ ದೇಹಶಕ್ತಿಯೂ, ಬುದ್ಧಿಶಕ್ತಿಯೂ ಪರಾಕಾಷ್ಠದೆಸೆಗೆ ಬರುವುವು. ಇದರಿಂದ ಪ್ರಭುವಿಗೂ, ಈತನಿಗೂ, ನಿಮಗೂ, ಎಲ್ಲರಿಗೂ ಮಂಗಳವಾಗುವುದು. ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸಿ, ನೀವೆಲ್ಲರೂ ನಿಮ್ಮ ನಿಮ್ಮ ಕರ್ತವ್ಯಗಳನ್ನು ಮಾಡಿ ಧನ್ಯರಾಗಬೇಕು. ಪರದೇಶೀಯನಾದ ನನ್ನನ್ನು ಈ ಪದವಿಗೆ ನಿಯಮಿಸುವುದು ಶುದ್ಧ ತಪ್ಪು. ದೇವರ ಅವತಾರವಾದಾಗ್ಯೂ ಪರದೇಶೀಯನು ಸಚಿವಪದವಿಗೆ ಅನರ್ಹನೆಂದು ನನಗೆ ತೋರುತ್ತದೆ. ನಿಮ್ಮ ಭವಿಷ್ಯ ಕ್ಷೇಮವು ನಿಮ್ಮ ಹಸ್ತಗತವಾಗಿರುವುದು. ಈ ಕ್ಷೇಮಕ್ಕೆ ವಿರೋಧವಾದ ಕಾರ್ಯಗಳನ್ನು ಅವಲಂಬಿಸಬೇಡಿ. ''

ಈ ರೀತಿಯಲ್ಲಿ ಮೆಂಟರನು ಇಡುಮಿಾನಿಯಸ್ಸನಿಗೂ, ಅವನ ಪ್ರಜೆಗಳಿಗೂ ಉಪದೇಶ ಮಾಡಿದನು. ಮೆಂಟರು ಹೇಳುವುದು ಸಾಧುವಾದ ಹಿತೋಪದೇಶವೆಂದು ಸರ್ವರೂ ಐಕಮತ್ಯದಿಂದ ಹೇಳಿದರು. ಸರ್ವರೂ ಅತ್ಯಂತ ಭಕ್ತಿಯಿಂದ ಸಚಿವಪದವಿಯನ್ನು ಅಲಂಕರಿಸಬೇಕೆಂದು ಫೈಲೋಕ್ಲೀಸನನ್ನು ಪ್ರಾರ್ಥಿಸಿದರು. ಈ ಪದವಿಯನ್ನು ತಿರಸ್ಕರಿಸುವುದು ಅವನಿಗೆ ಅಸಾಧ್ಯವಾಯಿತು. ವಿಧಿಯಿಲ್ಲದೆ ಈ ಪದವಿಯನ್ನು ಫೈಲೋಕ್ಲೀಸನು ಪರಿಗ್ರಹಿಸಿದನು. ಕೂಡಲೆ ಇಡುಮಿಾನಿಯಸ್ಸನು ಮುಖ್ಯ ಸಚಿವ ಪದವಿಗೆ ಫೈಲೋಕ್ಲೀಸನನ್ನು ನಿಯಮಿಸಿರುವುದಾಗಿ ಸದರಿ ಸಭೆಯಲ್ಲಿ ಅಪ್ಪಣೆ ಕೊಡಿಸಿ, ಸಕಲ ವಿದ್ಯಮಾನಗಳೂ ಸಂಸ್ಥಾನಕ್ಕೆಲ್ಲಾ ತಿಳಿಯುವಂತೆ ಪ್ರಕಟನ ಮಾಡಿಸಿದನು. ಪ್ರಾಟೆಸಿಲನೂ, ಟಿಮೋಕ್ರೆಟೀಸನೂ ದಸ್ತಗಿರಿ ಮಾಡಲ್ಪಟ್ಟು, ಪಂಚಾಯಿತರ ವಿಚಾರಣೆಗೆ ಗುರಿಮಾಡಲ್ಪಟ್ಟರು. ಸಚಿವ ಪದವಿಯು ಫೈಲೋಕ್ಲೀಸನಿಗೆ ಒಪ್ಪಿಸಲ್ಪಟ್ಟಿತು. ಪಂಚಾಯಿತರು ಇವರ ವಿಚಾರಣೆಗೆ ಉಪಕ್ರಮಿಸಿದರು. ಫೈಲೋಕ್ಲೀಸನು ಸಚಿವ ಪದವಿಗೆ ಬಂದನೆಂದು ತಿಳಿದ ಕೂಡಲೆ, ಪ್ರಜೆಗಳ ಸಂತೋಷವು ಅನೇಕ ಮುಖವಾಗಿ ಪ್ರಕಾಶವಾಯಿತು. ಈ ವರ್ತಮಾನವನ್ನು ಕೇಳಿದ ಕೂಡಲೆ ಆಬಾಲವೃದ್ಧರೂ ಆನಂದಬಾಷ್ಪದಿಂದ ತುಂಬಿದ ಕಣ್ಣುಗಳುಳ್ಳವರಾದರು. ಎಲ್ಲಾ ದೇವಸ್ಥಾನಗಳಲ್ಲಿಯೂ ದೇವತಾರಾಧನೆಗಳಿಗೂ, ರಾಜಾಶೀರ್ವಾದಕ್ಕೂ, ಫೈಲೋಕ್ಲೀಸನಿಗೆ ಆಯುರಾರೋಗ್ಯಗಳುಂಟಾಗಲೆಂದು ಮಾಡುವ ಪ್ರಾರ್ಥನೆಗಳಿಗೂ ಉಪಕ್ರಮವಾಯಿತು. ಅವನನ್ನು ಮಂತ್ರಿಪದವಿಗೆ ತಂದದ್ದಕ್ಕೋಸ್ಕರ ಇಡುಮಿಾನಿಯಸ್ಸನಿಗೆ ಸಂಸ್ಥಾನದ ಎಲ್ಲಾ ಪ್ರಾಂತ್ಯಗಳಿಂದಲೂ ಮಹಾಜನಗಳು ಮಹಾಸಭೆಯನ್ನು ಮಾಡಿ, ವಂದನೆಗಳನ್ನು ಕಳು

ಪಿಸಿಕೊಟ್ಟರು. ಮುಖಂಡರಾದ ಮಹಾಜನಗಳು ಸಾಕ್ಷಾತ್ತಾಗಿ ಬಂದು ವಂದನೆಗಳನ್ನು ಮಾಡಿದರು. ಈ ಪದವಿಗೆ ಪುನಃ ಒಪ್ಪಿದ್ದಕ್ಕೋಸ್ಕರ ಫೈಲೋಕ್ಲೀಸನನ್ನು ಸರ್ವರೂ ವಂದಿಸಿದರು.

ಪ್ರಾಟಿಸಿಲನೂ, ಟಿಸೋಕ್ರೈಟೀಸನೂ ದಸ್ತಗಿರಿ ಮಾಡಲ್ಪಟ್ಟ ತರುವಾಯ ಅನೇಕ ಜನಗಳು ಅನೇಕ ಚಾರ್ಜುಗಳನ್ನು ಅವನ ಮೇಲೆ ತೆಗೆದುಕೊಂಡು ಬಂದರು. ಅವರು ಅಧಿಕಾರದಲ್ಲಿರುವವರೆಗೂ ಭಯದಿಂದ ಎಲ್ಲರಿಗೂ ವಾಗ್ಬಂಧವಿತ್ತು. ಅಧಿಕಾರವು ತಪ್ಪಿ, ದಸ್ತಗಿರಿಮಾಡಲ್ಪಟ್ಟ ಮೇಲೆ ಜನಗಳಿಗೆ ನಿರ್ಭಯವಾಯಿತು. ಈ ದುರಾತ್ಮರು ಮೆಂಟರನನ್ನು ಕೊಲ್ಲಿಸುವುದಕ್ಕೆ ಏರ್ಪಾಡುಗಳನ್ನು ಮಾಡಿದ್ದರು. ಈ ಉದ್ದಿಷ್ಟವಾದ ಕೊಲೆಪಾತಕಕ್ಕೆ ಸಂಬಂಧಪಟ್ಟ ಕಾಗದಪತ್ರಗಳೇ ಮೊದಲಾದ ರುಜುವಾತುಗಳು ಇಡುಮಿನಿಯಸ್ಸನ ಬಳಿಗೆ ಹಾಜರ್ಮಾಡಲ್ಪಟ್ಟವು. ಇದನ್ನು ನೋಡಿ ಮತ್ತು ಕೇಳಿ ಇಡುಮಿನಿಯಸ್ಸನಿಗೆ ಬಹಳ ಆಶ್ಚರ್ಯವಾಯಿತು. ಇಂಥಾ ದುರಾತ್ಮರಿಗೆ ಸರ್ವ ಸ್ವಾತಂತ್ರ್ಯವನ್ನೂ ಕೊಟ್ಟು, ದೇಶವನ್ನು ಹೀನಸ್ಥಿತಿಗೆ ತರುವುದಕ್ಕೂ, ಸತ್ಯಕ್ಕೂ, ಧರ್ಮಕ್ಕೂ ಗ್ಲಾನಿಯನ್ನುಂಟುಮಾಡುವುದಕ್ಕೂ ತಾನೇ ಕಾರಣಭೂತನಾಗಿದ್ದದ್ದು ಇವನ ಮನಸ್ಸಿಗೆ ಬಂದಿತು. ಇವರು ಮಾಡಿದ ಪಾಪಗಳಿಗೆ ತನ್ನ ಅಜ್ಞಾನವು ಹೇಗೆ ಕಾರಣವಾಯಿತೋ ಅದನ್ನು ಸ್ಮರಿಸಿಕೊಂಡು ತುಂಬಾ ವ್ಯಥೆಪಟ್ಟನು. ಈ ದಾಖಲೆಗಳನ್ನು ನೋಡಿದ ಕೂಡಲೆ ಇವನಿಗೆ ಏನೋ ಒಂದು ವಿಧವಾದ ಅನಿರ್ವಚನೀಯವಾದ ಸಂಕಟವು ಉಂಟಾಯಿತು. ನಿಲ್ಲುವುದಸಾಧ್ಯವಾಯಿತು. ಕೂಡುವುದಕ್ಕೂ ಆಗಲಿಲ್ಲ. ಮುಖದಲ್ಲಿ ತೇಜಸ್ಸು ಹೋಯಿತು. ಕೋಪದಿಂದಲೋ ಅಥವಾ ವ್ಯಸನದಿಂದಲೋ ಸಮೀಪದಲ್ಲಿದ್ದ ಸೋಫಾದ ಮೇಲೆ ವ್ಯಸನಾಕ್ರಾಂತನಾಗಿ ಬಿದ್ದನು. ಸಮೀಪವರ್ತಿಗಳಾದ ಜನಗಳು ಗಾಬರಿಗೊಂಡರು. ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ಮಲಗಿದ್ದನು. ಆಮೇಲೆ ಕಣ್ಣುತೆರೆದನು. ಶಾಂತಿಯುಂಟಾಗಿತ್ತು. ಎದ್ದು ಕೂತುಕೊಂಡನು. ಮೆಂಟರನನ್ನು ಕೊಲ್ಲುವುದಕ್ಕೆ ಈ ದುರಾತ್ಮರು ಮಾಡಿದ್ದ ಏರ್ಪಾಡುಗಳನ್ನು ನೋಡಿ ಅವನಿಗೆ ಎಷ್ಟು ಸಂಕಟವಾಯಿತು ! ಇವರ ಏರ್ಪಾಡುಗಳು ನಡೆಯದೆ ಹೋಗಿ ಮೆಂಟರಿಗೆ ಪ್ರಾಣಭಯವು ಹೇಗೆ ತಪ್ಪಿತೋ ಅದನ್ನು ಪರ್ಯಾಲೋಚನೆ ಮಾಡಿ, ತನಗುಂಟಾದ ಭಯವು ಜಗದೀಶ್ವರನ ಮಹಿಮೆಯಿಂದ ಪರಿಹರಿಸಲ್ಪಟ್ಟದ್ದನ್ನು ನೋಡಿ ಶಾಂತಿಗೊಂಡನು. ಅಧಿಕಾರಿಗಳನ್ನು ನಿಯಮಿಸಿಕೊಳ್ಳುವುದರಲ್ಲಿ ಪ್ರಭುಗಳು

ಹೇಗೆ ಜಾಗರೂಕರಾಗಿರಬೇಕೋ, ಈ ಜಾಗರೂಕತೆಯು ಸ್ವಲ್ಪ ಕಡಮೆಯಾದಾಗ್ಯೂ ಎಂಥಾ ಅನರ್ಥಗಳಿಗೆ ಕಾರಣವಾಗುವುದೋ ಅನೆಲ್ಲಾ ಇಡುಮಿನಿಯಸ್ಸನ ಸ್ಮೃತಿಪಥಕ್ಕೆ ಬಂದವು.

ಈ ರೀತಿಯಲ್ಲಿ ಅವನು ಯೋಚಿಸುತ್ತಿರುವಾಗ್ಯೆ, ಇವನ ಆಜ್ಞೆಯಂತೆ ಪ್ರಾಟಿಸಿಲನೂ, ಟಿಮೋಕ್ರೇಟೀಸನೂ ದಸ್ತಗಿರಿ ಮಾಡಲ್ಪಟ್ಟರು. ಇವರನ್ನು ದಸ್ತಗಿರಿ ಮಾಡುವುದಕ್ಕೆ ಹೆಜೆಸಿಪಸ್ ಎಂಬ ಪೊಲೀಸ್ ಅಧಿಕಾರಿಯು ಕಳುಹಿಸಲ್ಪಟ್ಟಿದ್ದನು. ಆತನು ಕೆಲವು ಜನ ಪೊಲೀಸಿನವರನ್ನು ಕರೆದುಕೊಂಡು, ಪ್ರಾಟಿಸಿಲಾಸ್‌ನ ಮ್ಯಾನ್ಷನ್ನಿಗೆ ಹೋದನು. ಅವನ ಬಂಗಳೆಯು ಅರಮನೆಗಿಂತಲೂ ವಿಶಾಲವಾಗಿತ್ತು. ಈ ಕಟ್ಟಡವನ್ನು ಕಟ್ಟುವುದಕ್ಕೆ ಸಾವಿರಾರು ಜನ ಶಿಲ್ಪಿಗಳು ತಮ್ಮ ಕೌಶಲ್ಯವನ್ನೆಲ್ಲಾ ವಿನಿಯೋಗಿಸಿದ್ದರು. ಈ ಕಟ್ಟಡವು ಅಮೃತಶಿಲೆಯಲ್ಲಿ ಕಟ್ಟಲ್ಪಟ್ಟಿತ್ತು. ಈ ಕಟ್ಟಡದ ಸುತ್ತಲೂ ಅತ್ಯಂತ ಮನೋಹರವಾದ ಉಪವನಗಳಿದ್ದವು. ಈ ಉಪವನನ ವೃಕ್ಷಗಳನ್ನನುಸರಿಸಿ, ಅನೇಕ ಲತಾಗೃಹಗಳು ರಚಿಸಲ್ಪಟ್ಟಿದ್ದವು. ಅವುಗಳಲ್ಲಿ ವಿಹಾರಾರ್ಥವಾಗಿ ಮಂಚಗಳೂ, ಸೋಫಾಗಳೂ, ಕುರ್ಚಿಗಳೂ, ವಾದ್ಯವಿಶೇಷಗಳೂ, ಆಟಗಳಿಗೆ ಬೇಕಾದ ಸಾಮಾನುಗಳೂ, ಫಲಾಹಾರಗಳೂ ಇವುಗಳೆಲ್ಲಾ ಇಡಲ್ಪಟ್ಟಿದ್ದವು. ಇಂಥಾ ಲತಾಗೃಹಗಳು ಆ ಉಪವನದಲ್ಲಿ ಅನೇಕವಾಗಿದ್ದವು. ವಿಟನಟನಾಯಕರೇ ಮೊದಲಾದವರು ಶ್ರಾವ್ಯವಾಗಿಯೂ, ಮನೋಹರವಾಗಿಯೂ ಇರುವಂತೆ ಗಾನಗಳನ್ನು ಮಾಡುತ್ತಿದ್ದರು. ಪ್ರಾಟಿಸಿಲನ ಕಿವಿಗೆ ಆಗ ಈ ಗಾನಗಳು ಬೇಕಾಗಿರಲಿಲ್ಲ. ಉಪವನದ ರಮಣೀಯತೆಯು ಇವನ ಕಣ್ಣಿಗೆ ಆನಂದವನ್ನುಂಟುಮಾಡಲಿಲ್ಲ. ಪುಷ್ಪ, ಗಂಧಮೇ ಮೊದಲಾದವುಗಳಿಂದ ಪರಿಪೂರ್ಣವಾದ ಮಂದಮಾರುತವು ಇವನಿಗೆ ರುಚಿಸಲಿಲ್ಲ. ಸ್ತುತಿಪಾಠಕರು ಪದ್ಧತಿ ಪ್ರಕಾರ ಇವನನ್ನು ಸ್ತುತಿಸುತ್ತಿದ್ದರು. ಆದರಿಂದ ಆಗುತ್ತಿದ್ದ ಸಂತೋಷವು ಆ ದಿವಸ ಅವನಿಗೆ ಆಗಲಿಲ್ಲ. ತಾನು ಮಾಡಿದ ಪ್ರಯತ್ನಗಳೆಲ್ಲಾ ನಿಷ್ಫಲವಾದದ್ದಲ್ಲದೆ, ಪ್ರತಿಕೂಲವು ಆಯಿತಲ್ಲಾ ಎಂದು ವಿಷಾದಿಸುತ್ತಿದ್ದನು. ಆಹಾರಗಳಲ್ಲಿ ಇವನಿಗೆ ಆಸಕ್ತಿಯು ತಪ್ಪಿತ್ತು. ಬಂಧುಮಿತ್ರರೊಡನೆ ಯಾವಾಗಿನಂತೆ ಮಾತನಾಡುವುದರಲ್ಲಿ ಇವನಿಗೆ ಆಸಕ್ತಿಯು ಇರಲಿಲ್ಲ. ಎಲ್ಲರೂ ಇವನ ಮನೋಭಾವವನ್ನು ನೋಡಿ ದೂರದಲ್ಲಿದ್ದರು. ತನ್ನ ತಂತ್ರಗಳನ್ನೆಲ್ಲಾ ಇಡುಮಿನಿಯಸ್ಸನು ತಿಳಿದುಕೊಂಡನೆಂದು ಇವನಿಗೆ ಗೊತ್ತಾಯಿತು. ಫೈಲೋಕ್ಲೀಸನನ್ನು ಕರೆ

ಸಿಕೊಂಡು, ಅವನಿಗೆ ಸಚಿವ ಪದವಿಯನ್ನು ಕೊಟ್ಟದ್ದು ಗೊತ್ತಾಯಿತು. ಮೆಂಟರನನ್ನು ಕೊಲ್ಲುವುದಕ್ಕೆ ತಾನು ಮಾಡಿದ್ದ ಪ್ರಯತ್ನಗಳು ಭಗ್ನವಾದದ್ದಲ್ಲದೆ, ಈ ವಿದ್ಯಮಾನಗಳೆಲ್ಲಾ ಇಡುಮಿನಿಯಸ್ಸನಿಗೂ, ಮೆಂಟರಿಗೂ ತಿಳಿಯಿತೆಂಬದಾಗಿಯೂ ಗೊತ್ತಾಯಿತು. ಟಿಮೋಕ್ರೆಟೀಸನು ಫೈಲೋಕ್ಲೀಸನನ್ನು ಕೊಲ್ಲುವುದಕ್ಕೆ ಪ್ರಯತ್ನಮಾಡಿ, ಆ ಪ್ರಯತ್ನವು ನಡೆಯದೆ ಹೋದದ್ದೂ ಕೂಡ ಗೊತ್ತಾಯಿತು. ಆಗ ಅವನು ತನ್ನನ್ನು ಕುರಿತು ಹೀಗೆ ಮಾತಾಡಿಕೊಳ್ಳುತ್ತಿದ್ದನು.

"ಐಶ್ವರ್ಯ ಮದವೂ, ಅಧಿಕಾರ ಮದವೂ ಬಹಳ ಅನರ್ಥಕಾರಿಗಳು. ಈ ಮದದಿಂದ ಪ್ರತಿನಿವಿಷ್ಟರಾಗಿರತಕ್ಕವರಿಗೆ ಕಣ್ಣು ಕಾಣುವುದಿಲ್ಲ. ಕಿವಿಗಳು ಕೇಳುವುದಿಲ್ಲ. ಯಾವ ಇಂದ್ರಿಯಗಳೂ ಅವುಗಳ ಕೆಲಸವನ್ನು ಮಾಡುವುದಿಲ್ಲ. ತಮಗೆ ಎದುರಿಲ್ಲವೆಂಬದಾಗಿಯೂ, ತಮ್ಮ ಪ್ರತಿಕಕ್ಷಿಗಳಿಗೆ ದಿಕ್ಕಿಲ್ಲವೆಂಬದಾಗಿಯೂ ತಿಳಿದುಕೊಳ್ಳುವರು. ದುಷ್ಟನಿಗ್ರಹ, ಶಿಷ್ಟಪರಿಪಾಲನಕ್ಕೆ ಜವಾಬ್ದಾರನಾದ ಜಗದೀಶ್ವರನು ಇಲ್ಲವೆಂಬದಾಗಿಯೂ, ಅಧಿಕಾರ ಬಲದಿಂದ ಬೇಕಾದದ್ದನ್ನು ಮಾಡಬಹುದೆಂಬದಾಗಿಯೂ, ದುಷ್ಕರ್ಮಗಳಿಗೆ ಅನುಸಾರವಾದ ದುಷ್ಫಲವೂ, ಸತ್ಕರ್ಮಗಳಿಗೆ ಅನುಸಾರವಾದ ಸತ್ಫಲವೂ ಉಂಟಾಗುವುದೆಂದು ಹೇಳತಕ್ಕವರ ಮಾತು ಸುಳ್ಳೆಂಬದಾಗಿಯೂ ತಿಳಿದುಕೊಳ್ಳುವರು. ಇಂಥಾ ಅವಸ್ಥೆಯು ನನಗೂ ಬಂದಿತು ಇಡುಮಿನಿಯಸ್ಸನು ಯಥಾಜಾತನೆಂಬದಾಗಿಯೂ, ಇವನನ್ನು ಕೈಗೊಂಬೆಯಂತೆ ಆಡಿಸುತ್ತಾ, ಕಾರ್ಯತಃ ಈ ದೇಶಕ್ಕೆ ಪ್ರಭುವಾಗಿರಬಹುದೆಂಬದಾಗಿಯೂ ನಾನು ತಿಳಿದುಕೊಂಡಿದ್ದೆನು. ನನ್ನ ನಿರಂಕುಶಪ್ರವರ್ತನಕ್ಕೆ ಪ್ರತಿಬಂಧಕನಾಗಿದ್ದ ಫೈಲೋಕ್ಲೀಸನನ್ನು ಅಧಿಕಾರದಿಂದ ನಿವೃತ್ತಿಮಾಡಿಸಿದೆನು. ಅವನು ಸರ್ವಸಂಗ ಪರಿತ್ಯಾಗವನ್ನು ಮಾಡಿ, ಸನ್ಯಾಸಿಯಾಗುವಂತೆ ಮಾಡಿದೆನು. ಅವನನ್ನು ಕೊಲ್ಲಿಸುವ ಪ್ರಯತ್ನವು ಸಫಲವಾಗದೆ ಹೋಯಿತು. ಆದರೆ ಅವನು ವೈರಾಗ್ಯವನ್ನು ವಹಿಸುವ ಸ್ಥಿತಿಗೆ ಬೇಕಾದ ಏರ್ಪಾಡುಗಳನ್ನು ಮಾಡಿದೆನು. ಇಡುಮಿನಿಯಸ್ಸನಿಗೆ ಜ್ಞಾನೋದಯವಾಗುವುದಕ್ಕೆ ಮೆಂಟರನು ಕಾರಣಭೂತನಾಗಿರುವುದನ್ನು ನೋಡಿ, ಅವನನ್ನು ಕೊಲ್ಲಿಸುವುದಕ್ಕೆ ಏರ್ಪಾಡು ಮಾಡಿದೆನು. ನನ್ನ ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳಿಂದ ಎಲ್ಲಾ ಭಾಗಗಳಲ್ಲೂ ದಿಗ್ವಿಜಯವಾಗುವುದೆಂದು ತಿಳಿದುಕೊಂಡಿದ್ದೆನು. ನನ್ನ ಯೋಚನೆಗಳೆಲ್ಲಾ ವಿಪರೀತವಾದವು. ನನ್ನ ಕೆಲಸಗಳ ಪರಿಣಾಮಾವಸ್ಥೆಯನ್ನು ನೋಡಿದರೆ, ಜನಗಳ ಮನೋ

ವಾಕ್ಕರ್ಮಗಳ ಪಾರಿಶುದ್ಧ್ಯತೆಗೆ ಅನುಸಾರವಾಗಿ ಫಲಾಫಲಗಳನ್ನು ಕೊಡತಕ್ಕ ದೇವರೊಬ್ಬನು ಇರುವನೆಂಬದಾಗಿಯೂ, ನಾವು ಪುಣ್ಯವನ್ನು ಮಾಡಿದರೆ, ಒಳ್ಳೇ ಫಲವನ್ನು ಕೊಡುವನೆಂಬದಾಗಿಯೂ, ನಾವು ಸತ್ಪುರುಷರಿಗೆ ದ್ರೋಹವನ್ನು ಮಾಡಿದರೆ, ಅದು ಅವರಿಗೆ ಶ್ರೇಯಸ್ಕರವಾಗುವುದೆಂಬದಾಗಿಯೂ, ಆದರೆ ಅದು ನಮಗೆ ಅಶ್ರೇಯಸ್ಸನ್ನುಂಟುಮಾಡುವುದೆಂಬದಾಗಿಯೂ, ಪರೋಪಕಾರಿಗಳಿಗೆ ಒಳ್ಳೇ ಫಲಗಳೂ, ಪರರಿಗೆ ಅಪಕಾರ ಮಾಡತಕ್ಕವರಿಗೆ ಕೆಟ್ಟ ಫಲಗಳೂ ಆಗುವುವೆಂಬದಾಗಿಯೂ, ಇದಕ್ಕೆಲ್ಲಾ ಅವಾಙ್ಮಾನಸಗೋಚರನಾದ ಜಗದೀಶ್ವರನೇ ಕಾರಣಭೂತನೆಂಬದಾಗಿಯೂ ತೋರುತ್ತದೆ. ನಾನು ಪಾಪಕರ್ಮಗಳನ್ನು ಮಾಡಿದೆನು. ಅದರ ಫಲವನ್ನು ಅನುಭವಿಸಬೇಕು.'' ಹೀಗೆ ಅಂದುಕೊಂಡನು.

ಉತ್ತರಕ್ಷಣದಲ್ಲಿಯೇ ಹೆಜಿಸಿಪಸ್ಸನು ಪೋಲೀಸಿನವರೊಡನೆ ಅವನ ಬಳಿಗೆ ಹೋಗಿ, ನಿನ್ನನ್ನು ದಸ್ತಗಿರಿ ಮಾಡುವುದಕ್ಕೆ ಇಡುಮೀನಿಯಸ್ಸನ ಆಜ್ಞೆಯಾಗಿರುವುದೆಂದು ಹೇಳಿ, ವಾರಂಟನ್ನು ತೋರಿಸಿದನು. ತತ್ಕ್ಷಣದಲ್ಲಿಯೇ ಸಿಡಲಿನಿಂದ ಹೊಡೆಯಲ್ಪಟ್ಟ ಮರವು ಹೇಗೋ ಹಾಗೆ ಪ್ರಾಟಿಸಿಲನು ನೆಲಕ್ಕೆ ಬಿದ್ದನು. ಸ್ವಲ್ಪ ಚೇತರಿಸಿಕೊಂಡು, ಹೆಜಿಸಿಪಸ್ಸನ ಕಾಲುಗಳನ್ನು ಹಿಡಿದುಕೊಂಡು, ಮಕ್ಕಳಂತೆ ಅಳುವುದಕ್ಕೆ ಉಪಕ್ರಮಿಸಿದನು. ಗಡಗಡನೆ ನಡುಗಿದನು. ತೊದಲು ಮಾತುಗಳಿಂದ ತನ್ನ ಮನಸ್ಸಿನಲ್ಲಿ ಉಂಟಾದ ಹುಣ್ಣನ್ನು ತೋರಿಸಿದನು. ಒಂದು ನಿಮಿಷಕ್ಕೆ ಮುಂಚೆ ಯಾರನ್ನು ತಿರಸ್ಕಾರ ಭಾವದಿಂದ ಹೆದರಿಸುತ್ತಿದ್ದನೋ ಅಂಥಾ ಹೆಜಿಸಿಪಸ್ಸನ ದೃಷ್ಟಿಪಾತವನ್ನು ತಡೆಯುವುದಕ್ಕೂ ಇವನಿಗೆ ಶಕ್ತಿಯಿರಲಿಲ್ಲ. ತನ್ನ ಗೃಹಕೃತ್ಯದ ಏರ್ಪಾಡುಗಳನ್ನು ಮಾಡಿಕೊಳ್ಳುವುದಕ್ಕೆ ಅವಕಾಶವನ್ನು ಕೇಳಿದನು. ಅವಕಾಶವನ್ನು ಕೊಡುವುದಕ್ಕೆ ತನಗೆ ಹುಕುಂ ಇಲ್ಲವೆಂದು ಅವನಿಗೆ ತಿಳಿಸಿ, ಅವನ ಪ್ಯಾಕ್ಟರಿನಲ್ಲಿ ದರೋಬಸ್ತು ಕಾಗದಪತ್ರಗಳನ್ನೂ ದಸ್ತಗಿರಿ ಮಾಡುವುದಕ್ಕೆ ಆಜ್ಞೆಮಾಡಿದನು. ಅವುಗಳೆಲ್ಲಾ ಮೊಹರು ಮಾಡಲ್ಪಟ್ಟು, ಪಂಚಾಯಿತರ ಬಳಿಗೆ ಕಳುಹಿಸಲ್ಪಟ್ಟವು. ಪ್ರಾಟಿಸಿಲನನ್ನು ತೆಗೆದುಕೊಂಡು ಹೋಗಿ ಲಾಕಪ್ಪಿಗೆ ಸೇರಿಸಿದನು.

ಅಲ್ಲಿಂದ ಟಿಮೋಕ್ರೆಟೀಸನ ಮನೆಗೆ ಹೋಗಿ, ಅವನನ್ನು ದಸ್ತಗಿರಿ ಮಾಡಿದರು. ತಾನು ಮಾಡಿದ ಮಹಾಪಾತಕಗಳು ಯಾರಿಗೂ ತಿಳಿಯದೇ ಇರಬಹುದೆಂದು ಅವನು ಭಾವಿಸಿಕೊಂಡಿದ್ದನು. ಆದರೆ ಹೆಜಿಸಿಪಸ್ಸನನ್ನು ನೋಡಿದ ಕೂ

ಡಲೆ ಅವನಿಗೆ ಭಯವುಂಟಾಯಿತು. ಹೆಜಿಸಿಪಸ್ಸನು ವಾರಂಟನ್ನು ತೋರಿಸಿ, ಅವನನ್ನು ದಸ್ತಗಿರಿ ಮಾಡಿ, ಅವನ ಕಾಗದಪತ್ರಗಳನ್ನು ಮೊಹರು ಮಾಡಿಸಿ, ಪಂಚಾಯಿತರ ಬಳಿಗೆ ಕಳುಹಿಸಿ, ಪ್ರಾಟಿಸಿಲನು ಯಾವ ಲಾಕಪ್ಪಿನಲ್ಲಿ ಇಡಲ್ಪಟ್ಟಿರುವನೋ ಅದೇ ಲಾಕಪ್ಪಿನಲ್ಲಿ ಇವನನ್ನು ಇಟ್ಟು, ಏಕಾಂತವಾಗಿ ಇವನ ಸಂಭಾಷಣೆಗಳನ್ನು ತಿಳಿದುಕೊಳ್ಳುವುದಕ್ಕೆ ಯಂತ್ರಸಾಮಗ್ರಿಗಳ ಮೂಲಕ ಏರ್ಪಾಡುಗಳನ್ನು ಮಾಡಿಸಿ, ಪಂಚಾಯಿತರಿಗೆ ಖುದ್ದಾಗಿ ಇವರ ಸಂಭಾಷಣೆಗಳು ಕೇಳುವಂತೆ ಟೆಲಿಫೋನ್ ಏರ್ಪಾಡುಗಳನ್ನು ಮಾಡಿದನು. ಇವರಿಬ್ಬರೂ ತಾವು ನಡೆಸಿದ ವಿದ್ಯಮಾನಗಳನ್ನೆಲ್ಲಾ ಸಮೀಪದಲ್ಲಿ ಯಾರೂ ಇಲ್ಲನೆಂದು ತಿಳಿದುಕೊಂಡು ನಿರ್ಭಯವಾಗಿ ಮಾತನಾಡಿಕೊಂಡರು. ಇವರ ಮಾತುಗಳನ್ನೆಲ್ಲಾ ಪಂಚಾಯಿತರು ಕೇಳಿದರು. ಇದಲ್ಲದೆ ಇವರ ಸಂಭಾಷಣೆಗಳು ರಿಕಾರ್ಡು ಮಾಡಲ್ಪಟ್ಟವು ಅನಂತರ ಇವರು ವಿಚಾರಣೆಗೆ ಗುರಿಮಾಡಲ್ಪಟ್ಟರು. ಇವರ ಸ್ಟೇಟ್‌ಮೆಂಟುಗಳೂ, ಸಾಕ್ಷಿಗಳ ಕೈಫೀತುಗಳೂ, ಇವರ ಕಡೆ ಲಾಯರುಗಳ ಆರ್ಗ್ಯುಮೆಂಟುಗಳೂ ಇವುಗಳೆಲ್ಲಾ ತೆಗೆದುಕೊಳ್ಳಲ್ಪಟ್ಟವು. ಫೈಲೋಕ್ಲೀಸನು ಸಾಕ್ಷಿಯನ್ನು ನುಡಿಯುವುದಕ್ಕೆ ಕರೆಸಲ್ಪಟ್ಟನು. ಅವನಿಗೆ ತಿಳಿದ ವಿಷಯಗಳನ್ನೆಲ್ಲಾ ಅವನು ನುಡಿದನು ತನಗೆ ಇವರು ಅಪಕಾರ ಮಾಡಿದರೆಂದು ಈತನು ಹೇಳಲಿಲ್ಲ. ತನ್ನನ್ನು ಕೊಲ್ಲಿಸುವುದಕ್ಕೋಸ್ಕರ ಟಿನೋಕ್ರೇಟೀಸನು ಮಾಡಿದ ಪ್ರಯತ್ನದ ವಿಷಯವು ಕೇಳಲ್ಪಟ್ಟಿತು. ನಡೆದ ವಿದ್ಯಮಾನಗಳನ್ನು ತಿಳಿಸಿ, ತಾನು ಅವರ ಅಪರಾಧವನ್ನು ಕ್ಷಮಿಸಿರುವುದಾಗಿಯೂ, ಸದರಿ ಅಪರಾಧಗಳನ್ನು ಪಂಚಾಯಿತರು ಕ್ಷಮಿಸಿದರೆ, ತನಗೆ ಸಂತೋಷವೆಂಬದಾಗಿಯೂ ಹೇಳಿದನು. ಪಂಚಾಯಿತರು ಇವರ ಅಪರಾಧಗಳನ್ನೆಲ್ಲಾ ತಪಶೀಲುವಾರಾಗಿ ವಿಚಾರಿಸಿ, ಮರಣದಂಡನೆಗೆ ಅರ್ಹವಾದ ಅಪರಾಧಗಳನ್ನು ಇವರಿಬ್ಬರೂ ಮಾಡಿರುವರೆಂಬದಾಗಿಯೂ, ಮೆಂಟರನನ್ನು ಕೊಲ್ಲುವುದಕ್ಕೆ ಪ್ರಾಟಿಸಿಲನು ಪ್ರಯತ್ನ ಮಾಡಿದನೆಂಬದಾಗಿಯೂ, ಫೈಲೋಕ್ಲೀಸನನ್ನು ಕೊಲ್ಲುವುದಕ್ಕೆ ಟಿನೋಕ್ರೇಟೀಸನು ಪ್ರಯತ್ನ ಮಾಡಿದನೆಂಬದಾಗಿಯೂ, ದೈವಯೋಗದಿಂದ ಈ ಮರಣಗಳು ತಪ್ಪಿದವೆಂಬದಾಗಿಯೂ, ಇವರ ಕೊಲೆಪಾತಕದ ಪ್ರಯತ್ನವನ್ನು ಮನಃಪೂರ್ತಿಯಾಗಿ ಮಾಡಿದರೆಂಬದಾಗಿಯೂ, ಇವರು ಮರಣದಂಡನೆಗೆ ಅರ್ಹರೆಂಬದಾಗಿಯೂ ಅಭಿಪ್ರಾಯವನ್ನು ಕೊಟ್ಟರು. ಅದನ್ನು ನೋಡಿ, ಮೆಂಟರನನ್ನೂ, ಫೈಲೋಕ್ಲೀಸನನ್ನೂ ಕರೆಸಿ, ಈ ಪಂಚಾಯಿತರ ಫೈಸಲನ್ನು ಇಡುಮಿನಾನಿ

ಯಸ್ಸನು ಅವರಿಗೆ ತೋರಿಸಿದನು. ‘ ಟಿಮೋಕ್ರೆಟೀಸನ ಅಪರಾಧವನ್ನು ನಾನು ಕ್ಷಮಿಸಿರುತ್ತೇನೆ, ನೀನೂ ಕ್ಷಮಿಸಬೇಕು ’ ಎಂದು ಫೈಲೋಕ್ಲೀಸನು ಹೇಳಿದನು. ‘ ಪ್ರಾಟಿಸಿಲನ ಅಪರಾಧವನ್ನು ನಾನು ಕ್ಷಮಿಸಿರುತ್ತೇನೆ, ನೀನು ಅದನ್ನು ಕ್ಷಮಿಸ ಬೇಕು ’ ಎಂದು ಮೆಂಟರನು ಹೇಳಿದನು. ಇವರು ಹೀಗೆ ಹೇಳುವಾಗ್ಯೆ, ಪಂಚಾಯಿತರೂ, ಅಪರಾಧಿಗಳೂ, ಸಾಕ್ಷಿಗಳೂ, ಮಹಾಜನರೂ, ಎಲ್ಲರೂ ಮಹಾರಾಜನ ದರ್ಬಾರಿನಲ್ಲಿ ಸೇರಿದ್ದರು. ಫೈಲೋಕ್ಲೀಸನ ಮತ್ತು ಮೆಂಟರನ ಮಹಾನುಭಾವತೆಯನ್ನು ನೋಡಿ, ದರ್ಬಾರಿನಲ್ಲಿದ್ದವರೆಲ್ಲರೂ ಆಶ್ಚರ್ಯಪರವಶರಾದರು. ಟಿಮೋಕ್ರೆಟೀಸನೂ, ಪ್ರಾಟಿಸಿಲನೂ ಮರಣದಂಡನೆಯನ್ನು ನಿರೀಕ್ಷಿಸುತ್ತಿದ್ದರು. ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಫೈಲೋಕ್ಲೀಸನೂ, ಮೆಂಟರನೂ ಹೇಳಿದ್ದನ್ನು ಕೇಳಿದ ಕೂಡಲೆ, ಕೇವಲ ವಿಸ್ಮಿತರಾಗಿ ಇಂತಹ ಧರ್ಮಿಷ್ಠರ ವಿಷಯದಲ್ಲಿ ಇಂತಹ ದೌರಾತ್ಮ್ಯವು ತೋರಿಸಲ್ಪಟ್ಟಿತಲ್ಲಾ ಎಂದು ವ್ಯಸನದಿಂದ ಮೂರ್ಛಿತರಾದರು. ಶೈತ್ಯೋಪಚಾರದಿಂದ ಸ್ವಲ್ಪ ಚೇತರಿಸಿಕೊಂಡು ಎದ್ದರು. ಪ್ರಾಟಿಸಿಲನ್ನು ಇಡುಮಿನಿಯಸ್ಸನನ್ನು ಕುರಿತು ಹೇಳಿದ್ದೇನಂದರೆ:—

“ ಎಲೈ ಇಡುಮಿನಿಯಸ್ಸನೇ, ಇವರು ಜಗದ್ವಿಲಕ್ಷಣಪುರುಷರು. ಅಪಕಾರ ಮಾಡಿದವರಿಗೆ ಉಪಕಾರ ಮಾಡಬೇಕೆಂದು ಹಿತೋಪದೇಶವು ಮಾಡಲ್ಪಟ್ಟಿರುವುದು. ಅದನ್ನು ನಾನು ಕೇಳಿ ಇದೇನೆ. ಆದರೆ ಅದನ್ನು ಅನುಷ್ಠಾನಕ್ಕೆ ತಂದುಕೊಂಡಿರುವ ಆಚಾರ್ಯರನ್ನು ನಾನು ನೋಡಿರಲಿಲ್ಲ. ಈಗ ನೋಡಿದೆವು. ಇಂಥಾ ಮಹಾ ಪುರುಷರನ್ನು ಕೊಲ್ಲುವ ಪ್ರಯತ್ನವನ್ನು ನಾವು ಮಾಡಿದೆವು. ನಾವು ಮಹಾಪಾತಕಿಗಳು. ಕ್ಷಮಿಸಲ್ಪಡುವುದಕ್ಕೆ ನಾವು ಅರ್ಹರಲ್ಲ. ಈ ಕ್ಷಮೆಯು ನಮಗೆ ಅತ್ಯಂತ ಕ್ರೂರವಾದ ಶಿಕ್ಷೆಯಾಗಿ ಪರಿಣಮಿಸುವುದು. ಎಲೈ ಇಡುಮಿನಿಯಸ್ಸನೇ, ನೀನು ನನ್ನಲ್ಲಿ ಕೃಪೆಯನ್ನು ಇಡು. ಸಾವಕಾಶ ಮಾಡದೆ ನನ್ನನ್ನು ಗಲ್ಲಿಗೆ ಹಾಕಿಸು. ”

ಈ ಮಾತನ್ನು ಅನುಮೋದಿಸಿ, ಟಿಮೋಕ್ರೆಟೀಸನು ಹೇಳಿದ್ದೇನಂದರೆ:—
“ ಎಲೈ ಇಡುಮಿನಿಯಸ್ಸನೇ, ಪರದೇಶಿಯಾದ ಮೆಂಟರನನ್ನು ಕೊಲ್ಲುವ ಪ್ರಯತ್ನವು ಪ್ರಾಟಿಸಿಲನಿಂದ ಮಾಡಲ್ಪಟ್ಟಿತು. ಅವನ ಪಾತಕಕ್ಕಿಂತಲೂ ನನ್ನ ಪಾತಕವು ದೊಡ್ಡದು. ಯಾರಿಂದ ನಾನು ಉಪಕೃತನಾಗಿದ್ದೆನೋ ಅಂಥಾ ಫೈಲೋ

ಕ್ಲೀಸನನ್ನು ಕೊಲ್ಲುವ ಪ್ರಯತ್ನವನ್ನು ನಾನು ಮಾಡಿದೆನು. ನಾನು ಪರಮ ಪಾಪಿಯು. ನನ್ನ ಅಪರಾಧಕ್ಕೆ ಮರಣದಂಡನೆಯೇ ಯುಕ್ತವಾದದ್ದು. ಈ ದಂಡನೆಯನ್ನು ಶೀಘ್ರದಲ್ಲಿಯೇ ಮಾಡಿ, ನನ್ನ ಅಪರಾಧಕ್ಕೆ ಪ್ರಾಯಶ್ಚಿತ್ತವಾಗುವಂತೆ ಮಾಡು."

ಈ ರೀತಿಯಲ್ಲಿ ಈ ಅಪರಾಧಿಗಳಿಬ್ಬರೂ ಹೇಳಿದರು. ತರುವಾಯ ಪಂಚಾಯಿತರೊಡನೆಯೂ, ಮೆಂಟರ್ ಮತ್ತು ಫೈಲೋಕ್ಲೀಸಿನೊಡನೆಯೂ ಯೋಚನೆಯನ್ನು ಮಾಡಿ, ಇಡುಮಿಾನಿಯಸ್ಸನು ಆಜ್ಞೆಯ ಫೈಸಲನ್ನು ಹೇಳಿದನು. ಅವನು ಹೇಳಿದ್ದೇನಂದರೆ:—

"ನೀವಿಬ್ಬರೂ ಮರಣದಂಡನೆಗೆ ಅರ್ಹವಾದ ಪಾತಕಗಳನ್ನು ಮಾಡಿರುವಿರಿ. ಈ ದಂಡನೆಯು ನಿಮಗೆ ಮಾಡಲ್ಪಡಬೇಕು. ಆದರೆ ಮೆಂಟರನೂ, ಫೈಲೋಕ್ಲೀಸನೂ ನಿಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಆಜ್ಞೆಯನ್ನು ಮಾಡಿರುವರು. ನಿಮ್ಮ ಅಪರಾಧವನ್ನು ಕ್ಷಮಿಸಿರುತ್ತೇನೆ. ನಾನು ಕ್ಷಮಿಸಿದಾಗ್ಯೂ, ದೇವರು ನಿಮ್ಮ ಅಪರಾಧವನ್ನು ಕ್ಷಮಿಸಲಾರನು. ನಿಮ್ಮ ಮನಸ್ಸಾಕ್ಷಿಯು ನಿಮ್ಮನ್ನು ಕ್ಷಮಿಸಲಾರದು. ನಿಮ್ಮ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ನೀವೇ ಸೂಚಿಸಿ. ಅದನ್ನು ಪರ್ಯಾಲೋಚಿಸಿ, ಮೆಂಟರು, ಫೈಲೋಕ್ಲೀಸ್ ಮೊದಲಾದ ಮಹಾಜನಗಳ ಅಭಿಪ್ರಾಯವನ್ನೂ ತೆಗೆದುಕೊಂಡು, ನಿಮಗೆ ಪ್ರಾಯಶ್ಚಿತ್ತರೂಪವಾದ ದಂಡನೆಯನ್ನು ವಿಧಿಸುವೆನು."

ಈ ರೀತಿಯಲ್ಲಿ ಇಡುಮಿಾನಿಯಸ್ಸನು ಹೇಳಲು, ನಾವು ಮಾಡಿದ ಅಪರಾಧಕ್ಕೆ ಮರಣದಂಡನೆಯೇ ನ್ಯಾಯವಾದದ್ದು. ಆದರೆ ಮೆಂಟರೂ ಮತ್ತು ಫೈಲೋಕ್ಲೀಸನೂ ಇಬ್ಬರೂ ನಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಅಪ್ಪಣೆಯನ್ನು ಕೊಟ್ಟಿರುವರು. ಅವರ ಆಜ್ಞೆಯಂತೆ ನಡೆಯಬೇಕೆಂದು ನೀನೂ ಸಂಕಲ್ಪಮಾಡಿರುತ್ತೀಯೆ. ಇದಕ್ಕಾಗಿ ನಮ್ಮ ವಂದನೆಗಳನ್ನು ಅರ್ಪಿಸುತ್ತೇವೆ. ಈ ದೇಶದ ಪ್ರಜೆಗಳೆಲ್ಲರೂ ನಮ್ಮ ಅಪರಾಧಗಳನ್ನು ತಿಳಿದುಕೊಂಡು, ನಮ್ಮಲ್ಲಿ ಅತ್ಯಂತ ತಿರಸ್ಕಾರವನ್ನು ತೋರಿಸುತ್ತಲಿರುವರು. ಇದು ನಮಗೆ ಬಹಳ ದುಸ್ಸಹವಾಗಿರುವುದು. ಸೇಮಾಸ್ ದ್ವೀಪಕ್ಕೆ ನಮ್ಮನ್ನು ಗಡೀಪಾರು ಮಾಡು. ನಮ್ಮ ಮುಂದಿನ ನಡತೆಯಿಂದ ನೀನೂ, ನಿನ್ನ ಪ್ರಜೆಗಳೂ ನಮ್ಮ ಮೇಲೆ ಪ್ರಸನ್ನರಾದರೆ, ಆಗ ನಾವು ಮಾಡಿದ ಅಪರಾಧಕ್ಷಮೆಯ ಫಲವನ್ನು ಹೊಂದುವ ಪ್ರಯತ್ನವನ್ನು ಮಾಡು

ತ್ತೇವೆ. ಅದುವರೆಗೂ ನಾವು ಮಾಡಿದ ಪಾಪಕರ್ಮಗಳ ಫಲವನ್ನು ಅನುಭವಿಸುತ್ತೇವೆ. ನಮ್ಮನ್ನು ಗಡೀಪಾರು ಮಾಡು ಎಂದು ಪ್ರಾಟಿಸಿಲನು ಹೇಳಿದನು. ಅದನ್ನು ಟಿಮೋಕ್ರೆಟೀಸನು ಅನುಮೋದಿಸಿದನು, ಇದಕ್ಕೆ ಸರ್ವರೂ ಒಪ್ಪಿದರು. ಆ ರೀತಿಯಲ್ಲಿ ಮಾಡಲ್ಪಟ್ಟಿತು. ತಕ್ಷಣದಲ್ಲಿಯೇ ಪ್ರಾಟಿಸಿಲನನ್ನೂ, ಟಿಮೋಕ್ರೆಟೀಸನನ್ನೂ ಸೇಮಾಸ್ ದ್ವೀಪಕ್ಕೆ ಕಳುಹಿಸಿದರು. ಹೆಜಿಸಿಪಸ್‌ನು ಅವರನ್ನು ಕರೆದುಕೊಂಡು ಹೋಗಿ ಸದರಿ ದ್ವೀಪದಲ್ಲಿ ಬಿಟ್ಟು, ವಾಪಸು ಬಂದು ವರದಿಯನ್ನು ಮಾಡಿದನು.

ಪ್ರಾಟಿಸಿಲನೂ, ಟಿಮೋಕ್ರೆಟೀಸನೂ ಸೇಮಾಸ್ ದ್ವೀಪಕ್ಕೆ ಗಡೀಪಾರು ಮಾಡಲ್ಪಡಬೇಕೆಂದು ಇಡುಮೀನಿಯಸ್ಸನು ಆಜ್ಞೆಯನ್ನು ಮಾಡಲು, ಅವರು ಸದರಿ ಸೇಮಾಸ್ ದ್ವೀಪಕ್ಕೆ ಹೊರಡುವುದಕ್ಕ ಮುಂಚೆ ಫೈಲೋಕ್ಲೀಸನನ್ನು ನೋಡಬೇಕೆಂದು ಅಪೇಕ್ಷಿಸಿದರು. ಆತನ ಸನ್ನಿಧಿಗೆ ಕರೆದುಕೊಂಡು ಹೋಗಲ್ಪಟ್ಟರು. ಫೈಲೋಕ್ಲೀಸನನ್ನು ನೋಡಿ, ಪ್ರಾಟಿಸಿಲನು ಹೇಳಿದ್ದೇನಂದರೆ:—

"ನಾನು ನಿನಗೆ ಬಹಳ ಅಪಕಾರವನ್ನು ಮಾಡಿದೆನು. ಆದಾಗ್ಯೂ ನೀನ್ ನನ್ನ ಮೇಲೆ ಕೋಪವನ್ನು ಮಾಡಲಿಲ್ಲ. ಶಾಂತಿಯಿಂದ ಅಧಿಕಾರವನ್ನು ಬಿಟ್ಟು, ಸೇಮಾಸ್ ದ್ವೀಪದಲ್ಲಿ ಕಾಡುಮೃಗಗಳ ಜೊತೆಯಲ್ಲಿ ಇರುವುದಕ್ಕೆ ಒಪ್ಪಿದೆ. ಬೇಕಾಗಿದ್ದರೆ ನೀನು ಇಡುಮೀನಿಯಸ್ಸನನ್ನು ತಿರಸ್ಕರಿಸಿ, ಪ್ರಭುತ್ವವನ್ನೂ ಕೂಡ ಹೊಂದಬಹುದಾಗಿತ್ತು. ನೀನು ಹಾಗೆ ಮಾಡುವಿ ಎಂದು ತಿಳಿದುಕೊಂಡಿದ್ದೆನು. ಆದರೆ ನೀನು ಆ ರೀತಿಯಲ್ಲಿ ಮಾಡಲಿಲ್ಲ. ಅಂಥಾ ಯೋಚನೆಯೂ ಕೂಡ ನಿನಗೆ ಬರಲಿಲ್ಲ. ನಿನ್ನ ಸ್ವಭಾವವು ವಿಲಕ್ಷಣವಾದದ್ದು. ನಿನಗೆ ಆದ ಅನ್ಯಾಯವನ್ನು ದೇವರು ಮೆಚ್ಚಲಿಲ್ಲ. ನಿನ್ನ ಸ್ಥಾನದಲ್ಲಿ ಖೈದಿಯಾಗಿ ಗಡೀಪಾರು ಮಾಡಲ್ಪಟ್ಟು ನಾನು ಇರಬೇಕೆಂಬದಾಗಿಯೂ, ಸಚಿವ ಪದವಿಯಲ್ಲಿ ನೀನು ಇರಬೇಕೆಂಬದಾಗಿಯೂ ಈಶ್ವರ ಸಂಕಲ್ಪವು ಇತ್ತು. ಈಗ ಆ ರೀತಿಯಲ್ಲಿ ಆಗಿರುವುದು. ನಾನು ಹೋಗಿಬರುತ್ತೇನೆ. ನನ್ನ ಅಪರಾಧವನ್ನು ಕ್ಷಮಿಸು. ನನ್ನ ಹೆಂಡತಿ, ಮಕ್ಕಳು ನನಗೆ ಗಡೀಪಾರು ಶಿಕ್ಷೆಯು ಆದದ್ದರಿಂದ ತುಂಬಾ ಕಷ್ಟಕ್ಕೆ ಗುರಿಯಾಗಿರುವರು. ಅವರಲ್ಲಿ ಕೃಪೆಯನ್ನಿಟ್ಟು ರಕ್ಷಿಸು. ಇಡುಮೀನಿಯಸ್ಸನಿಗೆ ನನ್ನಲ್ಲಿ ಕೃಪೆಯುಂಟಾಗುವಂತೆ ಮಾಡು. ಅದಕ್ಕೆ ನಾನು ತುಂಬಾ ಕೃತಜ್ಞನಾಗಿರುತ್ತೇನೆ."

ಈ ರೀತಿಯಲ್ಲಿ ಪ್ರಾಟೆಸಿಲನು ಹೇಳಲು, ಎಲೈ ಪ್ರಾಟೆಸಿಲನೇ, ನೀನು ನನಗೆ ಮಾಡಿರುವ ಅಪಕಾರವನ್ನು ನಾನು ಸಂಪೂರ್ಣವಾಗಿ ಮರೆತಿರುವೆನು. ನಿನ್ನ ಅಪರಾಧವನ್ನು ನೀನು ಅಧಿಕಾರದಲ್ಲಿರುವಾಗಲೇ ಮನ್ನಿಸಿದೆನು. ದೇವರು ನಿನ್ನ ಅಪರಾಧವನ್ನು ಮನ್ನಿಸಲೆಂದು ನಾನು ಕೋರಿದೆನು. ಅದರೆ ದೇವರು ಅಪರಾಧಗಳ ವಿಷಯದಲ್ಲಿ ನಿರ್ಘೃಣನು. ನಿನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ನೀನು ಅನುಭವಿಸಬೇಕೆಂದು ಅವನ ಸಂಕಲ್ಪವು ಇರುವಂತೆ ತೋರುತ್ತದೆ. ಅದಕ್ಕೆ ಅನುಸಾರವಾಗಿ ನೀನು ಗಡೀಪಾರು ಮಾಡಲ್ಪಟ್ಟಿರುವಿ. ಸೇಮಾಸ್ ದ್ವೀಪದಲ್ಲಿ ಯಾವ ಗಲಾಟೆಗಳೂ ಇರುವುದಿಲ್ಲ. ಪರೋಪಕಾರದಿಂದ ಆ ದ್ವೀಪನಿವಾಸಿಗಳನ್ನು ಸಂತೋಷಪಡಿಸಿ, ಅವರ ಕೃತಜ್ಞತೆಗೆ ಪಾತ್ರನಾಗು. ದೇವರು ನಿನಗೆ ಮಂಗಳವನ್ನು ಮಾಡಲಿ."

ಈ ರೀತಿಯಲ್ಲಿ ಹೇಳಿದ ಕೂಡಲೆ, ಟಿಮೋಕ್ರೆಟೀಸನು ಈತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೇಳಿದ್ದೇನಂದರೆ:—"ಎಲೈ ಫೈಲೋಕ್ಲೀಸನೇ, ನಿನ್ನ ಮಹಿಮೆಯನ್ನು ನಾನು ತಿಳಿದುಕೊಂಡಿರಲಿಲ್ಲ. ಪ್ರಾಟೆಸಿಲನ ದುರ್ಬೋಧನೆಯಿಂದ ನಿನ್ನನ್ನು ಕೊಲ್ಲುವ ಪ್ರಯತ್ನವನ್ನು ಮಾಡಿದೆನು. ದೈವಯೋಗದಿಂದ ನೀನು ಬದುಕಿಕೊಂಡೆ. ಇದಕ್ಕಾಗಿ ನಾನು ತುಂಬಾ ಸಂತೋಷಿಸುತ್ತೇನೆ. ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯು ನನಗೆ ಆಗಿರುವುದು. ಸೇಮಾಸ್ ದ್ವೀಪದಲ್ಲಿ ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೊಂದುತ್ತೇನೆ. ನಿನಗೆ ಸನ್ಮಂಗಳವಾಗಲಿ. ಮಹಾತ್ಮರಾದವರು ಅಪಕಾರಿಗಳಿಗೆ ಉಪಕಾರವನ್ನು ಮಾಡುವರು. ನನ್ನ ಅಪರಾಧವನ್ನು ಮನ್ನಿಸಿ, ನನ್ನ ಕುಟುಂಬವನ್ನು ರಕ್ಷಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಹೇಳಿದನು.

ಅವರ ಪ್ರಾರ್ಥನೆಗಳಂತೆ ಈ ಉಭಯತ್ರರ ಕುಟುಂಬಕ್ಕೂ ಸಹಾಯ ಮಾಡುವುದಕ್ಕೆ ಆತನು ಒಪ್ಪಿಕೊಂಡನು. ಅನಂತರ ಹೆಜೆಸಿಪಸ್ಸನು ಅವರನ್ನು ಕರೆದುಕೊಂಡು ಹೋಗಿ ಸದರಿ ದ್ವೀಪಕ್ಕೆ ಬಿಟ್ಟನು.

ಈ ಇಬ್ಬರೂ ತಾವು ಅಧಿಕಾರದಲ್ಲಿದ್ದಾಗ ಮಾಡಿದ ಅಪರಾಧಗಳನ್ನೂ, ಅದಕ್ಕೆ ಆದ ಪ್ರತಿಫಲವನ್ನೂ ಪರ್ಯಾಲೋಚಿಸಿಕೊಂಡು, ಅಧಿಕಾರ ಮದದಿಂದ ತಾವು ಮಾಡಿದ ಅಕೃತ್ಯಗಳಿಗೆ ಆದ ಶಿಕ್ಷೆಯು ತಮ್ಮ ಕ್ಷೇಮಕ್ಕೋಸ್ಕರವೇ ಉಂಟಾಗಿರುವುದೆಂದು ಭಾವಿಸಿಕೊಂಡು, ದೇವರಲ್ಲಿ ಭಕ್ತಿಯನ್ನು ಇಟ್ಟು, ಆ ದ್ವೀಪನಿ

ವಾಸಿಗಳ ಸೇವೆಯನ್ನು ಮಾಡುತ್ತಾ, ಸೌಜನ್ಯವನ್ನೂ, ಪರಸ್ಪರ ಪ್ರೀತಿಯನ್ನೂ ಸಂಪಾದಿಸಿಕೊಂಡು, ಕೃಷಿ, ಕೈಗಾರಿಕೆ, ವ್ಯಾಪಾರ ಮೊದಲಾದವುಗಳಿಂದ ಆ ದ್ವೀಪನಿವಾಸಿಗಳ ಸಂಪತ್ತನ್ನು ಹೆಚ್ಚಿಸುತ್ತಾ ತಾವೂ ಸುಖವಾಗಿದ್ದರು.

ಫೈಲೋಕ್ಲೀಸನು ಇಡುವಿಾನಿಯಸ್ಸನಿಗೂ, ಮೆಂಟರಿಗೂ ಪರಮಾಪ್ತನಾದನು. ಈ ಮೂವರೂ ಸೇರಿ ಇಡುವಿಾನಿಯಸ್ಸನ ಪ್ರಭುತ್ವವು ಮೈನಾಸನ ಪ್ರಭುತ್ವದಂತೆ ಆಗುವುದಕ್ಕೆ ಏನು ಮಾಡಬೇಕೋ ಅದನ್ನೆಲ್ಲಾ ಪರ್ಯಾಲೋಚಿಸಿದರು. ಸ್ಯಾಲೆಂಟ್ ಸಂಸ್ಥಾನದ ಸಕಲ ಕೋಮಿನವರೂ ಪರಸ್ಪರ ಭೇದಭಾವಗಳನ್ನು ಬಿಟ್ಟು, ಮೈತ್ರಿಯಿಂದ ನಡೆಯುವಂತೆ ಮಾಡಲ್ಪಟ್ಟರು. ಈ ಸಂಸ್ಥಾನದ ಮಕ್ಕಳ ವಿದ್ಯಾಭ್ಯಾಸಕ್ಕೆ ಇವರ ಗಮನವು ಕೊಡಲ್ಪಟ್ಟಿತು. ಎಲ್ಲಾ ಮಕ್ಕಳಿಗೂ ಗುರುಹಿರಿಯರಲ್ಲಿ ಭಕ್ತಿಯೂ, ಪರೋಪಕಾರದಲ್ಲಿ ಆಸಕ್ತಿಯೂ, ಪರಪೀಡೆಯಲ್ಲಿ ಪರಾಙ್ಮುಖತೆಯೂ ಹುಟ್ಟುವಂತೆ ಏರ್ಪಾಡುಗಳು ಮಾಡಲ್ಪಟ್ಟವು. ಆರೋಗದೃಢಕಾಯತೆಯು ಧರ್ಮಸಾಧನೆಗೆ ಅಸ್ತಿಭಾರರೂಪವಾದದ್ದರಿಂದ ಅದರ ಪ್ರಾಪ್ತಿಗೆ ಸಾಧಕವಾದ ಕೆಲಸಗಳೂ, ವ್ಯಾಯಾಮಗಳೂ, ಸಮೀಚೀನವಾದ ಆಟಪಾಟಗಳೂ ವಿಧಿಸಲ್ಪಟ್ಟವು. ಲೋಕವ್ಯವಹಾರ ಜ್ಞಾನವು ವಿಶೇಷ ಕ್ಲೇಶವಿಲ್ಲದೆ ಉಂಟಾಗುವಂತೆ ಏರ್ಪಾಡುಗಳು ಮಾಡಲ್ಪಟ್ಟವು. ಸಕಲ ಕಲಾವಿಶಾರದರಾದವರು ಮಕ್ಕಳ ಬುದ್ಧಿಶಕ್ತಿಯನ್ನೂ, ದೇಹಶಕ್ತಿಯನ್ನೂ ಪರಿಶೀಲಿಸಿ, ಸಾಮಾನ್ಯ ವಿದ್ಯಾಭ್ಯಾಸದ ಜೊತೆಯಲ್ಲಿ ಯಾರ್ಯಾರಿಗೆ ಯಾವ ಯಾವ ಕಲೆಗಳಲ್ಲಿ ಬುದ್ಧಿಯು ಓಡುವುದೋ ಅವರವರಿಗೆ ಆಯಾಯ ಕಲೆಗಳಲ್ಲಿ ಶಿಕ್ಷಣವನ್ನು ಕೊಡುವುದಕ್ಕೆ ಏರ್ಪಾಡು ಮಾಡಲ್ಪಟ್ಟಿತು. ಆಬಾಲವೃದ್ಧರೂ ಕೂಡ ಸಂಪದಭಿವೃದ್ಧಿಯ ಕೆಲಸಗಳಲ್ಲಿ ದಿನಕ್ಕೆ 10 ಗಂಟೆಗಳು ಕಡಮೆಯಿಲ್ಲದೆ ಕೆಲಸ ಮಾಡಿಸುವಂತೆ ಏರ್ಪಾಡು ಮಾಡಲ್ಪಟ್ಟಿತು. ಬಾಕಿ ಉಳಿಯತಕ್ಕ 14 ಗಂಟೆಗಳಲ್ಲಿ ನಿದ್ರೆಗೆ 7 ಗಂಟೆಗಳೂ, ಆಹಾರಕ್ಕೂ, ಸಮೀಚೀನವಾದ ವಿಹಾರಗಳಿಗೂ, ಧರ್ಮವಿಚಾರಕ್ಕೂ, ಧರ್ಮಪ್ರಚಾರಕ್ಕೂ, ಇಹಪರಸಾಧನಗಳಿಗೆ ಬೇಕಾದ ಆಚಾರಗಳಿಗೂ 7 ಗಂಟೆಗಳು ವಿನಿಯೋಗಿಸಲ್ಪಡುವಂತೆ ಏರ್ಪಾಡುಗಳು ಮಾಡಲ್ಪಟ್ಟವು. ಜನಗಳ ಶೀಲಸ್ವಭಾವಗಳನ್ನು ಪರಿಶೀಲಿಸಿ, ರಿಪೋರ್ಟು ಮಾಡುವುದಕ್ಕೆ ಪ್ರಾಮಾಣಿಕರಾದ ಸ್ತ್ರೀಪುರುಷರು ನಿಯಮಿಸಲ್ಪಟ್ಟರು. ಪ್ರತಿ ಒಬ್ಬರ ನಡೆನುಡಿಗಳನ್ನು ಪರಿಶೀಲಿಸಿ, ಯಾರಾದರೂ ಮಾರ್ಗವನ್ನು ತಪ್ಪಿ ನಡೆದರೆ, ತಕ್ಷಣದಲ್ಲಿಯೇ ಇಡುವಿಾನಿಯಸ್ಸನಿಗೆ

ಸದರಿ ವಿಷಯವು ರಿಪೋರ್ಟಾಗುವುದಕ್ಕೆ ಏರ್ಪಾಡು ಮಾಡಲ್ಪಟ್ಟಿತು. ಅಂಥಾ ರಿಪೋರ್ಟುಗಳು ಬಂದ ಕೂಡಲೆ, ಇಡುಮೀನಿಯುಸ್ಸನೂ, ಮೆಂಟರೂ, ಫೈಲೋಕ್ಲಿಸನೂ ಸದರಿ ಜನಗಳನ್ನು ಕರೆಸಿ, ಅವರಿಗೆ ಎಚ್ಚರಿಕೆಯನ್ನು ಕೊಟ್ಟು, ಹಿತೋಪದೇಶವನ್ನು ಮಾಡಿ, ಅವರ ನಡೆನುಡಿಗಳನ್ನು ಪರಿಶೀಲಿಸುವುದಕ್ಕೆ ಯೋಗ್ಯರಾದ ಜನಗಳನ್ನು ನಿಯಮಿಸಿ, ಮೇಲ್ವಿಚಾರಣೆಗೆ ಏರ್ಪಾಡು ಮಾಡುತ್ತಿದ್ದರು. ರಾಜ್ಯದಲ್ಲಿ ಸರ್ವರೂ ಸರ್ವರ ಸೇವೆಯಿಂದ ಬದುಕುವುದರಲ್ಲಿ ಆಸಕ್ತರಾಗುವಂತೆ ಇಡುಮೀನಿಯುಸ್ಸನೇ ಖುದ್ದಾಗಿ ಮೇಲ್ಪಂಕ್ತಿಯನ್ನು ಹಾಕುತ್ತಾ ಬಂದನು. ಪ್ರಭುವೇ ಪ್ರಜೆಗಳ ಸೇವೆಯನ್ನು ಮಾಡುವುದನ್ನು ನೋಡಿ, ಪ್ರಜೆಗಳೆಲ್ಲರೂ ಯಾರಿಗೆ ಏನು ಕಷ್ಟಬಂದಾಗ್ಯೂ, ಪರರ ಸೇವೆಯನ್ನು ಮಾಡುವುದೇ ತಮ್ಮ ಮುಖ್ಯ ಕರ್ತವ್ಯವೆಂದು ತಿಳಿದುಕೊಂಡು, ಸ್ವಾರ್ಥಪರತೆಯು ಪರಾರ್ಥವಾಗಿ ಮೆಹನತ್ತು ಮಾಡುವುದೆಂದು ತಿಳಿದುಕೊಂಡು ಕೆಲಸ ಮಾಡುತ್ತಾ ಬಂದರು. ಇವನ ದೇಶದಲ್ಲಿ ಅಭಕ್ಷ್ಯ ಭೋಜನ, ಅಪೇಯಪಾನ, ಅಗಮ್ಯಾಗಮನ, ಜಾತಿದ್ವೇಷ, ಮತದ್ವೇಷ, ಪಂಗಡದ್ವೇಷ ಮೊದಲಾದವುಗಳೆಲ್ಲಾ ಸ್ಮೃತಿಪಥವನ್ನೈದಿದವು. ಪ್ರತಿ ದಿನವೂ ಸಂಪದಭಿವೃದ್ಧಿಗೆ ಸಾಧಕವಾದ ಕೆಲಸಗಳು ಪ್ರಾತಃಕಾಲದಿಂದ ಸಾಯಂಕಾಲದವರೆಗೂ ನಡೆಯುತ್ತಿದ್ದವು. ಸಾಯಂಕಾಲವಾದ ಕೂಡಲೆ, ಉದ್ಯೋಗದಿಂದ ದಣಿದಿರತಕ್ಕ ಶರೀರಕ್ಕೂ, ಮನಸ್ಸಿಗೂ ವಿಶ್ರಾಂತಿಯನ್ನೂ, ಶಕ್ತಿಯನ್ನೂ ಕೊಡುವ ವಿಹಾರಗಳೂ, ಪುರಾಣಗಳೂ, ಪುಣ್ಯಕಥೆಗಳೂ, ಉಪನ್ಯಾಸಗಳೂ ಇವೇ ಮೊದಲಾದವುಗಳಿಂದ ಈ ಸಂಸ್ಥಾನದ ಪ್ರತಿ ಒಂದು ಭಾಗದಲ್ಲಿಯೂ ಸತ್ಕಾವ್ಯಾಲಾಪಗಳು ನಡೆಯುತ್ತಿದ್ದವು. ಸಕಲ ಜನಗಳ ಕಣ್ಣುಗಳಿಗೂ, ಕಿವಿಗಳಿಗೂ, ಮನಸ್ಸಿಗೂ ಸಮೀಚೀನವಾದ ಆನಂದವು ಹುಟ್ಟುವುದಕ್ಕೆ ಏರ್ಪಾಡುಗಳು ಮಾಡಲ್ಪಟ್ಟವು. ಇಡುಮೀನಿಯುಸ್ಸನ ಪ್ರಜೆಗಳೆಲ್ಲರೂ ಆರೋಗದೃಢಕಾಯರಾಗಿಯೂ, ಪುರುಷಕಾರವುಳ್ಳವರಾಗಿಯೂ, ಉದ್ಯೋಗಿಗಳಾಗಿಯೂ, ಪರೋಪಕಾರ ಪರಾಯಣರಾಗಿಯೂ ಆದರು. ಇವನ ದೇಶದಲ್ಲಿ ಸ್ತ್ರೀಯರು ಸಾಧ್ವಿಗಳಾಗಿಯೂ, ಕಾರ್ಯಾಚಾರ್ಯೆಯರಾಗಿಯೂ, ಗೃಹಕೃತ್ಯಗಳನ್ನು ಮಾಡುವುದರಲ್ಲಿ ಅಸಹಾಯಶೂರೆಯರಾಗಿಯೂ, ಮಕ್ಕಳಿಗೆ ಸಮೀಚೀನವಾದ ಶಿಕ್ಷಣವನ್ನು ಮಾಡುವುದರಲ್ಲಿ ದಕ್ಷೆಯರಾಗಿಯೂ ಆದರು. ಇವನ ಪ್ರಭುತ್ವದಲ್ಲಿ ಸ್ಕೂಲುಗಳೂ, ಕಾಲೇಜುಗಳೂ, ವರ್ಕ್ ಷಾಪುಗಳೂ ವಿದ್ಯಾರ್ಥಿಗಳಿಂದ ತುಂಬಿದ್ದವು. ಪೋಲೀಸಿನ

ವರಿಗೂ, ಜಡ್ಜಿಯವರಿಗೂ, ಮ್ಯಾಜಿಸ್ಟ್ರೇಟುಗಳಿಗೂ ಕೆಲಸವಿರಲಿಲ್ಲ. ಲಾಯರು ಗಳ ಆವಶ್ಯಕತೆಯು ಲೇಶವೂ ಇರಲಿಲ್ಲ. ಜೈಲುಗಳು ಬರಿದಾದವು. ಸೈನ್ಯಕ್ಕೆ ಕೆಲಸವಿರಲಿಲ್ಲ. ದುಷ್ಟನಿಗ್ರಹ, ಶಿಷ್ಟಪರಿಪಾಲನೆಗೆ ನಿಯಮಿಸಲ್ಪಟ್ಟ ಜನಗಳು ಕೆಲಸವಿಲ್ಲದೆ ಸಂಪದಭಿವೃದ್ಧಿಯ ಕೆಲಸದಲ್ಲಿ ಮಹಾಜನಗಳೊಡನೆ ಸೇರಿ, ತಾವೂ ಕೂಡ ಕೆಲಸ ಮಾಡುವುದಕ್ಕೆ ಉಪಕ್ರಮಿಸಿದರು. ಸಕಲರೂ ಅವರವರ ವರ್ಣಾ ಶ್ರಮ ಧರ್ಮಗಳನ್ನು ಮಾಡುವುದರಲ್ಲಿ ನಿರತರಾದರು. ಸಕಲ ಕಸಬಿನವರೂ ತಮ್ಮ ಕೆಲಸಗಳನ್ನು ಚನ್ನಾಗಿ ಮಾಡಿ, ತನ್ಮೂಲಕ ಇತರ ಕೆಲಸಗಳಿಗೆ ಸಹಾಯ ಮಾಡು ವುದರಲ್ಲಿ ಬದ್ಧಾದರರಾಗಿದ್ದರು. ಪ್ರತಿ ಒಂದು ಪಂಗಡದವರೂ ಅವರವರ ಕಸ ಬುಗಳನ್ನು ಶ್ರದ್ಧೆಯಿಂದ ಮಾಡಿ, ಅವರ ಜೀವನಕ್ಕೆ ಬೇಕಾದ್ದನ್ನು ಸಂಪಾದಿಸಿ ಕೊಳ್ಳುವುದರಲ್ಲಿ ನಿರತರಾಗಿದ್ದರು. ಎಲ್ಲಾ ಕಸಬುಗಳಿಂದಲೂ ಎಲ್ಲರಿಗೂ ಸುಖ ವಾಗಿ ಜೀವನವಾಗುತ್ತಿತ್ತು. ಯಾವ ಪಂಗಡದವರಿಗೇ ಆಗಲಿ, ಅವರಲ್ಲಿ ಯಾವ ಕುಟುಂಬದವರಿಗೇ ಆಗಲಿ ಸರಿಯಾದ ಜೀವನವು ಆಗುತ್ತಲಿಲ್ಲವೆಂದು ರಿಪೋರ್ಟು ಮಾಡಲ್ಪಟ್ಟರೆ, ತಕ್ಷಣದಲ್ಲಿಯೇ ಇಡುಮಿಾನಿಯಸ್ಸನು ಮೆಂಟರೂ, ಫೈಲೋಕ್ಲೀಸ್ ಮೊದಲಾದವರೊಡನೆ ಪರ್ಯಾಲೋಚಿಸಿ, ಹಿಂದಾಳುಗಳನ್ನು ಮುಂದಕ್ಕೆ ತರುವ ಪ್ರ ಯತ್ನವನ್ನು ಮಾಡುತ್ತಿದ್ದನು. ಸ್ಯಾಲೆಂಟ್ ಸಂಸ್ಥಾನದ ಪ್ರಜೆಗಳೆಲ್ಲರೂ ಇ ಡುಮಿಾನಿಯಸ್ಸನನ್ನು ತಮ್ಮ ಪ್ರಭುವೆಂದು ಮಾತ್ರವೇ ಪೂಜಿಸುತ್ತಿರಲಿಲ್ಲ. ತಮ್ಮ ಗುರುವೆಂಬದಾಗಿಯೂ, ಆಚಾರ್ಯನೆಂಬದಾಗಿಯೂ, ಇಹಪರಸಾಧನೆಗಳಿಗೆ ಮಾರ್ಗ ದರ್ಶಿಯೆಂಬದಾಗಿಯೂ ಅವನನ್ನು ತಿಳಿದುಕೊಂಡು, ಅವನಲ್ಲಿ ಅಕೃತ್ರಿಮವಾದ ಭಕ್ತಿವಿಶ್ವಾಸಗಳನ್ನು ಇಟ್ಟುಕೊಂಡಿದ್ದರು. ಅವನ ದೇಶದಲ್ಲಿ ಅತೃಪ್ತಿಯು ಎಲ್ಲಿ ಯೂ ಕಾಣುತ್ತಿರಲಿಲ್ಲ. ಎಲ್ಲರೂ ತೃಪ್ತರಾಗಿಯೂ, ಸಂತುಷ್ಟರಾಗಿಯೂ ಇದ್ದರು. ಈತನಿಗೂ, ಇವನ ಪ್ರಜೆಗಳಿಗೂ ಇದ್ದ ನಿಸರ್ಗವಾದ ಮೈತ್ರಿಯನ್ನು ನೋಡಿ, ನೆರೆಹೊರೆಯ ರಾಜರೆಲ್ಲರೂ ವಿಸ್ಮಿತರಾಗಿ, ಇವನ ರಾಜ್ಯದಲ್ಲಿ ಧರ್ಮವು ಇಷ್ಟು ಪರಾಕಾಷ್ಠದೆಸೆಗೆ ಬರುವುದಕ್ಕೆ ಕಾರಣವೇನೋ ಅದನ್ನು ತಿಳಿದುಕೊಳ್ಳುವು ದಕ್ಕೋಸ್ಕರ ಇವನ ದೇಶಕ್ಕೆ ಬರುವುದಕ್ಕೆ ಉಪಕ್ರಮ ಮಾಡಿದರು. ಮೂರ್ತೀ ಭವಿಸಿದ ಧರ್ಮಗಳಂತಿರುವ ಮೆಂಟರನನ್ನೂ, ಫೈಲೋಕ್ಲೀಸನನ್ನೂ ನೋಡಿ, ಈ ದೇಶದಲ್ಲಿ ಧರ್ಮಯುಗವು ಆವಿರ್ಭವಿಸಿ, ಈ ದೇಶವೇ ಸ್ವರ್ಗವಾಗುವಂತೆ ಮಾಡಿ ರುವುದಕ್ಕೆ ಇವರೇ ಕಾರಣಭೂತರೆಂದು ತಿಳಿದುಕೊಂಡು, ಅವರ ಸಂಭಾಷಣಗ

ಳಿಂದ ಅಸಾಧಾರಣವಾದ ಪ್ರಯೋಜನಗಳನ್ನು ಹೊಂದಿ, ಧನ್ಯತೆಯನ್ನು ಪಡೆಯ ಬಹುದೆಂದು ಇಡುವಿಾನಿಯಸ್ಸನ ಮೇಲ್ಪಂಕ್ತಿಯನ್ನನುಸರಿಸುವುದಕ್ಕೆ ಉಪಕ್ರಮ ಮಾಡಿದರು.

ಹೀಗೆ ಪ್ರಭುತ್ವವು ನಡೆಯುತ್ತಲಿರುವಾಗ, ಟೆಲಿಮಾಕಸ್ಸನು ನೆಸ್ಟರ್ ಮೊದಲಾದ ಮಿತ್ರಮಂಡಲಿಯವರಿಗೆ ಸಹಾಯವನ್ನು ಮಾಡಿ, ಅವರ ಶತ್ರುಗಳನ್ನು ನಿಗ್ರಹಿಸಿ, ಅವರ ದೇಶವು ನಿಶ್ಶತ್ರುವಾಗುವಂತೆ ಮಾಡಿ, ಅವರಿಂದ ಸನ್ಮಾನಗಳನ್ನು ಪಡೆದು, ಸ್ಯಾಲೆಂಟ್ ಸಂಸ್ಥಾನಕ್ಕೆ ಬಂದು, ಮೆಂಟರನಿಗೆ ನಡೆದ ವಿಷ್ಯಮಾನಗಳನ್ನೆಲ್ಲಾ ವಿಜ್ಞಾಪಿಸಿದನು.

ಫೈಲೋಕ್ಲೀಸನು ಮೆಂಟರಿಗೂ ಟೆಲಿಮಾಕಸ್ಸನಿಗೂ ನಡೆದ ಕುಶಲಪ್ರಶ್ನೆಗಳನ್ನೂ, ದಿಗ್ವಿಜಯದ ಚರಿತ್ರೆಯನ್ನೂ ಕೇಳಿ ಅತ್ಯಂತ ವಿಸ್ಮಿತನಾದನು. ಈ ಪರದೇಶೀಯರಾದ ಮೆಂಟರೂ ಮತ್ತು ಟೆಲಿಮಾಕಸ್ಸನೂ ಸರ್ವಥಾ ಮನುಷ್ಯರಲ್ಲವೆಂಬದಾಗಿಯೂ, ಇಡುವಿಾನಿಯಸ್ಸನ ಪುಣ್ಯಪರಿಪಾಕದಿಂದ ದೇವರೇ ಗುರುಶಿಷ್ಯರೂಪವಾಗಿ ಮೆಂಟರು ಮತ್ತು ಟೆಲಿಮಾಕಸ್ಸರ ವೇಷಧಾರಿಯಾಗಿ, ಲೋಕಹಿತಾರ್ಥವಾಗಿ ಅವತರಿಸಿರಬಹುದೆಂಬದಾಗಿ ತಿಳಿದುಕೊಂಡನು.

---

## ಹದಿನಾಲ್ಕನೆಯ ಅಧ್ಯಾಯ.



ನೆಸ್ಟರು ಮೊದಲಾದ ಮಿತ್ರಮಂಡಲಿಯವರಿಗೆ ಸಹಾಯಾರ್ಥವಾಗಿ ಟೆಲಿಮಾಕಸ್ಸನು ಮೆಂಟರನಿಂದ ಕಳುಹಿಸಲ್ಪಟ್ಟನಷ್ಟೆ. ಮಿತ್ರಮಂಡಲಿಯ ಪ್ರಭುಗಳಲ್ಲಿ ನೆಸ್ಟರನು ವಯೋವೃದ್ಧನಾಗಿಯೂ, ಜ್ಞಾನವೃದ್ಧನಾಗಿಯೂ ಇದ್ದನು. ಬಾಲ್ಯದಿಂದಲೂ ಅವನಿಗೂ, ಯೂಲಿಸಸ್ಸನಿಗೂ ಪರಮ ಮೈತ್ರಿಯು ಇತ್ತು. ಆದುದರಿಂದ ಈತನಿಗೆ ಟೆಲಿಮಾಕಸ್ಸನಲ್ಲಿ ಪುತ್ರನಿರ್ವಿಶೇಷವಾದ ಪ್ರೀತಿಯು ನಿಸರ್ಗವಾಗಿತ್ತು. ಟೆಲಿಮಾಕಸ್ಸನಿಗೆ ಟ್ರಾಯ್ ಯುದ್ಧದಲ್ಲಿ ಉಭಯ ಕಕ್ಷಿಯಲ್ಲಿಯೂ ಎಂಥಾ ಮಹಾವೀರರಿದ್ದರೋ, ಧರ್ಮಕ್ಕೋಸ್ಕರ ಅವರು ಹೇಗೆ ಯುದ್ಧಮಾಡಿದರೋ, ಪರಿಣಾಮದಲ್ಲಿ ಧರ್ಮವು ಹೇಗೆ ಜಯಿಸಿತೋ, ಅಧರ್ಮಕ್ಕೆ ಹೇಗೆ ಅಧೋ

ಗತಿಯು ಬಂದಿತೋ, ಧರ್ಮಕ್ಕೂ, ಅಧರ್ಮಕ್ಕೂ ಆದ ಯುದ್ಧದಲ್ಲಿ ಯೂಲಿಸಸ್ಸನು ಹೇಗೆ ಧರ್ಮವಾದ ಹಿತೋಪದೇಶಗಳನ್ನು ಮಾಡಿದನೋ, ಅವನ ಧರ್ಮೋಪದೇಶದ ಮಹಿಮೆಯಿಂದ ಪಾಪಿಷ್ಠರೆಲ್ಲರೂ ಹೇಗೆ ಭಸ್ಮೀಭೂತರಾದರೋ, ಯೂಲಿಸಸ್ಸಿಗೂ, ತನಗೂ ಹೇಗೆ ಮನಸ್ತಾಪಗಳು ಬಂದವೋ, ಮನಸ್ತಾಪಗಳು ಹೇಗೆ ಪರಿಹಾರವಾದವೋ, ಈ ಮನಸ್ತಾಪಕ್ಕೂ, ಅದರ ವೃದ್ಧಿಗೂ, ಅದರ ಪರಿಹಾರಕ್ಕೂ ಕಾರಣಗಳು ಏನಾಗಿದ್ದವೋ ಇವುಗಳನ್ನೆಲ್ಲಾ ನೆಸ್ಟರನು ಟಿಲಿಮಾಕಸ್ಸನಿಗೆ ಸಂಕ್ಷೇಪವಾಗಿ ಹೇಳಿದನು. ತಪಶೀಲುವಾರಾಗಿ ಅದನ್ನು ತಿಳಿದುಕೊಳ್ಳಬೇಕೆಂದು ಟಿಲಿಮಾಕಸ್ಸನು ಪ್ರಾರ್ಥಿಸಲು, ಅವನನ್ನು ಕುರಿತು ನೆಸ್ಟರು ಹೇಳಿದ್ದೇನಂದರೆ:—

"ಈ ಟ್ರಾಯ್ ಯುದ್ಧದಲ್ಲಿ ಹರ್ಕ್ಯುಲೀಸ್ ಎಂಬ ಯೋಧನಿದ್ದನು. ಅವನು ದೇಹಶಕ್ತಿಯಲ್ಲಿ ಹೇಗೆ ಅದ್ವಿತೀಯನಾಗಿದ್ದನೋ ಬುದ್ಧಿ ಶಕ್ತಿಯಲ್ಲಿಯೂ ಹಾಗೆಯೇ ಅದ್ವಿತೀಯನಾಗಿದ್ದನು. ಎಷ್ಟೋ ಜನ ರಾಕ್ಷಸರನ್ನು ಇವನು ಸಂಹರಿಸಿ ಗೆದ್ದನು. ಇವನ ಧೈರ್ಯಸ್ಥೈರ್ಯಗಳು ಪ್ರಪಂಚಕ್ಕೆ ಕಲ್ಪವೃಕ್ಷಪ್ರಾಯವಾಗಿದ್ದವು. ಇವನು ಪರಾಕ್ರಮಶಾಲಿಗಳಲ್ಲಿ ಅತ್ಯಂತ ಪರಾಕ್ರಮಶಾಲಿಯಾಗಿದ್ದನು. ದೇವರು ಸಕಲ ಗುಣಾತಿಶಯಗಳನ್ನೂ ಇವನಿಗೆ ಕೊಟ್ಟಿದ್ದನು. ಅದರ ಜೊತೆಯಲ್ಲಿ ಒಂದು ದೌರ್ಬಲ್ಯವನ್ನು ಇವನಿಗೆ ವಿಶೇಷವಾಗಿ ಕೊಟ್ಟಿದ್ದನು. ಇವನ ದುರದೃಷ್ಟಕ್ಕೆ ಅದೇ ಕಾರಣವಾಯಿತು. ಇವನು ಶತ್ರುಗಳನ್ನು ಗೆಲ್ಲುವುದರಲ್ಲಿ ನಿಸ್ಸೀಮನಾಗಿದ್ದನು. ಆದರೆ ಶೌರ್ಯಕ್ಕೆ ಅನುರೂಪವಾದ ಸ್ಥೈರ್ಯವು ಇವನಲ್ಲಿ ಇರಲಿಲ್ಲ. ಎಂಥಾ ಶತ್ರುಗಳನ್ನು ಬೇಕಾದರೂ ಗೆಲ್ಲಬಹುದು. ಸ್ತ್ರೀಯರ ವಿಷಯದಲ್ಲಿ ಇರತಕ್ಕ ವ್ಯಾಮೋಹವನ್ನು ಗೆಲ್ಲುವುದು ಕಷ್ಟ. ಆಂಫೆಲಿ ಎಂಬ ಒಬ್ಬ ಸುಂದರಿಯು ಇದ್ದಳು. ಹರ್ಕ್ಯುಲೀಸನು ಪರಾಕ್ರಮಶಾಲಿಗಳಲ್ಲಿ ಅಗ್ರಗಣ್ಯನಾಗಿದ್ದಾಗ್ಯೂ, ಆಂಫೇಲಿಗೆ ಪಾದ ಸೇವಕನಾದ ದಾಸನಾಗಿದ್ದನು. ಇವಳ ಬಲೆಗೆ ಬಿದ್ದು, ಅದರಿಂದ ತಪ್ಪಿಸಿಕೊಳ್ಳುವುದು ಇವನಿಗೆ ಅಸಾಧ್ಯವಾಯಿತು. ಒಬ್ಬ ಸುಂದರಿಗೆ ದಾಸನಾದರೆ, ಅವಳಿಗಿಂತ ಹೆಚ್ಚು ರೂಪುಲಾವಣ್ಯಗಳುಳ್ಳವರು ದೊರೆತರೆ, ಅವಳಿಗೂ ಸ್ಥೈರ್ಯವಿಲ್ಲದ ಮನುಷ್ಯನು ದಾಸನಾಗುವುದು ಅಸಂಭವವಲ್ಲ. ಡೈನೀರಾ ಎಂಬ ಇನ್ನೊಬ್ಬ ಸುಂದರಿಯು ಈತನ ದೃಷ್ಟಿಪಥಕ್ಕೆ ಬಿದ್ದಳು. ಅವಳ ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳಿಗೆ ಇವನು ಅಧೀನನಾದನು. ಅವಳನ್ನು ಮದುವೆ ಮಾಡಿಕೊಂಡನು. ಅಷ್ಟರಲ್ಲಿಯೇ ಅಯೋಲಿ ಎಂಬ ಇನ್ನೊಬ್ಬ ರೂಪವತಿಯು ಇವನ ಮನಸ್ಸನ್ನು ಆಳ

ರ್ಪಿಸಿದಳು. ತನ್ನ ಗಂಡನನ್ನು ಅಯೋಲಿ ಎಂಬುವಳು ಅಪಹರಿಸಿದಳಲ್ಲಾ ಎಂದು ಡೈನೀರಳಿಗೆ ವ್ಯಾಕುಲ ಉಂಟಾಯಿತು. ಸದರಿ ವ್ಯಾಕುಲವು ದ್ವೇಷವಾಗಿ ಪರಿಣಮಿಸಿತು. ಹರ್ಕ್ಯುಲೀಸನು ವಿವಾಹ ಕಾಲದಲ್ಲಿ ಮಾಡಿದ ಪ್ರತಿಜ್ಞೆಯನ್ನು ಉಲ್ಲಂಘಿಸಿ, ಅಯೋಲಿಯಳನ್ನು ಪರಿಗ್ರಹಿಸಿದ್ದು ಮಹಾದ್ರೋಹವೆಂಬದಾಗಿಯೂ, ಈ ದ್ರೋಹಕ್ಕೆ ತಕ್ಕ ಶಿಕ್ಷೆಯನ್ನು ಇವನಿಗೆ ಮಾಡಬೇಕೆಂಬದಾಗಿಯೂ ಇವಳು ನಿಷ್ಕರ್ಷೆಮಾಡಿದಳು. ಒಂದು ಮನೋಹರವಾದ ಅಂಗಿಯನ್ನು ಹೊಲಿಸಿದಳು. ಅತ್ಯಂತ ತೀಕ್ಷ್ಣವಾದ ವಿಷವನ್ನು ಅದಕ್ಕೆ ಸೇರಿಸಿದಳು. ಲೈಕಾಸ್ ಎಂಬುವನ ಮೂಲಕ ಅದನ್ನು ಹರ್ಕ್ಯುಲೀಸನಿಗೆ ಕಳುಹಿಸಿದಳು. ಆ ಅಂಗಿಯ ರಮಣೀಯತೆಯನ್ನು ನೋಡಿ, ಆಶ್ಚರ್ಯಪಟ್ಟು, ಹರ್ಕ್ಯುಲೀಸನು ಅದನ್ನು ಧರಿಸಿಕೊಂಡನು. ಕೂಡಲೆ ಅದರಲ್ಲಿದ್ದ ವಿಷವು ರೋಮಕೂಪಗಳಿಂದ ಇವನ ದೇಹವನ್ನು ಪ್ರವೇಶಿಸಲು, ಅನಿರ್ವಚನೀಯವಾದ ಸಂಕಟವು ಉಂಟಾಯಿತು. ಇದಕ್ಕೆ ಲೈಕಾಸನೇ ಕಾರಣಭೂತನೆಂದು ತಿಳಿದುಕೊಂಡು, ಅತ್ಯಂತ ಆಗ್ರಹದಿಂದ ಅವನನ್ನು ಹಿಡಿದು ಒಂದೇ ಏಟಿನಲ್ಲಿ ವಧಿಸಿ, ಸಮುದ್ರಕ್ಕೆ ಬಿಸಾಟನು. ಲೈಕಾಸನು ನಿರಪರಾಧಿಯು. ಅದು ವಿಷಮಯವಾದ ಅಂಗಿಯೆಂದು ಅವನಿಗೆ ತಿಳಿದಿರಲಿಲ್ಲ. ವಿಚಾರವಿಹೀನನಾಗಿ ಹರ್ಕ್ಯುಲೀಸನು ಈತನನ್ನು ಕೊಂದನು. ತನ್ನ ಯಾತನೆಗೆ ಕಾರಣಭೂತಳಾದವಳು ಡೆನೀರಳೆಂದು ಗೊತ್ತುಮಾಡಿಕೊಳ್ಳುವುದಕ್ಕೂ ಇವನು ಶಕ್ತನಾಗಲಿಲ್ಲ. ಅವಳನ್ನು ನಿಂದಿಸಿ ತಾನೇ ಪ್ರಯೋಜನವೇನು? ಅವಳಲ್ಲಿ ದ್ವೇಷ ಹುಟ್ಟುವುದಕ್ಕೆ ಇವನ ದುರ್ವಿಷಯಾಸಕ್ತಿಯೇ ಮುಖ್ಯಕಾರಣ. ಅಯೋಲಿಯಳಲ್ಲಿ ಅನುರಕ್ತನಾಗಿ, ಡೈನೀರಳನ್ನು ತಿರಸ್ಕರಿಸಿದ್ದೇ ಈ ಅನರ್ಥಕ್ಕೆ ಕಾರಣ. ವಿಷಯಪರವಶರಾದವರಿಗೆ ತಮ್ಮ ದೋಷಗಳು ತಿಳಿಯುವುದಿಲ್ಲ. ಸದರಿ ಅಂಗಿಯನ್ನು ತೆಗೆಯಬೇಕೆಂದು ಇವನು ಬಹಳ ಸಾಹಸ ಮಾಡಿದನು. ಅದನ್ನು ತೆಗೆಯುವುದು ಅಸಾಧ್ಯವಾಯಿತು. ಚರ್ಮದೊಡನೆ ಅದು ಸಂಬಂಧಿಸಿಕೊಂಡಿತು. ಬಲಾತ್ಕಾರವಾಗಿ ತೆಗೆಯುವುದಕ್ಕೆ ಪ್ರಯತ್ನ ಮಾಡಿದನು. ಚರ್ಮವು ಅದರ ಜೊತೆಯಲ್ಲಿ ಒರುವುದಕ್ಕೆ ಉಪಕ್ರಮವಾಯಿತು. ಆ ವಿಷದ ಯಾತನೆಯನ್ನು ಸಹಿಸಲಾರದೆ ಅಂಗಿಯನ್ನು ತೆಗೆಯಬೇಕೆಂದು ಕಿತ್ತನು. ಚರ್ಮವೂ ಅದರ ಜೊತೆಯಲ್ಲೇ ಬಂದಿತು. ರಕ್ತವು ದೇಹದ ಎಲ್ಲಾ ಭಾಗಗಳಿಂದಲೂ ಸುರಿಯುವುದಕ್ಕೆ ಉಪಕ್ರಮವಾಯಿತು. ಆಗ ಅವನು ಅನಿರ್ವಚನೀಯವಾದ ಯಾತನೆಯನ್ನು ಹೊಂದಿದನು. ಈ ಯಾತನೆಯಲ್ಲಿ ಅವನು ಹೇಳಿದ್ದೇನೆಂದರೆ:—

"ಜಗದೀಶ್ವರನೇ ನೀನು ಕೇವಲ ನಿರ್ಘೃಣನು. ನಮಗೆ ಇಂದ್ರಿಯ ಗಳನ್ನು ಕೊಟ್ಟಿರುವಿ. ಅವುಗಳಿಗೆ ಸದ್ವಿಷಯಗಳನ್ನೂ, ದುರ್ವಿಷಯಗಳನ್ನೂ ಕಲ್ಪಿಸಿರುವಿ. ಸದ್ವಿಷಯಗಳಲ್ಲಿ ಆಸಕ್ತರಾದವರಿಗೆ ಒಳ್ಳೆಯ ಫಲವನ್ನು ಕೊಡುವಿ. ದುರ್ವಿಷಯಗಳಲ್ಲಿ ಆಸಕ್ತರಾದವರಿಗೆ ಈಗ ನನಗೆ ಬಂದಿರುವ ಗತಿಯನ್ನು ಕೊಡುವಿ. ನಾನು ಅಪರಾಧವನ್ನು ಮಾಡಿದೆನು. ನಾನು ವಿವಾಹಕಾಲದಲ್ಲಿ ಮಾಡಿದ ಪ್ರತಿಜ್ಞೆಯನ್ನು ಉಲ್ಲಂಘಿಸಿದೆನು. ಅಯೋಲಿಯಳ ಸೌಂದರ್ಯವನ್ನು ನೋಡಿ ಧರ್ಮಪತ್ನಿಯನ್ನು ನಿರಾಕರಿಸಿದೆನು. ನನ್ನ ಅಧರ್ಮಪ್ರವರ್ತನವೇ ನನಗೆ ಮೃತ್ಯುವಾಯಿತು. ಈ ದುಸ್ಸಹವಾದ ಶಿಕ್ಷೆಗೆ ನೀನು ನನ್ನನ್ನು ಗುರಿಮಾಡಿರುವಿ. ಈ ಕಷ್ಟವನ್ನು ನಾನು ಸಹಿಸಲಾರೆ. ಶೀಘ್ರದಲ್ಲಿಯೇ ಈ ಯಾತನೆಯು ತಪ್ಪುವಂತೆ ಮಾಡು. ಲೈಕಾಸನು ಈ ಯಾತನೆಗೆ ಕಾರಣಭೂತನೆಂದು ತಿಳಿದುಕೊಂಡು, ನಾನು ಅವನನ್ನು ಸಂಹರಿಸಿದೆನು. ಈ ವಿಷಪ್ರಯೋಗಕ್ಕೆ ಅವನು ಕಾರಣಭೂತನಲ್ಲವೆಂದು ಗೊತ್ತಾಗುತ್ತದೆ. ಡೈಯೀರಳು ಇದಕ್ಕೆ ಕಾರಣಭೂತಳೆಂದು ತಿಳಿಯಿತು. ಅವಳು ತಾನೆ ಹೇಗೆ ಕಾರಣಭೂತಳು ? ನಾನು ಅವಳಿಗೆ ದ್ರೋಹವನ್ನು ಮಾಡಿದೆನು. ನನ್ನ ದ್ರೋಹಕ್ಕೆ ಶಿಕ್ಷೆಯಾಯಿತು. ಅದಕ್ಕೆ ಅವಳು ಕಾರಣಭೂತಳಾದಳು. ದ್ರೋಹಿಗಳಿಗೆ ಶಿಕ್ಷೆಯನ್ನು ಮಾಡಬೇಕೆಂಬ ಮನೋಭಾವವು ಅವಳಿಗೆ ಉಂಟಾದದ್ದೇನಾಶ್ಚರ್ಯ! ನಿರಪರಾಧಿಯಾದ ಲೈಕಾಸನನ್ನು ಅವಿಚಾರಪೂರ್ವಕವಾಗಿ ನಾನು ಕೊಲ್ಲಲಿಲ್ಲವೆ ? ನಾನು ದ್ರೋಹಿಯೆಂದು ತಿಳಿದ ಮೇಲೆ ಇವಳು ನನಗೆ ಶಿಕ್ಷೆಯನ್ನು ಮಾಡಿದ್ದು ತಪ್ಪಲ್ಲ. ಈ ದುಸ್ಸಹವಾದ ಕಷ್ಟಕ್ಕೆ ನನ್ನ ದುಷ್ಕರ್ಮವೇ ನನ್ನನ್ನು ಗುರಿಮಾಡಿತು. ನಾನು ಇನ್ನು ಜೀವಿಸಲಾರೆ. ಅಗ್ನಿಪ್ರವೇಶವನ್ನು ಮಾಡಿ ಈ ಕಷ್ಟವನ್ನು ತಪ್ಪಿಸಿಕೊಳ್ಳುತ್ತೇನೆ."

ಈ ರೀತಿಯಲ್ಲಿ ಹೇಳಿ, ತನ್ನ ಪರಮ ಮಿತ್ರನಾದ ಫೈಲೋಕ್ಟೇಟೇಸನನ್ನು ಕರೆದನು. ಅವನು ಹರ್ಕ್ಯುಲೀಸ್‌ನ ಬಳಿಗೆ ಬಂದನು. ಅವನನ್ನು ಆಲಿಂಗಿಸಿಕೊಳ್ಳುವುದಕ್ಕೆ ಹರ್ಕ್ಯುಲೀಸನು ಕೈಯನ್ನು ಚಾಚಿದನು. ಅಷ್ಟರಲ್ಲಿಯೇ ತನ್ನನ್ನು ದಹಿಸುತ್ತಿದ್ದ ವಿಷವು ಅವನ ದೇಹಕ್ಕೆ ವ್ಯಾಪಿಸೀತೆಂಬ ಭಯದಿಂದ ಅವನನ್ನು ಆಲಿಂಗಿಸಿಕೊಳ್ಳಲಿಲ್ಲ. ಅವನನ್ನು ಕುರಿತು ಹೇಳಿದ್ದೇನೆಂದರೆ:—

"ನಾನು ನಗುತ್ತಾ ಮಾಡಿದ ಕರ್ಮಫಲವನ್ನು ಅಳುತ್ತಾ ಅನುಭವಿಸುತ್ತಿರುವೆನು. ದೇಹವನ್ನು ಬಿಡತಕ್ಕ ಕಾಲದಲ್ಲಿ ಪರಮಾಪ್ತನಾದ ನಿನ್ನನ್ನು ಆಲಂಗಿಸಿ

ಕೊಳ್ಳುವ ಸುಖವೂ ಕೂಡ ನನಗೆ ದೊರೆಯದಂತೆ ಜಗದೀಶ್ವರನು ಮಾಡಿರುವನು. ನಾನು ಮಹಾಪಾಪಿಯು. ವಿಶೇಷ ಮಾತನಾಡುವುದಕ್ಕೆ ಶಕ್ತಿಯಿಲ್ಲ. ಅದಕ್ಕೆ ಅವಕಾಶವೂ ಇಲ್ಲ. ದೇಹತ್ಯಾಗಕ್ಕೆ ಕಾಲವು ಸನ್ನಿಹಿತವಾಗಿದೆ. ಈ ಯಾತನೆಯನ್ನು ಸಹಿಸಲಾರೆನು. ಇದನ್ನು ಸಹಿಸುವುದು ಬಹಳ ಕಷ್ಟವಾಗಿದೆ. ಶೀಘ್ರದಲ್ಲಿಯೇ ಇಲ್ಲಿರುವ ಒಣಗಿದ ಸೌದೆಗಳನ್ನು ಸೇರಿಸಿ ಚಿತಿಯನ್ನು ಮಾಡು. ಈ ದೇಹಧಾರಣೆಯ ಕಷ್ಟವನ್ನು ನನಗೆ ತಪ್ಪಿಸು.''

ಈ ರೀತಿಯಲ್ಲಿ ಹರ್ಕ್ಯುಲೀಸನು ಹೇಳಲು, ಫೈಲೋಕ್ಟೇಟೀಸನು ಅಲ್ಲಿದ್ದ ಸೌದೆಗಳನ್ನೆಲ್ಲಾ ಸೇರಿಸಿ ಚಿತಿಯನ್ನು ಮಾಡಿದನು. ಅದಕ್ಕೆ ಹರ್ಕ್ಯುಲೀಸನು ಬೆಂಕಿಯನ್ನು ಹಾಕಿ, ಚಿತಿಗೆ ಪ್ರದಕ್ಷಿಣೆಯನ್ನು ಮಾಡಿ ಹೇಳಿದ್ದೇನಂದರೆ:—''ಎಲೈ ಪರಮೇಶ್ವರನೆ, ನನಗೆ ಅದ್ಭುತವಾದ ದೇಹಶಕ್ತಿಯನ್ನೂ, ಬುದ್ಧಿಶಕ್ತಿಯನ್ನೂ ಕೊಟ್ಟು, ಜಿತೇಂದ್ರಿಯನಾಗುವ ಶಕ್ತಿಯನ್ನು ಮಾತ್ರ ಕೊಡಲಿಲ್ಲ. ಅಜಿತೇಂದ್ರಿಯರಿಗೆ ಬಲವಾದ ಕಷ್ಟಗಳು ಬರುವುವೆಂದು ಶಾಸ್ತ್ರಮುಖದಿಂದ ನಾನು ತಿಳಿದುಕೊಂಡಿದ್ದಾಗ್ಯೂ, ಅದರಲ್ಲಿ ನಾನು ನಂಬಿಕೆಯುಳ್ಳವನಾಗಲಿಲ್ಲ. ಜಿತೇಂದ್ರಿಯನಾಗಿ ಅರಿಷಡ್ವರ್ಗಗಳಿಗೆ ಅಧೀನನಾಗದೆ ಇರುವವರೆಗೂ ನನಗೆ ಸಕಲ ಸಂಪತ್ತುಗಳೂ ಉಂಟಾದವು. ಮೋಹಪರವಶನಾಗಿ, ಧರ್ಮಪತ್ನಿಗೆ ದ್ರೋಹವನ್ನು ಮಾಡಿ, ಸ್ವೈರಿಣಿಯ ಬಲೆಗೆ ಬೀಳುವುದಕ್ಕೆ ಒಪ್ಪಿಕೊಂಡೆನು. ನನ್ನ ದುಷ್ಕರ್ಮಕ್ಕೆ ಅನುರೂಪವಾದ ಫಲವನ್ನು ನೀನು ಕೊಟ್ಟಿರುವಿ. ಇನ್ನು ಈ ಕಷ್ಟವನ್ನು ಸಹಿಸಲಾರೆನು. ಅಗ್ನಿಪ್ರವೇಶ ರೂಪವಾದ ಪ್ರಾಯಶ್ಚಿತ್ತದಿಂದ ಪರಿಶುದ್ಧನಾಗಿ, ನಿನ್ನ ಪಾದಾರವಿಂದವನ್ನು ಸೇರುವೆನು. ನನ್ನ ಅಪರಾಧಗಳನ್ನು ಕ್ಷಮಿಸಿ, ನನಗೆ ಸದ್ಗತಿಯನ್ನು ಕೊಡು.'' ಈ ರೀತಿಯಲ್ಲಿ ದೇವತಾಪ್ರಾರ್ಥನೆಯನ್ನು ಮಾಡಿ, ಫೈಲೊಕ್ಟೇಟೀಸ್ಸನಿಗೆ ಮಂಗಳವಾಗಲೆಂದು ಕೋರಿ, ಧಗಧಗಿಸುತ್ತಿರುವ ಚಿತಿಯನ್ನು ಪ್ರವೇಶಿಸಿದನು.

ಕೂಡಲೆ ಆ ಚಿತಿಯ ಜ್ವಾಲೆಯು ಈತನನ್ನು ಆವರಿಸಿತು. ಜಗದೀಶ್ವರನ ಸ್ಮರಣೆಯನ್ನು ಮಾಡುತ್ತಾ, ಈ ಜ್ವಾಲೆಯ ಮಧ್ಯದಲ್ಲಿ ಒಂದೆರಡು ನಿಮಿಷಗಳು ಅವನು ದೃಷ್ಟಿಪಥಕ್ಕೆ ಬಿದ್ದನು. ಕೂಡಲೆ ಅವನಿಗೆ ಪ್ರಾಣವು ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಆತನ ಶರೀರವು ಸುಟ್ಟು ಬೂದಿಯಾಯಿತು.

ದೇಹತ್ಯಾಗವನ್ನು ಮಾಡುವುದಕ್ಕೆ ಮುಂಚೆ ಹರ್ಕ್ಯುಲೀಸನು ತನ್ನ ಅಮೋಘವಾದ ಬಿಲ್ಲನ್ನೂ, ಬಾಣಗಳನ್ನೂ ಫೈಲೋಕ್ಟೇಟೀಸನಿಗೆ ಒಪ್ಪಿಸಿದನು. ಟ್ರಾಯ್ ಯುದ್ಧದಲ್ಲಿ ಹೆಲೆನ್ನಳನ್ನು ಅಪಹರಿಸಿದ ಪ್ಯಾರಿಸ್ಸನಿಗೆ ಪರಾಜಯವಾಗಬೇಕಾದರೆ, ಹರ್ಕ್ಯುಲೀಸನ ಬಿಲ್ಲುಗಳಿಂದ ಪ್ರಯೋಗಿಸಲ್ಪಟ್ಟ ಬಾಣಗಳು ಮಾತ್ರವಲ್ಲದೆ ಅವನು ಸಾಯುವದಿಲ್ಲವೆಂದು ಅಶರೀರವಾಕ್ಕು ಉಂಟಾಗಿತ್ತು. ಈ ವಿಷಯವು ನಿನ್ನ ತಂದೆಯಾದ ಯೂಲಿಸಸ್ಸನಿಗೆ ಸ್ಪಷ್ಟವಾಗಿ ಗೊತ್ತಾಗಿತ್ತು. ನನಗೆ ತಿಳಿದಿರಲಿಲ್ಲ. ದೇಶದ ಎಲ್ಲಾ ಪ್ರಾಂತ್ಯಗಳಲ್ಲಿಯೂ ರಾಕ್ಷಸರ ಹಾವಳಿಯು ಬಲವಾಗಿತ್ತು. ಹರ್ಕ್ಯುಲೀಸನು ಸ್ವರ್ಗಸ್ಥನಾದ ವಿಷಯವು ನನಗೆ ವಿನಾ ಇನ್ಯಾರಿಗೂ ತಿಳಿದಿರಲಿಲ್ಲ. ಇಂಥಾ ಕಷ್ಟ ಕಾಲದಲ್ಲಿ ದುಷ್ಟನಿಗ್ರಹವನ್ನು ಮಾಡುವುದಕ್ಕೆ ಹರ್ಕ್ಯುಲೀಸನು ಬರಲಿಲ್ಲ. ಇವನು ಬದುಕಿರುವನೇ ಅಥವಾ ಸತ್ತುಹೋಗಿರುವನೇ ಎಂದು ಕೆಲವರು ಸಂದೇಹ ಪಡುತ್ತಿದ್ದರು. ಇವನು ಬದುಕಿರಬೇಕೆಂದು ಮತ್ತೆ ಕೆಲವರು ಹೇಳುತ್ತಿದ್ದರು. ನಿಮ್ಮ ತಂದೆಯಾದ ಯೂಲಿಸಸ್ಸನು ಕಾಲದೇಶವರ್ತಮಾನಗಳ ಸ್ಥಿತಿಯನ್ನು ನೋಡಿ, ಹರ್ಕ್ಯುಲೀಸನು ಸತ್ತಿರಬೇಕೆಂದು ಗೊತ್ತುಮಾಡಿದನು. ಹರ್ಕ್ಯುಲೀಸನ ವಿಯೋಗ ದುಃಖವನ್ನು ನಾನು ಅನುಭವಿಸುತ್ತಲಿದ್ದಾಗ, ಯೂಲಿಸಸ್ಸನು ನನ್ನ ಬಳಿಗೆ ಬಂದನು. ನಾನು ಜನಗಳ ಸಹವಾಸವನ್ನೇ ಬಿಟ್ಟು, ಈಟಾ ಎಂಬ ಬೆಟ್ಟದ ಗುಹೆಯಲ್ಲಿ ಆಶ್ರಯವನ್ನು ಹೊಂದಿದ್ದೆನು. ಇದೇ ಆಲ್‌ಸೈಡೀಸ್ ಎಂಬುವನ ಸತ್ತ ಸ್ಥಳವಾಗಿತ್ತು. ಹರ್ಕ್ಯುಲೀಸ್ ಮತ್ತು ಆಲ್‌ಸೈಡೀಸ್‌ಗಳ ಮರಣದಿಂದ ಉಂಟಾದ ದುಃಖದಲ್ಲಿ ನಾನು ಮುಳುಗಿರುವಾಗ, ನಿನ್ನ ತಂದೆಯು ನನ್ನ ಬಳಿಗೆ ಬಂದು. ನನ್ನ ದುಃಖಕ್ಕೆ ಕಾರಣವನ್ನು ಗೊತ್ತುಮಾಡಿಕೊಂಡು, ನನ್ನ ಜೊತೆಯಲ್ಲಿ ದುಃಖಿಸುವುದಕ್ಕೆ ಉಪಕ್ರಮಿಸಿದನು. ಅದ್ಭುತವಾದ ಬುದ್ಧಿಶಕ್ತಿಯಿಂದ ಈತನು ನನ್ನ ಮನೋಭಾವವನ್ನು ತಿಳಿದುಕೊಂಡನು. ಹರ್ಕ್ಯುಲೀಸನ ಬಿಲ್ಲೂ, ಬಾಣಗಳೂ ನನ್ನಲ್ಲಿರುವುವೆಂದು ಗೊತ್ತುಮಾಡಿಕೊಂಡನು. ಹರ್ಕ್ಯುಲೀಸನು ದೇಹವನ್ನು ಬಿಡುವುದಕ್ಕೆ ಮುಂಚೆ ತನ್ನ ಮರಣ ವಿಷಯವನ್ನೂ, ತನ್ನ ಬಿಲ್ಲುಬಾಣಗಳ ವಿಷಯವನ್ನೂ ಯಾರಿಗೂ ತಿಳಿಸಕೂಡದೆಂದು ಹೇಳಿದ್ದನು. ಅನೇಕ ವಿಧವಾದ ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳಿಂದಲೂ, ಪಾಟೀಸವಾಲುಗಳ ಕೌಶಲ್ಯದಿಂದಲೂ ನಾನು ಆಚ್ಛಾದಿಸಿದಾಗ್ಯೂ, ಹರ್ಕ್ಯುಲೀಸನು ಸತ್ತಿರುವನೆಂಬದಾಗಿಯೂ, ಅವನ ಬಿಲ್ಲುಬಾಣಗಳು ನನ್ನಲ್ಲಿರುವುವೆಂದಾಗಿಯೂ ಈತನು ತಿಳಿದುಕೊಂ

ಡನು. ಹರ್ಕ್ಯುಲೀಸನ ಗುಣಗಳನ್ನು ಪ್ರಶಂಸೆ ಮಾಡುವುದಕ್ಕೆ ನನ್ನಲ್ಲಿ ಉಪಕ್ರಮಿಸಿದನು. ಹರ್ಕ್ಯುಲೀಸನಿಗೆ ನನ್ನಂಥಾ ಆಪ್ತರು ಯಾರೂ ಇರಲಿಲ್ಲವೆಂಬದಾಗಿಯೂ, ಅವನ ಆಯುಧಗಳು ನನ್ನಲ್ಲಿರುವುವೆಂಬದಾಗಿಯೂ, ಅವನ ಅಸ್ತಿಯೂ, ಬೂದಿಯೂ ನನ್ನ ವಶದಲ್ಲಿರಬೇಕೆಂಬದಾಗಿಯೂ ಹೇಳಿ, "ದೇಹವು ಅಶಾಶ್ವತವಾದದ್ದು. ಸಕಲ ಸಂಪತ್ತುಗಳೂ ಕ್ಷಣಭಂಗುರವಾದವುಗಳು. ನಮ್ಮ ಸದ್ಗತಿಗೆ ನಮ್ಮ ಪುಣ್ಯಗಳು ವಿನಾ ಇನ್ಯಾವುದೂ ಸಾಧಕವಾಗುವುದಿಲ್ಲ. ಅಸತ್ಯದಿಂದಲೂ, ಅಧರ್ಮದಿಂದಲೂ, ಅನೃತದಿಂದಲೂ ನಮಗೆ ದುರ್ಗತಿಯು ತಪ್ಪುವುದಿಲ್ಲ. ಹರ್ಕ್ಯುಲೀಸನು ಅವತಾರ ಪುರುಷನು. ಅವನ ಆಯುಧಗಳು ದುಷ್ಟನಿಗ್ರಹಕ್ಕೆ ಬೇಕಾಗಿರುವುದು. ಸದರಿ ಆಯುಧಗಳನ್ನು ಪ್ರಯೋಗಿಸಿದ ಹೊರತು, ದುರ್ಮಾರ್ಗಪ್ರವರ್ತಕನಾದ ಪ್ಯಾರಿಸ್ಸನನ್ನು ಜಯಿಸುವುದಕ್ಕೆ ಆಗುವುದಿಲ್ಲ. ಸದರಿ ಆಯುಧಗಳು ನಿನ್ನಲ್ಲಿರುವುವು. ಇದನ್ನು ಧರ್ಮವನ್ನು ಉದ್ಧರಿಸುವುದಕ್ಕೆ ಉಪಯೋಗಿಸದಿದ್ದರೆ, ನಿನಗೆ ಮಹಾಪಾತಕವು ಬರುವುದು. ಈ ಟ್ರಾಯ್ ಯುದ್ಧದಲ್ಲಿ ಹತವಾಗುತ್ತಲಿರುವ ಜನಗಳ ಮರಣಕ್ಕೆ ದೇವರಲ್ಲಿ ನೀನು ಉತ್ತರವಾದಿಯಾಗಬೇಕಾಗುತ್ತದೆ. ಮಹಾತ್ಮನಾದ ಹರ್ಕ್ಯುಲೀಸನ ಅಸ್ತಿಯನ್ನೂ, ಬೂದಿಯನ್ನೂ ಭೂಮಿಯಲ್ಲಿ ಇಟ್ಟು, ಬೃಂದಾವನವನ್ನು ರಚಿಸಿ, ದೇವತಾರಾಧನೆಗಳಿಗೆ ಏರ್ಪಾಡುಮಾಡಿ, ಅವನ ಆತ್ಮಕ್ಕೆ ಸದ್ಗತಿಯಾಗುವಂತೆ ಮಾಡಬೇಕು. ಅವನಿಗೆ ಪರಮಾಪ್ತನಾಗಿದ್ದ ನೀನು ದುಷ್ಟನಿಗ್ರಹಕ್ಕೆ ಅವನ ಆಯುಧಗಳನ್ನು ಉಪಯೋಗಿಸದೆ, ಅವನ ಆತ್ಮಕ್ಕೆ ಸದ್ಗತಿಯಾಗುವಂತೆ ಬೃಂದಾವನದ ರಚನೆಗೆ ಅವನ ಅಸ್ತಿ ಮೊದಲಾದುವುಗಳನ್ನು ಉಪಯೋಗಿಸದೆ ಇರುವಿ. ಇದು ಶತ್ರುಗಳು ಮಾಡತಕ್ಕ ಕೆಲಸವೇ ಹೊರತು, ಮಿತ್ರರು ಮಾಡತಕ್ಕ ಕೆಲಸವಲ್ಲ." ಈ ರೀತಿಯಲ್ಲಿ ನಿಮ್ಮ ತಂದೆಯಾದ ಯೂಲಿಸಸ್ಸನು ಹೇಳಿದನು. ಇವನ ಮಾತುಗಳಿಂದ ನಾನು ವಿಸ್ಮಿತನಾದೆನು. ಹರ್ಕ್ಯುಲೀಸನ ಆಯುಧಗಳು ನನ್ನಲ್ಲಿ ಇರುವುವೆಂಬದಾಗಿಯೂ, ಅವನ ಅಸ್ತಿಯೂ, ಮೂಳೆಯೂ ನನ್ನಲ್ಲಿ ಇರುವುವೆಂಬದಾಗಿಯೂ ಯೂಲಿಸಸ್ಸನಿಗೆ ಹೇಗೆ ಗೊತ್ತಾಯಿತು ಎಂಬ ಸಂದೇಹವು ನನಗೆ ಉಂಟಾಯಿತು. ಇವುಗಳು ನನ್ನ ವಶದಲ್ಲಿರುವುವೆಂದು ಯಾರಿಗೂ ಹೇಳಕೂಡದೆಂದು ಹರ್ಕ್ಯುಲೀಸನು ನನಗೆ ಹೇಳಿದ್ದನು. ಅವುಗಳು ನನ್ನಲ್ಲಿ ಇಲ್ಲವೆಂದು ಹೇಳಿದರೆ ಸುಳ್ಳು ಹೇಳಿದ ಪಾಪಕ್ಕೆ ಗುರಿಯಾಗುವ ಅವಸ್ಥೆಯೂ, ನನ್ನಲ್ಲಿ ಇರುವುದೆಂದು ಹೇಳಿದರೆ ದೇಹವನ್ನು ತ್ಯಾಗಮಾಡುವಾಗ್ಯೆ ಹರ್ಕ್ಯುಲೀಸನಿಗೆ ನಾನು ಮಾಡಿದ ಪ್ರ

ತಿಜ್ಞೆಯ ಭಂಗವೂ ಉಂಟಾಗುವ ಸಂಭವವು ಬಂದಿದೆ. ಈ ಸಂಕಟವನ್ನು ಹೇಗೆ ತಪ್ಪಿಸಿಕೊಳ್ಳಬೇಕೋ ಅದು ನನಗೆ ಗೊತ್ತಾಗಲಿಲ್ಲ. ನನ್ನ ಅಪರಾಧವನ್ನು ಕ್ಷಮಿಸಬೇಕೆಂದು ದೇವರಿಗೂ, ಹರ್ಕ್ಯುಲೀಸನಿಗೂ ಪ್ರಾರ್ಥನೆಯನ್ನು ಮಾಡಿ, ನಿಮ್ಮ ತಂದೆಗೆ ಯಥಾರ್ಥವನ್ನು ಹೇಳಿಬಿಟ್ಟೆನು. ಪ್ರತಿಜ್ಞೆಯು ಉಲ್ಲಂಘನವು ದುಷ್ಕರ್ಮಗಳಲ್ಲಿ ಒಂದಾಗಿರುವುದು. ಕರ್ಮಫಲವನ್ನು ತಪ್ಪಿಸಿಕೊಳ್ಳುವುದು ದೇವತೆಗಳಿಗೂ ಸಾಧ್ಯವಲ್ಲ. ನಮ್ಮಂಥಾ ಪಾಮರರಿಗೆ ಇದು ಸಾಧ್ಯವೇ ? ಎಂದಿಗೂ ಸಾಧ್ಯವಾಗುವುದಿಲ್ಲ. ಹರ್ಕ್ಯುಲೀಸನ ಬಿಲ್ಲೂ, ಆಯುಧಗಳೂ ನನ್ನಲ್ಲಿರುವುದೆಂದು ಗೊತ್ತಾದ ಕೂಡಲೇ, ನಿಮ್ಮ ತಂದೆಯು ನನ್ನಲ್ಲಿ ಅತ್ಯಂತ ಸ್ನೇಹವನ್ನು ಬೆಳೆಸಿದನು. ಒಂದಾನೊಂದು ದಿವಸ ಒಂದು ಜಿಂಕೆಯು ನನ್ನ ದೃಷ್ಟಿಪಥಕ್ಕೆ ಬಿದ್ದಿತು. ಆಗ ಬಿಲ್ಲಿಗೆ ಅಂಬನ್ನು ಸೇರಿಸಿ, ಅದನ್ನು ಹೊಡೆಯುವುದಕ್ಕೆ ಪ್ರಯತ್ನ ಮಾಡಿದನು. ಕೈಜಾರಿತು. ನನ್ನ ಕಾಲಿಗೆ ಏಟು ತಗುಲಿತು. ಅದು ವ್ರಣವಾಯಿತು. ಕೀವು ರಕ್ತ ಮೊದಲಾದುವುಗಳು ಸುರಿಯುವುದಕ್ಕೆ ಉಪಕ್ರಮವಾಯಿತು. ದುಸ್ಸಹವಾದ ಯಾತನೆ ಉಂಟಾಯಿತು. ಕಷ್ಟಕಾಲದಲ್ಲಿ ಆಪ್ತರೂ ಕೂಡ ಕೈಬಿಡುವರು. ನನ್ನ ಸೇವೆಯಲ್ಲಿದ್ದ ಗ್ರೀಕ್ ಜನಗಳು ಒಬ್ಬೊಬ್ಬರಾಗಿ ಹೊರಟುಹೋದರು. ನಿಮ್ಮ ತಂದೆಯು ಹರ್ಕ್ಯುಲೀಸನ ಬಿಲ್ಲನ್ನೂ, ಅಂಬುಗಳನ್ನೂ ಸಂಗ್ರಹಿಸುವುದಕ್ಕೋಸ್ಕರ ನನ್ನಲ್ಲಿ ಬಂದಿದ್ದನು. ಟ್ರಾಯ್ ಯುದ್ಧವು ಬಹಳ ಜೋರಾಗಿರುತ್ತಿತ್ತು. ನನ್ನ ಅವಸ್ಥೆಯು ಹೀಗೆ ಶೋಚನೀಯವಾಗಿತ್ತು. ಈ ಯುದ್ಧಕ್ಕೆ ನನ್ನನ್ನು ಕರೆದುಕೊಂಡು ಹೋಗಿ, ಬಾಣಪ್ರಯೋಗ ಮಾಡಿಸಿ, ಶತ್ರುಗಳನ್ನು ಜಯಿಸುವುದು ಅಸಾಧ್ಯವೆಂದು ನಿನ್ನ ತಂದೆಗೆ ತೋರಿತು. ನನ್ನ ಆಹಾರಪದಾರ್ಥಗಳನ್ನು ಸಂಪಾದಿಸಿಕೊಳ್ಳುವುದಕ್ಕೆ ಸದರಿ ಬಿಲ್ಲುಗಳೂ, ಅಂಬುಗಳೂ ಸಾಧಕಗಳಾಗಿದ್ದವು. ಇದನ್ನು ತೆಗೆದುಕೊಂಡು ನನ್ನನ್ನು ಅನಾಥನನ್ನಾಗಿ ಬಿಡುವುದು ಧರ್ಮವೇ ? ಹಾಗೆ ಮಾಡದಿದ್ದರೆ, ಲಕ್ಷಾಂತರ ಜನ ಗ್ರೀಕರು ನಾಶವಾಗುತ್ತಲಿರುವುದಕ್ಕೆ ಅವಕಾಶ ಕೊಡುವುದು ಧರ್ಮವೇ ? ಎಂದು ನಿನ್ನ ತಂದೆಯು ಪರ್ಯಾಲೋಚಿಸಿದನು. ಗ್ರೀಸ್ ದೇಶದ ಕ್ಷೇಮಾರ್ಥವಾಗಿ ನಾನು ಸತ್ತರೂ ಚಿಂತೆಯಿಲ್ಲ. ನನ್ನ ಬಿಲ್ಲುಗಳನ್ನೂ, ಅಂಬುಗಳನ್ನೂ ತೆಗೆದುಕೊಂಡು ಹೋಗಿ ಅವುಗಳ ಪ್ರಯೋಗದಿಂದ ಪ್ಯಾರಿಸ್ಸನನ್ನು ವಧಿಸಿ, ಗ್ರೀಕರನ್ನು ರಕ್ಷಿಸುವುದು ಉತ್ತಮ ಎಂದು ಯೂಲಿಸಸ್ಸನು ಭಾವಿಸಿದನು. ಹೀಗೆ ಭಾವಿಸಿ, ಬಿಲ್ಲನ್ನೂ, ಅಂಬನ್ನೂ ತೆಗೆದುಕೊಂಡು

ಹೊರಡುವ ಪ್ರಯತ್ನವನ್ನು ಮಾಡಿದನು. ನಾನು ಇಂಥಾ ದುರ್ಗತಿಯಲ್ಲಿರುವಾ ಗ್ಯೆ ನನ್ನ ಸಮ್ಮತಿಯಿಲ್ಲದೆ ನೀನು ನನ್ನ ಅಂಬುಗಳನ್ನೂ, ಬಿಲ್ಲುಗಳನ್ನು ತೆಗೆದುಕೊಂಡು ಹೋಗಕೂಡದು ಎಂದು ಖಂಡಿತವಾಗಿ ನಾನು ಹೇಳಲು, ನಿನ್ನ ತಂದೆಯು ಏನು ಮಾಡಬೇಕೋ ಅದನ್ನು ತಿಳಿಯದೆ ಕರ್ತವ್ಯತಾಮೂಢನಾಗಿದ್ದನು. ನಾನು ಇದ್ದ ಪ್ರದೇಶವು ನಿರ್ಮಾನುಷ್ಯವಾದದ್ದು. ನನ್ನ ಘಾಯಕ್ಕೆ ಚಿಕಿತ್ಸೆಮಾಡತಕ್ಕವರು ಅಲ್ಲಿ ಯಾರೂ ಇರಲಿಲ್ಲ. ನನ್ನ ಭೃತ್ಯರೆಲ್ಲಾ ಹೊರಟು ಹೋದರು. ನಿಮ್ಮ ತಂದೆಯೂ ನನ್ನನ್ನು ಬಿಟ್ಟು ಹೊರಡುವ ಯೋಚನೆಯನ್ನು ಮಾಡುತ್ತಿದ್ದನು. ಈ ಯಾತನೆಯು ತಪ್ಪುವುದಕ್ಕೆ ಏನು ಮಾಡಬೇಕೆಂದು ಪರ್ಯಾಲೋಚಿಸುತ್ತಾ ನಾನು ನನ್ನ ಗುಹೆ ಬಾಗಿಲಿಗೆ ಬಂದೆನು. ಅಲ್ಲಿ ಒಬ್ಬ ಯುವಕನು ನಿಂತಿದ್ದನು. ಅವನನ್ನು ನೋಡಿದ ಕೂಡಲೆ ಇವನೇ ಎಕಲೀಸ್ ಎಂಬ ಭ್ರಮೆಯು ಉಂಟಾಯಿತು. ನಡೆಯುವುದಕ್ಕೆ ಶಕ್ತಿಯಿಲ್ಲದೆ ನಾನು ದೇಕುತ್ತಿರುವುದನ್ನು ನೋಡಿ, ಅತ್ಯಂತ ಕನಿಕರದಿಂದ ಅವನು ನನ್ನ ಬಳಿಗೆ ಬಂದನು. ಅವನನ್ನು ನೋಡಿ ಅಯ್ಯಾ! ನೀನು ಯಾರು ? ಈ ನಿರ್ಮಾನುಷ್ಯವಾದ ಪ್ರದೇಶಕ್ಕೆ ಹೇಗೆ ಬಂದೆ ? ನಿನ್ನ ಉಡಿಗೆಗಳನ್ನು ನೋಡಿದರೆ ನೀನು ಗ್ರೀಸ್ ದೇಶದವನಂತೆ ಕಾಣುತ್ತೀಯೆ ! ಎಂದು ನಾನು ಆತನನ್ನು ಮಾತನಾಡಿಸಿದೆನು. ಹೌದು ! ನಾನು ಗ್ರೀಸ್‌ದೇಶಸ್ಥನೆಂದು ಆ ಹುಡುಗನು ಹೇಳಿದನು. ಈ ನಿರ್ಮಾನುಷ್ಯವಾದ ಪ್ರದೇಶಕ್ಕೆ ಹೇಗೆ ಬಂದೆ? ಎಂದು ನಾನು ಕೇಳಿದೆನು. ನಾನು ಸೈಕ್ರಾಸ್ ದ್ವೀಪನಿವಾಸಿಯು, ನಾನು ಎಕಲೀಸನ ಮಗನು, ನನ್ನ ದ್ವೀಪಕ್ಕೆ ಹೋಗುತ್ತಲಿದೇನೆ ಎಂದು ಹೇಳಿದನು. ಎಕಲೀಸನು ನನ್ನ ಮಿತ್ರನು. ಆದುದರಿಂದ ನೀನು ನನಗೂ ಮಗನಂತೆ ಆಯಿತು. ಇಲ್ಲಿಗೆ ಬರುವುದಕ್ಕೆ ಕಾರಣವೇನು ? ಎಂದು ಕೇಳಿದೆನು. ನನ್ನ ತಂದೆಯ ಸ್ನೇಹಿತನಾದ ನಿನ್ನ ವೃತ್ತಾಂತವನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯು ನನಗೆ ಇರುವುದು. ನೀನು ಯಾರು ? ನಿನ್ನ ಹೆಸರೇನು ? ನೀನು ಇಲ್ಲಿರುವುದಕ್ಕೆ ಕಾರಣವೇನು ? ಎಂದು ಆತನು ಕೇಳಿದನು. ಅದಕ್ಕೆ ನಾನು ಪೂರ್ವ ವೃತ್ತಾಂತಗಳನ್ನೆಲ್ಲಾ ಆತನಿಗೆ ತಿಳಿಸಿ, ಎಕಲೀಸನ ಯೋಗಕ್ಷೇಮವನ್ನು ಕೇಳಲು, ಅವನು ಕಾಲಾಧೀನನಾದನು ಎಂಬದಾಗಿ ಎಕಲೀಸನ ಮಗನಾದ ನಿಯಾಪ್ಟೋಲಿಮುಸ್ಸನು ಹೇಳಿದನು. ಪರಮಾಪ್ತನಾದ ಎಕಲೀಸನು ಸತ್ತದ್ದನ್ನು ಕೇಳಿ ಫೈಲೋಕ್ಟೇಟಸ್ಸನಿಗೆ ತುಂಬಾ ವ್ಯಸನವುಂಟಾಯಿತು. ಕಣ್ಣೀರುಗಳು ಧಾರಾಸಂಪಾತವಾಗಿ ಬೀಳುವುದಕ್ಕೆ ಉಪಕ್ರಮವಾಯಿತು. ಆಗ ನಿಯಾಪ್ಟೋಲಿಮುಸ್ಸನು ಹೇಳಿದ್ದೇನಂದರೆ:—

"ಈ ಮಹಾ ಯುದ್ಧದಲ್ಲಿ ಎಕಲೀಸನು ಸತ್ತ ಮೇಲೆ ಯೂಲಿಸಸ್ಸನೂ, ಫೀನಿಕ್ಸನೂ ನನ್ನ ಬಳಿಗೆ ಬಂದರು. ನೀನು ಟ್ರಾಯ್ ದೇಶದ ಬಳಿಗೆ ಬಂದ ಹೊರತು, ಗ್ರೀಸರಿಗೆ ಜಯವಾಗುವುದಿಲ್ಲವೆಂದು ಹೇಳಿದರು. ಗ್ರೀಸ್ ಸೈನ್ಯದವರೆಲ್ಲಾ ನನ್ನ ತಂದೆಯ ಮರಣದಿಂದ ಬಹಳ ವ್ಯಸನಪಟ್ಟು, ದುಃಖೋಪಶಮನವನ್ನು ಮಾಡುವುದಕ್ಕೆ ನನ್ನ ಬಳಿಗೆ ಬಂದರು. ನನ್ನ ತಂದೆಯ ಆಯುಧಗಳನ್ನು ನನಗೆ ಕೊಡಿ ಎಂಬದಾಗಿ ಕೇಳಿದೆನು. ನಿಮ್ಮ ತಂದೆಯ ಆಯುಧಗಳು ಯೂಲಿಸಸ್ಸಿಗೆ ಕೊಡಲ್ಪಟ್ಟಿರುವುದು. ಸದರಿ ಆಯುಧಗಳು ವಿನಾ ನಿನಗೆ ಬೇಕಾದದ್ದು ಕೊಡಲ್ಪಡುವುದೆಂದು ಹೇಳಿದರು. ಇದರಿಂದ ನನಗೆ ಬಹಳ ದುಃಖವೂ, ಕೋಪವೂ ಉಂಟಾಯಿತು. ಯೂಲಿಸಸ್ಸನ ಬಳಿಗೆ ಹೋಗಿ, ನಮ್ಮ ತಂದೆಯ ಆಯುಧಗಳನ್ನು ಕೊಡು ಎಂದು ಕೇಳಿದೆನು. ಸದರಿ ಆಯುಧಗಳನ್ನು ಹೊಂದುವುದಕ್ಕೆ ನಿನಗೆ ಯೋಗ್ಯತೆ ಇಲ್ಲ. ಈ ಯುದ್ಧದಲ್ಲಿ ನಿನಗಿಂತಲೂ ಹೆಚ್ಚು ಮೆಹನತ್ತು ಮಾಡಿರತಕ್ಕವರು ಅನೇಕರಿರುವರು. ನಿಮ್ಮ ತಂದೆಯು ಅದ್ವಿತೀಯನಾದ ಪರಾಕ್ರಮಶಾಲಿಯಾಗಿದ್ದನು. ಅವನ ಆಯುಧಗಳನ್ನು ಧರಿಸುವುದಕ್ಕೆ ನಿನಗೆ ಯೋಗ್ಯತೆಯು ಉಂಟಾದರೆ; ಆಗ್ಯೆ ಅವು ನಿನಗೆ ಬರುವುವು" ಎಂದು ಯೂಲಿಸಸ್ಸನು ನನ್ನನ್ನು ತಿರಸ್ಕಾರದಿಂದ ಕಂಡನು.

ಈ ರೀತಿಯಲ್ಲಿ ನಿಯಾಪ್ಟೋಲಿಮಸ್ಸನು ಹೇಳಲು, ಈ ಅನ್ಯಾಯವನ್ನು ಕ್ರಮಪಡಿಸುವುದಕ್ಕೆ ಏಜಾಕ್ಸನು ನಿನಗೆ ಸಹಾಯ ಮಾಡಲಿಲ್ಲವೇ ಎಂದು ನಾನು ಕೇಳಿದೆನು. ಅವನು ಬದುಕಿದ್ದರೆ ಇಂಥಾ ಅನ್ಯಾಯಕ್ಕೆ ಅವಕಾಶವೆಲ್ಲಿ ಆಗುತ್ತಿತ್ತು? ಆತನೂ ಕಾಲಾಧೀನನಾದನು ಎಂದು ನಿಯಾಪ್ಟೋಲಿಮಸ್ಸನು ಹೇಳಿದನು. ಈ ಮಾತನ್ನು ಕೇಳಿ ನನಗೆ ತುಂಬಾ ವಿಷಾದ ಉಂಟಾಯಿತು. ನೆಸ್ಟರನ ಮಗನಾದ ಆಂಟಿಯೋಕಸ್ಸನೂ, ಎಕಲೀಸನ ಮಗನಾದ ಪೆಟ್ರೋಕ್ಲಸ್ಸನೂ ಹೇಗಿರುವರೆಂದು ನಾನು ಕೇಳಿದೆನು. ಅವರೂ ಸ್ವರ್ಗಸ್ಥರಾದರೆಂದು ಅವನು ಹೇಳಿದನು. ಆಪ್ತರಾಗಿಯೂ, ಮಿತ್ರರಾಗಿಯೂ ಇದ್ದವರೆಲ್ಲಾ ಈ ಯುದ್ಧದಲ್ಲಿ ಮಡಿದಿರುವರು. ಯೂಲಿಸಸ್ಸನೂ, ಥರ್ಸೈಟೀಸನೂ ಮಾತ್ರ ಬದುಕಿರುವರೆಂದು ನಿಯಾಪ್ಟೋಲಿಮಸ್ಸನು ಹೇಳಿದನು. ಮುಂದೆ ನಿನ್ನ ಉದ್ಯೋಗವೇನು ಎಂದು ನಾನು ಕೇಳಿದೆನು. ಅದಕ್ಕೆ ಅವನು ಹೇಳಿದ್ದೇನಂದರೆ:—

"ದೈವಸಂಕಲ್ಪವು ಈ ರೀತಿಯಲ್ಲಿರುವುದು. ಈ ಯುದ್ಧದಲ್ಲಿ ಅನೇಕರು ಮಡಿದರು. ದೈವಯೋಗದಿಂದ ಯೂಲಿಸಸ್ಸನೇ ಮೊದಲಾದ ಕೆಲವರು ಮಾತ್ರ ಬದುಕಿರುವರು. ಅವರಿಂದ ಉತ್ತರೋತ್ತರ ನಮ್ಮ ದೇಶಕ್ಕೆ ಆಗತಕ್ಕ ಪ್ರಯೋಜನಗಳೇನೋ ಇರಬೇಕು. ಹಾಗಿಲ್ಲದಿದ್ದರೆ, ಅವರು ಬದುಕುವ ಸಂಭವ ತಾನೇ ಎಲ್ಲಿ ಇತ್ತು? ಅದು ಹೇಗಾದರೂ ಇರಲಿ. ಗ್ರೀಸ್ ದೇಶಕ್ಕೆ ಬಂದಿರತಕ್ಕ ವಿಪತ್ತಿಗೆ ಈ ದೇಶೀಯರ ಅಧರ್ಮಗಳೇ ಮುಖ್ಯ ಕಾರಣವೆಂದು ನನಗೆ ತೋರುತ್ತದೆ. ನಾವು ನಮ್ಮ ಕರ್ಮಫಲವನ್ನು ಅನುಭವಿಸಬೇಕು. ಅದು ಎಂದಿಗೂ ತಪ್ಪುವಂತೆ ತೋರುವುದಿಲ್ಲ. ನಮ್ಮ ದೇಶೀಯರು ಮಾಡತಕ್ಕ ಪುಣ್ಯಕರ್ಮಗಳಿಗಿಂತ ಅವರು ಮಾಡತಕ್ಕ ಪಾಪಕರ್ಮಗಳು ಹೆಚ್ಚಾಗಿರುವುವು. ಆ ಪಾಪಕರ್ಮಗಳ ಫಲವನ್ನು ಅವರು ಮಾತ್ರವೇ ಅಲ್ಲದೆ, ಅವರ ಸಂಬಂಧಿಗಳಾದ ನಾವೂ ಅನುಭವಿಸಬೇಕಾಗುವುದು. ನಾನು ಇವರ ಸಂಪರ್ಕವನ್ನು ಬಿಡಬೇಕೆಂದು ನಿಷ್ಕರ್ಷೆ ಮಾಡಿರುವೆನು. ಸೈರಾಸ್ ದ್ವಿಪದಲ್ಲಿ ತಪೋವನವನ್ನು ಪ್ರವೇಶಿಸಿ, ಏಕಾಂತದಲ್ಲಿ ಜಗದೀಶ್ವರನ ಲೀಲೆಗಳನ್ನು ಪರಿಶೀಲಿಸುತ್ತಾ, ಅವನ ಧರ್ಮಗಳಿಗೆ ಅನುಸಾರವಾಗಿ ಆಯುಸ್ಸು ಇರುವವರೆಗೂ ಕಾಲಹರಣವನ್ನು ಮಾಡಿ, ಈ ಕಳೇಬರವನ್ನು ಬಿಡಬೇಕೆಂದು ಯೋಚನೆ ಮಾಡಿರುವೆನು. ಈ ಸೃಷ್ಟಿಸ್ಥಿತಿಪ್ರಳಯಗಳಿಗೆ ಕಾರಣಭೂತನಾದ ಜಗದೀಶ್ವರನು ನಿನಗೆ ಈ ಯಾತನೆಯನ್ನು ಹೋಗಲಾಡಿಸಲಿ ಆರೋಗ್ಯವನ್ನು ಕೊಡಲಿ. ನನಗೆ ಅಪ್ಪಣೆಯನ್ನು ಕೊಡು. ನನ್ನ ನಮಸ್ಕಾರವನ್ನು ಪರಿಗ್ರಹಿಸು. ಹೋಗಿಬರುವೆನು."

ಹೀಗೆ ನಿಯಾಪ್ಟೋಲಿಮುಸ್ಸನು ಹೇಳಲು, ನನಗೆ ಅನೇಕ ವಿಧವಾದ ಮನೋವ್ಯಥೆಗಳು ಉಂಟಾದವು. ಯೂಲಿಸಸ್ಸನ ಮೇಲೆ ನನಗೆ ಆಗ್ರಹವು ಇತ್ತು. ಅವನನ್ನು ನಿಯಾಪ್ಟೋಲಿಮುಸ್ಸನು ಸ್ತುತಿಸಿದನು. ಅವನ ಮಾತನ್ನು ಕೇಳಿ, ಅವನು ಈ ಘೋರ ಯುದ್ಧದಲ್ಲಿ ಬದುಕಿರುವುದೇ ಅವನು ಧರ್ಮಿಷ್ಠನೆಂಬುವುದಕ್ಕೆ ಸಾಕ್ಷಿಯಾಗಿರುವುದೆಂದು ಒಂದು ಯೋಚನೆಯು ಬಂದಿತು. ನನ್ನ ಘಾಯದಿಂದ ಉಂಟಾಗಿದ್ದ ಯಾತನೆಯು ಬಹಳ ಬಲವಾಗಿತ್ತು. ಇಂಥಾ ಅವಸ್ಥೆಯಲ್ಲಿ ನನ್ನನ್ನು ಬಿಟ್ಟು ಹೊರಟು ಹೋಗಕೂಡದೆಂದು ಅವನನ್ನು ಅನೇಕ ವಿಧವಾಗಿ ಪ್ರಾರ್ಥನೆಯನ್ನು ಮಾಡಿದೆನು. ನಿನ್ನ ಹಡಗಿನಲ್ಲಿ ಯಾವುದಾದರೂ ಒಂದು ಸ್ಥಳದಲ್ಲಿ ನನಗೆ ಅವಕಾಶವನ್ನು ಕೊಟ್ಟು, ನನ್ನನ್ನು ಸೈರಾಸ್ ದ್ವೀಪಕ್ಕೆ ಕಳಿಸು

ಕ್ಕೊಂಡು ಹೋಗು, ಅಥವಾ ನಮ್ಮ ತಂದೆಯ ಬಳಿಗೆ ನನ್ನನ್ನು ಸೇರಿಸು ಎಂಬ ದಾಗಿ ಹೇಳಿಕೊಂಡೆನು. ನನ್ನ ಅವಸ್ಥೆಯನ್ನು ನನ್ನ ತಂದೆಗೆ ತಿಳಿಸುವುದಕ್ಕೆ ಏರ್ಪಾಡು ಮಾಡಿದ್ದೆನು. ಒಂದು ಹಡಗನ್ನು ತೆಗೆದುಕೊಂಡು ಬಂದು ನನ್ನನ್ನು ಕರೆದುಕೊಂಡು ಹೋಗಬೇಕೆಂದು ಹೇಳಿಕಳುಹಿಸಿದ್ದೆನು. ಈ ವರ್ತಮಾನವು ತಿಳಿದಿದ್ದರೆ ನನ್ನ ತಂದೆಯು ಬರುತ್ತಿದ್ದನು. ಈ ವರ್ತಮಾನವು ಅವನಿಗೆ ತಿಳಿಸಲ್ಪಡ ಲಿಲ್ಲವೋ ಅಥವಾ ಅವನು ಜೀವವಂತನಾಗಿಯೇ ಇಲ್ಲವೋ ಒಂದೂ ಗೊತ್ತಾಗಲಿ ಲ್ಲ. 'ದೇವರು ನಿನಗೆ ಆರೋಗ್ಯವನ್ನು ಕೊಟ್ಟಿದಾನೆ ನನ್ನನ್ನು ರಕ್ಷಿಸು' ಎಂಬ ದಾಗಿ ನಿಯಾಪ್ಟೋಲಿಮುಸ್ಸನನ್ನು ಕೇಳಿಕೊಂಡೆನು. ನನ್ನ ಪ್ರಾರ್ಥನೆಯನ್ನು ನೆರ ವೇರಿಸುವುದಾಗಿ ಆತನು ಹೇಳಿದನು. ಅವನ ವಾಗ್ದಾನವು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿತು. ದೈವಯೋಗದಿಂದ ಅವನು ರಕ್ಷಣಾರ್ಥವಾಗಿ ಬಂದಿರುವನೆಂದು ತಿಳಿದುಕೊಂಡೆನು. ನನ್ನ ಕಷ್ಟಗಳಿಗೆ ಪರ್ಯವಸಾನ ಉಂಟಾಯಿ ತೆಂದು ನನಗೆ ಭಾವನೆಯು ಉಂಟಾಯಿತು. ಹೊರಡುವುದಕ್ಕೆ ನಾವು ಸಿದ್ಧವಾ ಗದ್ದೆವು. ನನ್ನ ಬಿಲ್ಲನ್ನೂ, ಅಂಬುಗಳನ್ನೂ ತೆಗೆದುಕೊಂಡೆನು. ಅವುಗಳನ್ನು ನೋಡಿ, ಎಕಲೀಸನ ಉಪಯೋಗದಲ್ಲಿದ್ದ ಈ ಅದ್ಭುತವಾದ ಬಿಲ್ಲುಗಳಿಗೂ, ಅಂ ಬುಗಳಿಗೂ ನಾನು ಪ್ರಣಾಮವನ್ನು ಮಾಡುತ್ತೇನೆ. ಇವುಗಳನ್ನು ಮುಟ್ಟುವು ದಕ್ಕೆ ನನಗೆ ಅವಕಾಶವನ್ನು ಕೊಡುತ್ತೀಯಾ ಎಂದು ನಿಯಾಪ್ಟೋಲಿಮುಸ್ಸನು ಕೇಳಿದನು. ನೀನು ನನ್ನ ಪುತ್ರಪ್ರಾಯನಾದವನು. ಈ ದುರವಸ್ಥೆಯಿಂದ ನನ್ನನ್ನು ರಕ್ಷಿಸಿ, ನನ್ನ ದೇಶಕ್ಕೆ ಕರೆದುಕೊಂಡು ಹೋಗಿ, ನನ್ನ ತಂದೆಯೇ ಮೊದ ಲಾದವರ ಬಳಿಯಲ್ಲಿ ನನ್ನನ್ನು ಬಿಟ್ಟು ರಕ್ಷಿಸುವುದಕ್ಕೆ ನೀನು ಸಿದ್ಧನಾಗಿರುತ್ತೀಯೆ. ಈ ಅಮೋಘವಾದ ಬಿಲ್ಲುಗಳನ್ನೂ, ಬಾಣಗಳನ್ನೂ ಮುಟ್ಟುವುದಕ್ಕೆ ನಿನಗೆ ಅವ ಕಾಶವನ್ನು ಕೊಡುತ್ತೇನೆ ಎಂದು ನಾನು ಹೇಳಿದೆನು. ನಿಯಾಪ್ಟೋಲಿಮುಸ್ಸನು ಈ ಬಿಲ್ಲನ್ನೂ, ಬಾಣಗಳನ್ನೂ ಹಿಡಿದುಕೊಂಡು ಆಶ್ಚರ್ಯಪಡುವುದಕ್ಕೆ ಉಪ ಕ್ರಮಿಸಲು, ಏನೋ ಒಂದು ಅನಿರ್ವಚನೀಯವಾದ ನೋವು ನನಗೆ ಉಂಟಾಯಿತು. ಯಾತನೆಯು ಇನ್ನೂ ಹೆಚ್ಚಿತು. ದೇಹತ್ಯಾಗ ಮಾಡ ಬೇಕೆಂಬ ಮನೋಭಾವವು ಉಂಟಾಯಿತು. 'ಈ ಯಾತನೆಯನ್ನು ತಪ್ಪಿ ಸು, ದೇಹವನ್ನು ಬಿಡುವುದಕ್ಕೆ ಅವಕಾಶ ಕೊಡು' ಎಂಬದಾಗಿ ದೇವರನ್ನು ಪ್ರಾರ್ಥಿಸುತ್ತಾ ಕೆಳಕ್ಕೆ ಬಿದ್ದೆನು. ದೇಹವೆಲ್ಲಾ ಬೆವರಿತು. ನನ್ನ ಧಾಯ್ಯ

ದಿಂದ ಕಪ್ಪಗೆ ಕೀವೂ, ರಕ್ತವೂ ಈಚೆಗೆ ಹರಿದವು. ಪ್ರಜ್ಞೆಯಿಲ್ಲದೆ ನಾನು ಬಿದ್ದಿದ್ದೆನು. ಈ ಸ್ಥಿತಿಯಲ್ಲಿ ನಾನು ಇರುವಾಗ ನಿಯಾಪ್ಟೋಲಿಮಸ್ಸನು ಈ ಬಿಲ್ಲನ್ನೂ, ಆಯುಧಗಳನ್ನೂ ಅಪಹರಿಸಿಕೊಂಡು ಹೋಗಬಹುದಾಗಿತ್ತು. ಆದರೆ ಇವನು ಎಕಲೀಸನ ಮಗನು. ಇವನಲ್ಲಿ ಮೋಸಮಾಡುವ ಸ್ವಭಾವವು ಇರಲಿಲ್ಲ. ಹೀಗೆ ಪ್ರಜ್ಞೆಯಿಲ್ಲದೆ ಸ್ವಲ್ಪ ಹೊತ್ತು ಬಿದ್ದಿದ್ದೆನು. ಅನಂತರ ಪ್ರಜ್ಞೆಯು ಬಂದಿತು. ಪ್ರಜ್ಞೆಯು ಬಂದಮೇಲೆ ಇವನ ಮುಖವನ್ನು ನಾನು ನೋಡಿದೆನು. ಇವನ ಮುಖದಲ್ಲಿ ಮಾಡಬಾರದ ಕೆಲಸವನ್ನು ಮಾಡಬೇಕೆಂದು ಪರ್ಯಾಲೋಚಿಸತಕ್ಕವರಿಗೆ ಯಾವ ವಿಧವಾದ ಮನೋಭಾವವು ಇರುವುದೋ ಆ ಭಾವನೆಯು ಇದ್ದಂತೆ ನನಗೆ ತೋರಿತು. ನಿನ್ನ ಮುಖವನ್ನು ನೋಡಿದರೆ ನೀನು ಋಜುಮಾರ್ಗಾವಲಂಬಿಯಾಗಿರುವಂತೆ ತೋರುವುದಿಲ್ಲ ಎಂದು ನಾನು ಹೇಳಿದೆನು. ಅದಕ್ಕೆ ಅವನು "ಈಗ ಸೈರಾಸ್ ದ್ವೀಪಕ್ಕೆ ಪ್ರಯಾಣಮಾಡುವುದಕ್ಕೆ ಆಗುವುದಿಲ್ಲ, ಟ್ರಾಯ್ ಯುದ್ಧಕ್ಕೆ ಹೋಗಬೇಕು, ನೀನು ಇದಕ್ಕೆ ಒಪ್ಪಬೇಕು" ಎಂದು ಹೇಳಿದನು. "ಏನು ಹೇಳುತ್ತೀಯೆ? ನೀನು ಮೋಸಗಾರ, ಈ ಬಿಲ್ಲನ್ನೂ, ಅಂಬುಗಳನ್ನೂ ಅಪಹರಿಸುವುದಕ್ಕೋಸ್ಕರ ನೀನು ಬಂದಿರಬೇಕು, ನನ್ನ ಬಿಲ್ಲನ್ನೂ, ಅಂಬುಗಳನ್ನೂ ವಾಪಸು ಕೊಡು" ಎಂದು ಹೇಳಿದೆನು. ಅವನು ಪ್ರತ್ಯುತ್ತರವನ್ನೂ ಕೊಡದೆ, ಕೊಡುವ ಮನೋಭಾವವನ್ನೂ ತೋರಿಸದೆ ನಿಶ್ಚಲನಾಗಿ ನಿಂತಿದ್ದನು. ಆಗ ನಾನು ಹೇಳಿದ್ದೇನಂದರೆ:—

"ಎಲೈ ಜಗದೀಶ್ವರನೇ, ಇದು ಏನು ಅದ್ಭುತವಾದ ವ್ಯಾಪಾರ! ನನಗೆ ಈ ಬಿಲ್ಲಿನ ಏಟು ತಗಲಿ, ಈ ದುಸ್ಸಹವಾದ ಯಾತನೆಯು ಉಂಟಾಗುವಂತೆ ಮಾಡಿದಿ. ಈ ನಿರ್ಮಾನುಷ್ಯವಾದ ಪ್ರದೇಶದಲ್ಲಿ ಅಸಹಾಯನಾಗಿ ಬಿದ್ದಿರುವಂತೆ ಮಾಡಿರುವಿ. ನನ್ನ ಆತ್ಮರಕ್ಷಣೆಗೆ ಹರ್ಕ್ಯುಲೀಸನಿಂದ ಅನುಗ್ರಹಿಸಲ್ಪಟ್ಟ ಈ ಬಿಲ್ಲನ್ನೂ, ಅಂಬುಗಳನ್ನೂ ಎಕಲೀಸನ ಮಗನಾದ ಈ ದುರಾತ್ಮನಿಂದ ಅಪಹರಿಸಲ್ಪಡುವುದಕ್ಕೂ ಏರ್ಪಾಡು ಮಾಡಿರುವಂತೆ ತೋರುತ್ತದೆ. ರಾವಣ ಸನ್ಯಾಸಿಯಂತೆ ಇವನು ವೈರಾಗ್ಯದಿಂದ ತುಂಬಿತುಳುಕುವ ಮಾತುಗಳನ್ನು ಆಡಿ, ಈ ಆಯುಧಗಳನ್ನು ನನ್ನಿಂದ ಅಪಹರಿಸಿರುವನು. ಇಲ್ಲಿರತಕ್ಕ ದುಷ್ಟಮೃಗಗಳಿಂದ ರಕ್ಷಿಸಿಕೊಳ್ಳುವ ಶಕ್ತಿಯು ನನಗೆ ಹೋಯಿತು. ಎಕಲೀಸನ ಮಗನೂ ಕೂಡ ನನ್ನ ದುರ್ಗತಿಗೆ ಕಾರಣನಾಗಿರುವಂತೆ ಮಾಡಿರುವಿ" ಎಂದು ವಿಲಪಿಸಿ, ನಿಯಾಪ್ಟೋಲಿಮಸ್ಸನನ್ನು

ನೋಡಿ, "ಹರ್ಕ್ಯುಲೀಸನಿಗೆ ಸಮಾನನಾದವನು ನಿನ್ನ ತಂದೆ. ಅವನ ಕೀರ್ತಿಗೆ ಭಂಗವನ್ನು ತಂದು, ಬದುಕಬೇಕೆಂಬ ಅಭಿನಿವೇಶವು ನಿನಗೆ ಇದ್ದರೆ ನನ್ನನ್ನು ಈ ಆಯುಧಗಳಿಂದಲೇ ಸಂಹರಿಸಿ, ನನ್ನ ಯಾತನೆಯನ್ನು ಪರಿಹರಿಸಿ, ಇವುಗಳನ್ನು ತೆಗೆದುಕೊಂಡು ಹೋಗು" ಎಂದು ಹೇಳಿದೆನು.

ಈ ಮಾತುಗಳನ್ನು ಕೇಳಿದ ಕೂಡಲೆ ನಿಯಾಪ್ಟೋಲಿಮಸ್ಸನ ಕಣ್ಣುಗಳಲ್ಲಿ ಧಾರಾಸಂಪಾತವಾಗಿ ಶೋಕರಸವು ಸುರಿಯುವುದಕ್ಕೆ ಉಪಕ್ರಮವಾಯಿತು. 'ಜಗದೀಶ್ವರನೇ, ತಪೋವನದಲ್ಲಿ ನಿನ್ನ ಸೇವೆಯನ್ನು ಮಾಡಿಕೊಂಡು, ಸ್ಕೈರಾಸ್‌ನಲ್ಲಿ ಕಾಲಹರಣವನ್ನು ಮಾಡುವ ಭಾಗ್ಯವನ್ನು ನೀನು ನನಗೆ ಅನುಗ್ರಹಿಸಲಿಲ್ಲ. ಈ ಮಹಾತ್ಮನಿಗೆ ಇಂಥಾ ಮನೋವ್ಯಥೆಯನ್ನು ಉಂಟುಮಾಡುವ ಸ್ಥಿತಿಗೆ ನಾನು ಬರುವಂತೆ ಮಾಡಿರುವಿ' ಎಂದು ಹೇಳುತ್ತಾ, ನಿಯಾಪ್ಟೋಲಿಮಸ್ಸನು ವ್ಯಸನಾಕ್ರಾಂತನಾದನು.

ಈ ಅವಸ್ಥೆಯಲ್ಲಿ ಇರುವಾಗ ನಿಯಾಪ್ಟೋಲಿಮಸ್ಸನು ನನಗೆ ಯೂಲಿಸಸ್ಸನಂತೆ ಕಾಣಬಂದನು. ನನಗೆ ಆಶ್ಚರ್ಯವಾಯಿತು. ಇದು ಏನು ಆಶ್ಚರ್ಯ! ನೀನು ನಿಯಾಪ್ಟೋಲಿಮಸ್ಸನಲ್ಲವೇ? ನೀನು ಯೂಲಿಸಸ್ಸೇ? ಈಗ ಗೊತ್ತಾಯಿತು ಇಂಥಾ ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳು ನಿಯಾಪ್ಟೋಲಿಮಸ್ಸನಿಗೆ ಎಲ್ಲಿಂದ ಬಂದೀತು? ಎಲೈ ಅವಾಙ್ಮಾನಸಗೋಚರನಾದ ಜಗದೀಶ್ವರನೇ, ಇದೇನಾಶ್ಚರ್ಯ! ಎಲೈ ಪಂಚಭೂತಗಳೇ, ಈ ಯೂಲಿಸಸ್ಸನ ಅಮಾನುಷ ಕರ್ಮಗಳನ್ನು ನೋಡಿ ಎಂದು ವಿಲಪಿಸಿದೆನು. ಇದನ್ನು ಕೇಳಿ, ಯೂಲಿಸಸ್ಸನು ನನ್ನನ್ನು ಕುರಿತು ಹೇಳಿದ್ದೇನಂದರೆ:—

"ಎಲೈ ಫೈಲೋಕ್ಟೋಟೀಸನೇ, ಜಗದೀಶ್ವರನ ಆಜ್ಞೆಯಿಲ್ಲದೆ ಈ ಪ್ರಪಂಚದಲ್ಲಿ ಒಂದು ತೃಣವೂ ಚಲಿಸುವುದಿಲ್ಲ. ಸಕಲ ಚರಾಚರ ವಸ್ತುಗಳೂ ಮತ್ತು ನೀನೂ, ನಾನೂ ಅವನ ಆಜ್ಞೆಗೆ ಒಳಪಟ್ಟವರು. ಅದನ್ನು ಉಲ್ಲಂಘಿಸಿ ನಡೆಯುವುದಕ್ಕೆ ಯಾರಿಗೂ ಶಕ್ತಿಯಿಲ್ಲ. ಸಕಲವೂ ಅವನ ಆಜ್ಞೆಯಂತೆ ನಡೆಯುವುದು" ಎಂದು ಹೇಳಿದನು. ತಕ್ಷಣದಲ್ಲಿಯೇ ಅದೃಶ್ಯನಾಗಿದ್ದ ನಿಯಾಪ್ಟೋಲಿಮಸ್ಸನು ದೃಷ್ಟಿಪಥಕ್ಕೆಬಿದ್ದನು. ಆಗ ಯೂಲಿಸಸ್ಸನನ್ನು ಕುರಿತು, 'ಈ ಇಂದ್ರಜಾಲ ವಿದ್ಯೆಗಳಿಗೆ ನೀನೇ ಕಾರಣಭೂತನು. ನನ್ನ ಆಯುಧಗಳನ್ನು ಅಪಹರಿಸುವುದಕ್ಕೆ ಇವನನ್ನು ನೀನು ಕಳುಹಿಸಿರುವುದಿಲ್ಲವೇ? ಇದು ನಿನಗೆ ಧರ್ಮವೇ? ದೇವರು

ನಿಮ್ಮ ನಡತೆಯನ್ನು ಒಪ್ಪುವನೇ" ಎಂದು ನಾನು ಕೇಳಿದೆನು. ಅದಕ್ಕೆ ಯೂಲಿಸಸ್ಸನು ಹೇಳಿದ್ದೇನೆಂದರೆ:—

"ನಾನು ನಿನಗೆ ದ್ರೋಹವನ್ನು ಮಾಡುವುದಕ್ಕೆ ಬರಲಿಲ್ಲ. ನಿನ್ನನ್ನು ರಕ್ಷಿಸುವುದಕ್ಕೆ ಬಂದಿರುವೆನು. ಈ ನಿರ್ಮಾನುಷ್ಯವಾದ ಪ್ರದೇಶದಿಂದ ನಿನ್ನನ್ನು ಕರೆದುಕೊಂಡು ಹೋಗಿ, ನಿನ್ನ ಘಾಯಕ್ಕೆ ಚಿಕಿತ್ಸೆಯನ್ನು ಮಾಡಿ, ನಿನ್ನ ಮಹಿಮೆಯಿಂದ ದುರಾತ್ಮರಾದ ಟ್ರಾಯ್ ದೇಶದವರನ್ನು ಜಯಿಸುವಂತೆ ಮಾಡಿ, ಹರ್ಕ್ಯುಲೀಸನಿಗೂ ದುರ್ಲಭವಾದ ಕೀರ್ತಿಯನ್ನು ನಿನಗೆ ಉಂಟುಮಾಡಿ, ನಿನ್ನ ಬಂಧುಮಿತ್ರರೊಡನೆ ಸೇರಿಸುವುದಕ್ಕೋಸ್ಕರ ನಾವು ಬಂದಿರುತ್ತೇವೆ. ನಿನಗೆ ನೀನೇ ಶತ್ರುವೇ ಹೊರತು, ನಾವು ಶತ್ರುಗಳಲ್ಲ" ಎಂದು ಹೇಳಿದನು. ಯೂಲಿಸಸ್ಸನ ಮಾತಿನಲ್ಲಿ ನನಗೆ ನಂಬಿಕೆಯು ಹುಟ್ಟಲಿಲ್ಲ. ಅವನಿಗೆ ನಾನು ಅವಮಾನವನ್ನು ಮಾಡಿದೆನು. ವಾಗ್ದಂಡನೆಗಳನ್ನು ಮಾಡಿದೆನು. ಈ ನಿರ್ಮಾನುಷ್ಯವಾದ ದ್ವೀಪದಲ್ಲಿ ಇಂಥಾ ಕಷ್ಟಕ್ಕೆ ಗುರಿಯಾಗುವುದಕ್ಕೆ ನೀನೇ ಕಾರಣನೆಂದು ಹೇಳಿದೆನು. "ಟ್ರಾಯ್ ದೇಶವನ್ನು ಜಯಿಸುವ ಗೌರವವು ನನಗೆ ಬೇಡವೆಂಬದಾಗಿಯೂ, ಈ ದ್ವೀಪದಲ್ಲಿ ವ್ಯಸನದಿಂದಲೂ, ನೋವಿನಿಂದಲೂ ಸಾಯುವುದೇ ಲೇಸೆಂಬನಾಗಿಯೂ, ಟ್ರಾಯ್ ದೇಶವನ್ನು ಜಯಿಸಿದ ಸಂಪತ್ತೆಲ್ಲಾ ನೀವೇ ಅನುಭವಿಸಿ" ಎಂಬದಾಗಿಯೂ ನಾನು ಯೂಲಿಸಸ್ಸನಿಗೂ, ನಿಯಾಪ್ಟೋಲಿಮಸ್ಸನಿಗೂ ಹೇಳಿದೆನು.

ಹೀಗೆ ಉನ್ಮತ್ತನಂತೆ ನಾನು ಶಪಿಸಿದ್ದನ್ನು ಕೇಳಿ, ಯಾತನೆಯಿಂದ ಪರವಶರಾದವರಿಗೆ ಬುದ್ಧಿಯು ಸ್ವಾಧೀನದಲ್ಲಿರುವುದಿಲ್ಲವೆಂಬದಾಗಿಯೂ, ನನ್ನ ಕೋಪತಾಪಗಳು ಬುದ್ಧಿಪೂರ್ವಕವಾದವುಗಳಲ್ಲವೆಂಬದಾಗಿಯೂ, ನನ್ನ ದುರ್ಭಾಷೆಗಳಿಗೆ ನಾನು ಕಾರಣಭೂತನಲ್ಲವೆಂಬದಾಗಿಯೂ ಯೂಲಿಸಸ್ಸನು ತಿಳಿದುಕೊಂಡನು. ಆಗ ಆತನು ಹೇಳಿದ್ದೇನೆಂದರೆ:—

"ಎಲೈ ಫೈಲೋಕ್ಟೇಟಿಸ್ಸನೇ, ನಿನ್ನ ಧೈರ್ಯಸ್ಥೈರ್ಯಗಳೇನಾದವು? ನಿನ್ನ ಸಾರಾಸಾರ ವಿಚಕ್ಷಣೆಯು ಎಲ್ಲಿ ಹೋಯಿತು? ವಿಪತ್ಕಾಲದಲ್ಲಿ ಧೈರ್ಯವೂ, ಕಷ್ಟಕಾಲದಲ್ಲಿ ಸ್ಥೈರ್ಯವೂ, ಶಾಂತಿಯೂ ಮಹಾತ್ಮರಿಗೆ ಲಕ್ಷಣವಲ್ಲವೇ? ನಿನ್ನ ಜನ್ಮಸ್ಥಾನವಾದ ಗ್ರೀಸ್ ದೇಶಕ್ಕೆ ಬಂದ ವಿಪತ್ತನ್ನು ತಪ್ಪಿಸುವುದೂ, ಅಧರ್ಮಿಷ್ಠರಾದ ಟ್ರಾಯ್ ದೇಶದವರನ್ನು ಶಿಕ್ಷಿಸುವುದೂ ಇವೆರಡೂ ಜಗದೀಶ್ವರನ ದಯೆಯಿಲ್ಲದಿ

ದ್ದಿರೆ ನಿನಗೆ ಹಸ್ತಗತವಾಗುತ್ತಿತ್ತೋ? ಇಂಥಾ ಸಂಪತ್ತನ್ನು ಹೊಂದುವುದಕ್ಕಿಂತ ಈ ನಿರ್ಮಾನುಷ್ಯವಾದ ದ್ವೀಪದಲ್ಲಿ ಅನಿರ್ವಚನೀಯವಾದ ಕಷ್ಟಗಳನ್ನು ಪಟ್ಟು, ದೇಹವನ್ನು ಬಿಡುವುದೇ ಮೇಲೆಂದು ಭಾವಿಸುತ್ತೀಯೆ. ನೀನು ಮಹಾ ಮಹಿಮನೆಂದು ನಾನು ತಿಳಿದುಕೊಂಡಿದ್ದೆನು. ಅದು ತಪ್ಪೆಂದು ಗೊತ್ತಾಯಿತು. ನಿನ್ನ ಬಿಲ್ಲನ್ನೂ, ಆಯುಧಗಳನ್ನೂ ತೆಗೆದುಕೊ. ಈ ದ್ವೀಪದಲ್ಲಿ ಅನಿರ್ವಚನೀಯವಾದ ಕಷ್ಟಗಳನ್ನು ಅನುಭವಿಸಿ, ದೇಹವನ್ನು ಬಿಡು. ನಾವು ಹೋಗಿಬರುತ್ತೇವೆ" ಎಂದು ನನಗೆ ಹೇಳಿ, ನಿಯಾಪ್ಟಾಲಿಮುಸ್ಸನನ್ನು ನೋಡಿ, 'ಇವನು ಶುದ್ಧ ಮೂರ್ಖನು. ದೇವರ ಪ್ರಸನ್ನತೆಗೂ, ಗ್ರೀಸ್ ದೇಶದ ಮಾನವನ್ನು ಉಳಿಸುವುದಕ್ಕೂ, ದುರಾತ್ಮರಾದ ಟ್ರಾಯ್ ಜನಗಳ ಪಾಪಕರ್ಮಗಳಿಗೆ ತಕ್ಕ ಶಿಕ್ಷೆಯನ್ನು ಮಾಡುವುದಕ್ಕೂ ಇವನು ಶಕ್ತನಲ್ಲ. ಇವನಿಗೆ ದೇಶಾಭಿಮಾನವಿಲ್ಲ. ಇವನು ಗ್ರೀಸ್ ದೇಶಸ್ಥನಾಗಿರುವುದಕ್ಕೆ ಅನರ್ಹನು. ಇಂಥಾವನಿಗೆ ಲೋಕೈಕವೀರರಿಗೆ ಅರ್ಹವಾದ ಪದವಿಯನ್ನು ಕೊಡಬೇಕೆಂದು ನಾವು ಮಾಡಿದ ಪ್ರಯತ್ನವು ಬೂದಿಯಲ್ಲಿ ಹೋಮಮಾಡಿದಂತಾಯಿತು, ಹೊರಟು ಹೋಗೋಣ ನಡೆ" ಎಂಬದಾಗಿ ಹೇಳಿದನು.

ಈ ಮಾತುಗಳನ್ನು ಕೇಳಿ, ಈ ಮಾತುಗಳಿಂದಲೂ ನನಗೆ ಮನಶ್ಶಾಂತಿಯಾಗಲಿಲ್ಲ. ನನಗೆ ಕೋಪವು ಇನ್ನೂ ಹೆಚ್ಚಿತು. ನಿಯಾಪ್ಟೋಲಿಮುಸ್ಸನು ಯೂಲಿಸಸ್ಸನ ಆಜ್ಞೆಯಂತೆ ಬಿಲ್ಲನ್ನೂ, ಅಂಬುಗಳನ್ನೂ ನನ್ನ ವಶಕ್ಕೆ ಕೊಟ್ಟನು. ಕೂಡಲೆ ಅದನ್ನು ತೆಗೆದುಕೊಂಡು, ಬಿಲ್ಲಿಗೆ ಬಾಣವನ್ನು ಆರೋಪಿಸಿ, ಯೂಲಿಸಸ್ಸನನ್ನು ಕೊಲ್ಲಬೇಕೆಂದು ನಾನು ಪ್ರಯತ್ನ ಮಾಡಿದೆನು. ನಿಯಾಪ್ಟೋಲಿಮುಸ್ಸನು ನನ್ನ ಕೈಯನ್ನು ಹಿಡಿದುಕೊಂಡು, "ನೀನು ಮಹಾಪರಾಧವನ್ನು ಮಾಡುವುದಕ್ಕೆ ಉದ್ಯುಕ್ತನಾಗಿರುವಿ. ಕೋಪಪರವಶನಾಗಿ ನೀನು ಮಾಡಿದ ಕರ್ಮಫಲವನ್ನು ನೀನೇ ಅನುಭವಿಸಬೇಕಾಗುವುದು. ಈ ಬಾಣಗಳು ಮಹಾತ್ಮನಾದ ಯೂಲಿಸಸ್ಸನನ್ನು ಕೊಲ್ಲುವುದಕ್ಕೆ ಎಂದಿಗೂ ಸಮರ್ಥವಾಗಲಾರವು. ಅವನ ಧರ್ಮವೇ ಅವನಿಗೆ ವಜ್ರಕವಚವಾಗಿರುವುದು. ಈ ವಜ್ರಕವಚವನ್ನು ಭೇದಿಸುವ ಶಕ್ತಿಯು ಹರ್ಕ್ಯುಲೀಸನ ಬಾಣಗಳಿಗೂ ಇರುವುದಿಲ್ಲ. ಇದನ್ನು ತಿಳಿದುಕೊಳ್ಳುವ ಶಕ್ತಿಯಿಲ್ಲದೆ, ಈ ಸಾಹಸ ಕಾರ್ಯದಲ್ಲಿ ಉದ್ಯುಕ್ತನಾಗಿರುವಿ. ಇದು ಕೇವಲ ಅಧರ್ಮವಾದದ್ದು" ಎಂದು ಹೇಳಿದನು. ಯೂಲಿಸಸ್ಸನು ನಿರ್ಭ

ಯವಾಗಿ ಪ್ರಳಯಕಾಲದ ಝುಂಝುಾಮಾರುತವನ್ನು ಲಕ್ಷ್ಯಮಾಡದೆ, ಮೇರುಪರ್ವತವು ಹೇಗೆ ನಿಶ್ಚಲವಾಗಿರುವುದೋ ಹಾಗೆ ಇದ್ದನು. ಅವನ ಧೈರ್ಯಸ್ಥೈರ್ಯಗಳೂ, ಅವನ ಶಾಂತಿಯೂ ನನಗೆ ಆಶ್ಚರ್ಯವನ್ನುಂಟುಮಾಡಿದವು. ಅವನು ಆಯುಧಗಳನ್ನು ಅಪಹರಿಸಿಕೊಂಡು ಹೋಗುವನೆಂದು ತಿಳಿದುಕೊಂಡಿದ್ದೆನು. ಅದು ನನ್ನ ಮನೋಭಾವವೆಂದು ಗೊತ್ತಾಯಿತು. ನಾನು ಮಾಡಿದ ಬಾಣಪ್ರಯೋಗದಿಂದ ಅವನು ಭಯಪಡುವನೆಂದು ನಾನು ತಿಳಿದುಕೊಂಡಿದ್ದೆನು. ಅವನ ನಿರ್ಭಯವು ನನಗೆ ನಾಚಿಕೆಯನ್ನುಂಟುಮಾಡಿತು. ಅವನು ದ್ರೋಹಿ ಎಂಬದಾಗಿಯೂ, ಪಾಪಿಷ್ಠನೆಂಬದಾಗಿಯೂ ತಿಳಿದುಕೊಂಡಿದ್ದೆನು. ಅವನು ಮಹಾತ್ಮನೆಂದು ನನಗೆ ಗೊತ್ತಾಯಿತು. ಆಗ ನಿಯಾಪ್ಟೋಲಿಮುಸ್ಸನು ಹೇಳಿದ್ದೇನಂದರೆ:—

"ನಾವು ನಿನ್ನ ಬಳಿಗೆ ಬಂದು ನಿನ್ನನ್ನು ರಕ್ಷಿಸುವ ಪ್ರಯತ್ನವನ್ನು ಮಾಡಿರುವೆವು. ನಾವು ನಿನ್ನ ಶತ್ರುಗಳೆಂದು ತಿಳಿದುಕೊಂಡಿರುವಿ. ನಾವು ಗ್ರೀಸ್ ದೇಶದವರನ್ನು ಉದ್ಧರಿಸಬೇಕೆಂದು ಸಂಕಲ್ಪ ಮಾಡಿರುವೆವು. ನೀನು ಅದಕ್ಕೆ ಪ್ರತಿಕಕ್ಷಿಯಾಗಿರುವಿ. ಹರ್ಕ್ಯುಲೀಸನ ಬಾಣಗಳಿಂದ ಗ್ರೀಸ್ ದೇಶದ ಶತ್ರುಗಳು ಹತವಾಗಬೇಕೆಂದು ಜಗದೀಶ್ವರನ ಸಂಕಲ್ಪವಿರುವುದು. ಅದಕ್ಕೆ ನೀನು ಪ್ರತಿಕಕ್ಷಿಯಾಗಿರುವಿ. ಪ್ಯಾರಿಸ್ಸನನ್ನು ಸಂಹರಿಸಿ, ಗ್ರೀಸ್ ದೇಶಕ್ಕೆ ದಿಗ್ವಿಜಯವಾದ ಮೇಲೆ ಈ ದೇಶದ ಧನ್ವಂತರಿಯಾದ ಇಸ್ಕ್ಯುಪೇಲಿಯುಸ್ಸನು ನಿನ್ನ ಘಾಯಕ್ಕೆ ಔಷಧವನ್ನು ಹಾಕಿ, ನಿನಗೆ ಆರೋಗ್ಯವನ್ನು ಉಂಟುಮಾಡಬೇಕೆಂದು ಜಗದೀಶ್ವರನ ಸಂಕಲ್ಪವಿರುವುದು. ಅದಕ್ಕೆ ನೀನು ಪ್ರತಿಭಟಿಸುತ್ತೀಯೆ. ಈ ವಿಷಯಗಳೆಲ್ಲಾ ದೈವಜ್ಞನಾದ ಯೂಲಿಸಸ್ಸನಿಗೆ ತಿಳಿದಿರುವುದು. ಅಶರೀರ ವಾಕ್ಯ ಈ ಸಂಗತಿಗಳನ್ನು ಅವನಿಗೆ ತಿಳಿಸಿರುವುದು. ಇದನ್ನು ನಾನೂ ಕೇಳಿರುವೆನು. ನಿನಗೆ ಬಿಲ್ಲುಗಳನ್ನೂ, ಅಂಬುಗಳನ್ನೂ ವಾಪಸು ಮಾಡು ಎಂದು ನನಗೆ ಹೇಳುತ್ತಿರಲಿಲ್ಲ. ನನಗೆ ದ್ರೋಹಬುದ್ಧಿಯು ಇದ್ದಿದ್ದರೆ ನಾನು ಅದನ್ನು ವಾಪಸುಮಾಡುತ್ತಲೂ ಇರಲಿಲ್ಲ. ಈ ವಿಷಯವು ನಿನಗೆ ತಿಳಿಯದೆ ಹೋದದ್ದಕ್ಕಾಗಿ ನಾನು ವಿಷಾದಿಸುತ್ತೇನೆ. ಮಿತ್ರರನ್ನು ಶತ್ರುಗಳೆಂದು ತಿಳಿದುಕೊಂಡ ಪಾಪವು ನಿನಗೆ ತಪ್ಪುವುದಿಲ್ಲ. ಇಷ್ಟರ ಮೇಲೆ ಯೂಲಿಸಸ್ಸನನ್ನು ಈ ಬಾಣಪ್ರಯೋಗದಿಂದ ಸಂಹರಿಸುವುದು ನಿನಗೆ ಯುಕ್ತವಾಗಿ ತೋರಿದರೆ, ಬಾಣಪ್ರಯೋಗವನ್ನು ಮಾಡಬಹುದು" ಎಂದು ಹೇಳಿ, ನಿಯಾಪ್ಟೋಲಿಮುಸ್ಸನು ನನ್ನ ಕೈಯ್ಯನ್ನು ಬಿಟ್ಟನು. ಕೂಡಲೆ

ನನಗೆ ಪರಿಜ್ಞಾನ ಉಂಟಾಯಿತು. ಯುಕ್ತಾಯುಕ್ತ ವಿವೇಚನೆಯು ಬಂದಿತು. ನಾನು ಮಹಾ ಪಾಪಿಯೆಂಬದಾಗಿಯೂ, ಕೃತಘ್ನನೆಂಬದಾಗಿಯೂ, ನನಗೆ ನಾನೇ ಶತ್ರುವೆಂಬದಾಗಿಯೂ ಗೊತ್ತಾಯಿತು. ಈ ಸ್ಥಿತಿಯಲ್ಲಿರುವಾಗ ಒಂದು ಮೇಘವು ನನ್ನ ಕಡೆಗೆ ಇಳಿಯಿತು. ಅದರ ಮಧ್ಯದಲ್ಲಿ ಕೋಟಿಸೂರ್ಯಪ್ರಕಾಶನಾಗಿ ಹರ್ಕ್ಯುಲೀಸನು ನನ್ನ ದೃಷ್ಟಿಪಥಕ್ಕೆ ಬಿದ್ದನು. ಅವನನ್ನು ನೋಡಿ ನಾನು ಪರಮಾನಂದಪರವಶನಾದೆನು. ಅವನು ನನ್ನನ್ನು ಕುರಿತು ಹೇಳಿದ್ದೇನಂದರೆ:—

"ಎಲೈ ಫೈಲೊಕ್ಟೇಟಸ್ಸನೇ, ಜಗದೀಶ್ವರನ ಆಜ್ಞೆಯಿಂದ ನಾನು ನಿನಗೆ ಪ್ರತ್ಯಕ್ಷನಾಗಿರುವೆನು. ನಾನು ದೈವತ್ವವನ್ನು ಹೊಂದುವುದಕ್ಕೆ ಧರ್ಮವಾದ ನನ್ನ ಪರಾಕ್ರಮವು ಹೇಗೆ ಸಾಧಕವಾಯಿತೋ ಅದನ್ನು ನೀನು ಬಲ್ಲೆ. ದುಷ್ಟನಿಗ್ರಹಕ್ಕೂ, ಶಿಷ್ಟಪರಿಪಾಲನೆಗೂ ಸಾಧಕವಾಗಲೆಂದು ನಾನು ನನ್ನ ಬಾಣಗಳನ್ನೂ, ಬಿಲ್ಲುಗಳನ್ನೂ ನಿನಗೆ ಒಪ್ಪಿಸಿದೆನು. ಅವುಗಳನ್ನು ಧರ್ಮಸಂಸ್ಥಾಪನೆಗೋಸ್ಕರ ವಿನಿಯೋಗಿಸು. ಯೂಲಿಸಸ್ಸನು ನಿನಗೆ ಶತ್ರುವಲ್ಲ. ಎಕಲೀಸನ ಮಗನೂ ನಿನಗೆ ಶತ್ರುವಲ್ಲ. ಇವರಿಬ್ಬರೂ ಮಹಾತ್ಮರು. ಇವರು ಧರ್ಮವನ್ನು ಬಿಟ್ಟು ನಡೆಯತಕ್ಕವರಲ್ಲ. ಟ್ರಾಯ್ ಯುದ್ಧದಲ್ಲಿ ಅನೇಕರು ಮಡಿದಾಗ್ಯೂ, ಇವರ ಧರ್ಮವು ಇವರನ್ನು ರಕ್ಷಿಸಿರುವುದು. ಇವರ ಸಲಹೆಗಳು ವೇದವಾಕ್ಯಗಳಾಗಿದ್ದರೆ ಹೇಗೋ ಹಾಗೆ ಪರಿಗ್ರಹಿಸು, ಪ್ಯಾರಿಸ್ಸನು ತನ್ನ ಅಜಿತೇಂದ್ರಿಯಪ್ರವೃತ್ತಿಯಿಂದ ಧರ್ಮಕ್ಕೆ ಗ್ಲಾನಿಯನ್ನುಂಟುಮಾಡಿರುವನು. ಅವನನ್ನು ಸಂಹರಿಸುವುದಕ್ಕೋಸ್ಕರ ನನ್ನ ಬಾಣಗಳು ನಿರ್ಮಾಣವಾಗಿರುವುವು. ಟ್ರಾಯ್ ದೇಶವನ್ನು ಗೆದ್ದ ಮೇಲೆ ಆ ದೇಶದಿಂದ ತೆಗೆದುಕೊಳ್ಳಲ್ಪಟ್ಟ ಪದಾರ್ಥಗಳು ಮೌಂಟ್ ಈಟಾದಲ್ಲಿರತಕ್ಕ ನಿಮ್ಮ ತಂದೆಗೆ ಕಳುಹಿಸಲ್ಪಡಲಿ. ಅವನು ಅವುಗಳನ್ನು ನನ್ನ ಬೃಂದಾವನದ ಸಮೀಪದಲ್ಲಿ ಇಡುವನು. ಈ ಬಾಣಗಳ ಸಹಾಯವಿಲ್ಲದೆ ಟ್ರಾಯ್ ದೇಶವು ಗೆಲ್ಲಲ್ಪಡುವುದಿಲ್ಲ. ಈ ಜಯಯಾತ್ರೆಗೆ ನೀನು ಹೊರಟ ಕೂಡಲೆ ಇಸ್ಕುಲೇಪಿಯಸ್ಸನು ಬಂದು, ನಿನಗೆ ಚಿಕಿತ್ಸೆಯನ್ನು ಮಾಡುವನು. ದೇವತೆಗಳೆಲ್ಲಾ ನಿನಗೆ ಅನುಗ್ರಹಿಸುವರು. ನಿನಗೆ ಆರೋಗ್ಯವೂ, ಶಾಂತಿಯೂ ಉಂಟಾಗುವುವು ಕೂಡಲೆ ಯೂಲಿಸಸ್ಸನ ಉಪದೇಶಕ್ಕೆ ಅನುಸಾರವಾಗಿ ದುಷ್ಟನಿಗ್ರಹವನ್ನು ಮಾಡುವುದಕ್ಕೆ ನೀನೂ, ಎಕಲೀಸನ ಮಗನೂ ಸಿದ್ಧ

ಗಳಂತೆ ನುಗ್ಗಿ, ಜಯಲಕ್ಷ್ಮೀಪ್ರಸನ್ನತೆಯನ್ನು ಹೊಂದುವುದಕ್ಕೆ ತಕ್ಕ ಯೋಗ್ಯತೆಯುಳ್ಳವರಾಗುವಿರಿ. ನಿಮಗೆ ದೇವರು ಮಂಗಳವನ್ನು ಮಾಡಲಿ" ಎಂದು ಹೇಳಿ, ಹರ್ಕ್ಯುಲೀಸನು ಅದೃಶ್ಯನಾದನು.

ಈ ಮಾತುಗಳನ್ನು ಕೇಳಿ ನಾನು ಪರವಶನಾದೆನು. ಅಷ್ಟರಲ್ಲಿಯೇ ರಾತ್ರಿಯು ಕಳೆಯಿತು. ಪೂರ್ವ ದಿಕ್ಕು ಅರುಣೋದಯದಿಂದ ಪ್ರಜ್ವಲಿತವಾಯಿತು. ಈ ಬೆಳಕು ನನಗೆ ಪರಮಾನಂದವನ್ನುಂಟುಮಾಡಿತು. ದಶದಿಕ್ಕುಗಳನ್ನೂ ನೋಡಿದೆನು. ನನ್ನ ಗುಹೆಗೂ, ಪರ್ವತಗಳಿಗೂ, ವನಗಳಿಗೂ, ಸಮುದ್ರದ ಅಲೆಗಳಿಗೂ, ಅಲ್ಲಿ ಹರಿಯುತ್ತಲಿರುವ ನದೀನದಗಳಿಗೂ, ಜಿಂಕೆಗಳೇ ಮೊದಲಾದ ತಿರ್ಯಗ್ಜಂತುಗಳಿಗೂ, ಪಕ್ಷಿಗಳಿಗೂ ವಂದನೆಯನ್ನರ್ಪಿಸಿ, ದೈವಾಜ್ಞೆಯಿಂದ ನಿಮ್ಮನ್ನು ಬಿಟ್ಟುಹೋಗಬೇಕಾಗಿದೆ. ನಿಮಗೆ ಮಂಗಳವಾಗಲಿ ಎಂದು ಹೇಳಿದೆನು. ಸಮುದ್ರತೀರದಲ್ಲಿ ಗ್ರೀಕ್ ದೇಶದ ಹಡಗು ಸಿದ್ಧವಾಗಿತ್ತು. ಆ ಹಡಗನ್ನು ಏರಿದೆನು. ಟ್ರಾಯ್ ಪಟ್ಟಣದ ಸಮೀಪಕ್ಕೆ ಹೋದೆನು. ಹರ್ಕ್ಯುಲಿಯುಸ್ಸನು ಹೇಳಿದಂತೆ ನಾನು ಟ್ರಾಯ್ ಪಟ್ಟಣದ ಸಮೀಪಕ್ಕೆ ಹೋದ ಕೂಡಲೆ, ಇಸ್ಕುಪೇಲಿಯಸ್ ಎಂಬ ದೇವವೈದ್ಯನು ನನ್ನ ಬಳಿಗೆ ಬಂದು, ನನ್ನ ಘಾಯಕ್ಕೆ ಔಷಧವನ್ನು ಹಾಕಿದನು. ಕೂಡಲೆ ಘಾಯವು ವಾಸಿಯಾಯಿತು. ಹರ್ಕ್ಯುಲೀಸನ ಬಾಣಗಳನ್ನು ಪ್ರಯೋಗ ಮಾಡಿದ ಕೂಡಲೆ, ಟ್ರಾಯ್ ದೇಶವು ಜರ್ಝರಿತವಾಯಿತು. ದುರಾತ್ಮನಾದ ಪ್ಯಾರಿಸ್ಸನು ನೆಲಕ್ಕೆ ಬಿದ್ದನು. ಟ್ರಾಯ್ ಪಟ್ಟಣವು ಭಸ್ಮೀಭೂತವಾಯಿತು. ಇದಕ್ಕೆಲ್ಲಾ ಯೂಲಿಸಸ್ಸನು ಕಾರಣನಾದಾಗ್ಯೂ, ಅವನಲ್ಲಿ ನನಗೆ ವಿಶ್ವಾಸವಿರಲಿಲ್ಲ. ನಿನ್ನ ತಂದೆಯೆಂಬ ಭಾವನೆಯಿಂದ ಅವನನ್ನು ನಾನು ಗೌರವಿಸಿದೆನು.

ಈ ರೀತಿಯಲ್ಲಿ ಫೈಲೋಕ್ಟೇಟೀಸನು ತನ್ನ ವೃತ್ತಾಂತವನ್ನು ಹೇಳುತ್ತಿದ್ದಾಗ, ಟೆಲಿಮಾಕಸ್ಸನು ಸ್ತಂಭೀಭೂತನಾಗಿ, ನಿಂತಿದ್ದನು. ಅವನ ದೃಷ್ಟಿಯು ಫೈಲೋಕ್ಟೇಟೀಸನಲ್ಲಿ ಲೀನವಾಗಿತ್ತು. ಹರ್ಕ್ಯುಲೀಸ್, ಯೂಲಿಸಿಸ್, ನಿಯೋಪ್ಟಾಲಿಮಸ್ ಮೊದಲಾದವರ ವೃತ್ತಾಂತವನ್ನು ಕೇಳುತ್ತಾ, ಆಗಾಗ್ಗೆ ಹಿಗ್ಗುತ್ತಲೂ, ತಗ್ಗುತ್ತಲೂ ಇದ್ದನು. ಕೆಲವು ಕಾಲದಲ್ಲಿ ಆಹಾರಕಾರವನ್ನು ಮಾಡುತ್ತಾ, ಮತ್ತೆ ಕೆಲವು ಕಾಲದಲ್ಲಿ ವ್ಯಸನವನ್ನು ಪ್ರದರ್ಶನ ಮಾಡುತ್ತಾ ಇದ್ದನು.

# ಹದಿನೈದನೆಯ ಅಧ್ಯಾಯ.



ಮಿತ್ರಮಂಡಲಿಯ ಸೈನ್ಯಗಳು, ಪ್ರತಾಪಶ್ರೀಯುತವಾಗಿಯೂ, ನಾಸ್ತಿಕನಾಗಿಯೂ ಇದ್ದ ಅಪ್ರಾಕ್ಸಿಟೆನ್ಸನನ್ನು ಅಟ್ಟಿಕೊಂಡು ಬರುತ್ತಿದ್ದವು. ಅಲ್ಲಿನ ಯೋಧರೆಲ್ಲಾ ಪರಸ್ಪರ ವೈರವುಳ್ಳವರಾಗಿಯೂ, ಒಬ್ಬರಲ್ಲಿ ಒಬ್ಬರು ಹೊಟ್ಟೇಕಿಚ್ಚುವುಳ್ಳವರಾಗಿಯೂ ಇದ್ದರು. ಜಿಲಿನಾಕಸ್ಸನು ವಯಸ್ಸಿನಲ್ಲಿ ಚಿಕ್ಕವನಾದಾಗ್ಯೂ, ಕಾಂತಿಯಲ್ಲಿ ಮೆಂಟರನೇ ಮೊದಲಾದವರಿಗೆ ಸಮಾನವಾಗಿದ್ದನು. ಗಾಂಭೀರ್ಯವೂ, ದರ್ಪವೂ ಇವನಲ್ಲಿ ಮೂರ್ತೀಭವಿಸಿದ್ದವು. ಧನವನ್ನು ಇವನು ತೃಣಕ್ಕಿಂತಲೂ ಕಡೆಯಾಗಿ ಕಾಣುತ್ತಿದ್ದನು. ಅರ್ಥಿಗಳು ಬೇಕಾದ ಇಷ್ಟಾರ್ಥಗಳನ್ನು ಇವನಿಂದ ಹೊಂದುತ್ತಿದ್ದರು. ಪರರಿಗೆ ಉಪಕಾರವನ್ನು ಮಾಡಿ, ತಾನು ಉಪಕೃತನಾದಂತೆ ಭಾವಿಸುತ್ತಿದ್ದನು. ತನ್ನ ಸೇವೆಯನ್ನು ಯಾರಾದರೂ ಪರಿಗ್ರಹಿಸಿದರೆ, ಅವರು ತನಗೆ ಉಪಕಾರ ಮಾಡಿದಂತೆ ಇವನು ಭಾವಿಸುತ್ತಿದ್ದನು. ಸತ್ಕುಲಪ್ರಸೂತನಾದಾಗ್ಯೂ, ಸಕಲ ಜನಗಳ ಸೇವೆಯಲ್ಲಿಯೂ ತುಂಬಾ ಆಸಕ್ತಿಯುಳ್ಳವನಾಗಿದ್ದನು. ಮೆಂಟರನ ಸಹವಾಸದಿಂದ ಇವನ ನಡೆನುಡಿಗಳು ಅನುಗುಣವಾಗಿ ಪರಿಣಮಿಸಿದವು. ಈ ಗುಣಾತಿಶಯಗಳೆಲ್ಲಾ ಇದ್ದಾಗ್ಯೂ, ಇವನಿಗೆ ಮಾರ್ಗದರ್ಶನ ಮಾಡುವುದಕ್ಕೆ ಮೆಂಟರು ವಿನಾ ಇನ್ಯಾರಿಂದಲೂ ಆಗುತ್ತಲಿರಲಿಲ್ಲ. ಎಷ್ಟು ದೊಡ್ಡವರೊಡನೆ ಮಾತನಾಡುತ್ತಿದ್ದಾಗ್ಯೂ, ಅವರೆಲ್ಲರಿಗಿಂತಲೂ ಇವನು ದೊಡ್ಡವನೆಂದು ಭಾವಿಸಲ್ಪಡುತ್ತಿದ್ದನು. ಮೆಂಟರನು ಇವನ ಬಳಿಗೆ ಬಂದ ಕೂಡಲೆ, ಆಚಾರ್ಯರನ್ನು ನೋಡಿದ ಕೂಡಲೆ, ಶಿಷ್ಯರು ಹೇಗೆ ನಡೆದುಕೊಳ್ಳುವರೋ ಹಾಗೆ ಜಿಲಿಮಾಕಸ್ಸನು ನಡೆದುಕೊಳ್ಳುತ್ತಿದ್ದನು. ಜಿಲಿಮಾಕಸ್ಸನು ಫೈಲೋಕ್ಟೇಟೀಸನ ಎದುರಿಗೆ ವಿಸ್ಮಿತನಾಗಿ ನಿಂತಿರುವ ಕಾಲಕ್ಕೆ ಸರಿಯಾಗಿ ಅಲ್ಲಿಗೆ ಫೆಲಾಂಥಸ್ಸನೂ, ಅವನ ಸಹೋದರನಾದ ಹಿಪಿಯಾಸನೂ ಬಂದರು. ಅವರ ಧೈರ್ಯವೂ, ಸ್ಥೈರ್ಯವೂ, ಶಕ್ತಿಯೂ, ಸಾಹಸವೂ ಅಸದೃಶವಾಗಿದ್ದವು. ಕ್ಯಾಸ್ಟರ್ ಮತ್ತು ಪೋಲಿಕ್ಸ್ ಎಂಬ ವೀರಾಧಿವೀರರೂ ಕೂಡ ಅವರ ಎದುರಿಗೆ ನಿಲ್ಲಲಾರದೆ ಇದ್ದರು. ಈ ಇಬ್ಬರು ಸಹೋದರರೂ ಈ ಯುದ್ಧದಲ್ಲಿ ಹಿಡಿಯಲ್ಪಟ್ಟ ಕೆಲವು ಜನ ಖೈದಿಗಳನ್ನು ಟೆರಂಟಮ್ ಪಟ್ಟಣಕ್ಕೆ ಹಿಡಿದುಕೊಂಡು ಹೋಗುವ ಪ್ರಯತ್ನವನ್ನು ಮಾಡಿದರು. ಆ ಖೈದಿ

ಗಳನ್ನು ಹಿಡಿದುಕೊಂಡು ಹೋಗುವುದಕ್ಕೆ ಮುಂಚೆ ಮಹಾಜನಗಳ ಆಜ್ಞೆಯನ್ನು ಪಡೆಯಬೇಕಾಗಿತ್ತು. ಫೆಲಾಂಥಸ್ ಮತ್ತು ಹಿಪಿಯಾಸರು ಮಹಾಜನಗಳ ಆಜ್ಞೆಗೆ ನಾವು ಅಧೀನರಲ್ಲವೆಂದು ವಿಜೃಂಭಿಸಿದರು. ಟೆಲಿಮಾಕಸ್ಸನು ಇದು ತಪ್ಪೆಂದು ಭಾವಿಸಿದನು. ಅವರಿಗೆ ಧರ್ಮೋಪದೇಶವನ್ನು ಮಾಡಿದನು. ಅವರು ಇವನನ್ನು ಲಕ್ಷ್ಯಮಾಡಲಿಲ್ಲ. "ಈ ವೈರಿಗಳು ನನ್ನಿಂದ ಜಯಿಸಲ್ಪಟ್ಟವರು, ಆದುದರಿಂದ ಅವರು ನನ್ನವರಾಯಿತು. ಅವರನ್ನು ಟೆರಂಟಮ್ ಪಟ್ಟಣಕ್ಕೆ ತೆಗೆದುಕೊಂಡು ಹೋಗುವುದಕ್ಕೆ ನಮಗೆ ಹಕ್ಕು ಉಂಟು, ಇದನ್ನು ನಿರೋಧಿಸುವುದಕ್ಕೆ ನಿನಗೆ ಯಾವ ಹಕ್ಕೂ ಇರುವುದಿಲ್ಲ" ಎಂದು ಹೇಳಿದರು. 'ನೀವು ಹೇಳುವುದು ಸಾಧುವಲ್ಲ, ಮಹಾಜನಗಳ ಅನುಮತಿಯಿಂದ ನೀವು ಈ ಕೆಲಸವನ್ನು ಮಾಡಬೇಕು' ಎಂದು ಟೆಲಿಮಾಕಸ್ಸನು ಹೇಳಿದನು. ಅದಕ್ಕೆ ಹಿಪಿಯಾಸನು ತುಂಬಾ ಕೋಪವುಳ್ಳವನಾಗಿ, ನಿನ್ನನ್ನು ನರಕಕ್ಕೆ ಕಳುಹಿಸುತ್ತೇನೆ ಎಂದು ಹೇಳಿ, ಮೇಲೆ ಬಿದ್ದನು. ಟೆಲಿಮಾಕಸ್ಸನು ತನಗೆ ಲಿಯಾರ್ಟೀಸನಿಂದ ಬಂದಿದ್ದ ಕತ್ತಿಯನ್ನು ಹಿಡಿಯಿಂದ ತೆಗೆದನು. ಅದನ್ನು ತೆಗೆಯುವುದರೊಳಗಾಗಿ ಹಿಪಿಯಾಸನು ಆ ಕತ್ತಿಯನ್ನು ಕಿತ್ತುಕೊಂಡು ಮುರಿದುಹಾಕಿದನು. ಇಬ್ಬರಿಗೂ ಯುದ್ಧಕ್ಕೆ ಪ್ರಾರಂಭವಾಯಿತು. ಒಬ್ಬರನ್ನೊಬ್ಬರು ಸಂಹರಿಸಬೇಕೆಂಬ ಭಾವನೆಯಿಂದ ಯುದ್ಧಕ್ಕೆ ತೊಡಗಿದರು. ಹಿಪಿಯಾಸನು ಬಹಳ ಬಲಿಷ್ಠನು. ಟೆಲಿಮಾಕಸ್ಸನು ಇನ್ನೂ ಚಿಕ್ಕ ಹುಡುಗನು. ಟೆಲಿಮಾಕಸ್ಸನ ಕಾಲುಗಳು ನಡುಗುವುದಕ್ಕೆ ಉಪಕ್ರಮವಾಯಿತು. ಇದನ್ನು ನೋಡಿ ಹಿಪಿಯಾಸನು ಜಯಲಕ್ಷ್ಮೀಪ್ರಸನ್ನತೆಯು ತನಗೆ ಆಯಿತೆಂದು ತಿಳಿದುಕೊಂಡನು ಹಿಪಿಯಾಸನು ವಯಸ್ಸಿನಲ್ಲಿ ದೊಡ್ಡವನಾದಾಗ್ಯೂ, ಶಕ್ತಿಯಲ್ಲಿ ತನಗಿಂತ ಹೆಚ್ಚಾದಾಗ್ಯೂ ಟೆಲಿಮಾಕಸ್ಸನು ಧೈರ್ಯವನ್ನು ತಂದುಕೊಂಡನು. ಟೆಲಿಮಾಕಸ್ಸನಿಗೆ ಸತ್ಯವೂ, ಧರ್ಮವೂ ತನ್ನ ಪಕ್ಷದಲ್ಲಿರುವುದೆಂಬ ಭಾವನೆ ಉಂಟಾಯಿತು. ಕೊಂಚಹೊತ್ತಿನೊಳಗೆ ಹಿಪಿಯಾಸನ ಬಲವು ಕಡಮೆಯಾಯಿತು. ಟೆಲಿಮಾಕಸ್ಸನು ಬಲವಾದನು. ಸ್ವಲ್ಪ ಹೊತ್ತಿನಲ್ಲಿ ಹಿಪಿಯಾಸನಿಗೆ ಬೇಜಾರಾಯಿತು. ಒಳ್ಳೇ ಸಮಯವನ್ನು ನೋಡಿ, ಟೆಲಿಮಾಕಸ್ಸನು ಅವನನ್ನು ಕೆಡವಿದನು. ಓಕ್ ಗಿಡವು ಕೆಳಕ್ಕೆ ಬಿದ್ದು ತನ್ನ ಭಾರದಿಂದ ತಾನೇ ಚೂರುಚೂರಾಗುವಂತೆ ಹಿಪಿಯಾಸನು ನೆಲಕ್ಕೆ ಬಿದ್ದು, ಅನೇಕ ಘಾಯಗಳನ್ನು ಹೊಂದಿದನು. ಅಷ್ಟರಲ್ಲಿಯೇ ಹಿಪಿಯಾಸನಿಗೆ ಸಹಾಯಮಾಡುವುದಕ್ಕೋಸ್ಕರ ತಾನು ಯುದ್ಧಕ್ಕೆ ಬಂದು, ಅವನೊಡನೆ ಯುದ್ಧಮಾ

ಡುವ ಸಂಭವವು ಬಂದಿತಲ್ಲಾ ಎಂದು ಯೋಚನೆ ಮಾಡುತ್ತಿದ್ದಾಗ, ಫೆಲಾಂಥ ಸ್ಸನು ಘಾಯವನ್ನು ಹೊಂದಿದ ಹುಲಿಯು ಹಾಗೆ ಟಿಲಿಮಾಕಸ್ಸನ ಮೇಲೆ ಬಿದ್ದನು. ಅವನನ್ನು ನಿಗ್ರಹಿಸಿ, ಟಿಲಿಮಾಕಸ್ಸನು ಹೇಳಿದ್ದೇನೆಂದರೆ:—

"ಎಲೈ ಫೆಲಾಂಥಸ್ಸನೇ, ನಾನು ಹುಡುಗನೆಂದು ಭಾವಿಸಿ, ನಿನ್ನ ತಮ್ಮನು ನನ್ನನ್ನು ಜಯಿಸಬೇಕೆಂದು ಪ್ರಯತ್ನ ಮಾಡಿದನು. ಅವನನ್ನು ಸಂಹರಿಸುವುದು ಸಾಧ್ಯವಾಗಿತ್ತು. ಆದರೆ ನನ್ನ ಮಿತ್ರಮಂಡಲಿಗೆ ಸೇರಿದವನಾದ್ದರಿಂದ ಅವನನ್ನು ಸಂಹರಿಸಲಿಲ್ಲ. ಈಗ ನೀನು ಯುದ್ಧಕ್ಕೆ ಬಂದಿರುವಿ, ನಿನ್ನ ತಮ್ಮನನ್ನು ಯಾವ ಕಾರಣದಿಂದ ಬದುಕಿಸಿರುವೆನೋ ಅದೇ ಕಾರಣದಿಂದ ನಿನಗೂ ಪ್ರಾಣದಾನವನ್ನು ಮಾಡಿರುವೆನು. ನಾವೆಲ್ಲರೂ ಮಿತ್ರಮಂಡಲಿಯವರು. ಶತ್ರುಗಳ ಮೇಲೆ ನಮ್ಮ ಬಲವನ್ನು ತೋರಿಸಬೇಕೇ ಹೊರತು, ನಾವು ಒಬ್ಬರ ಮೇಲೆ ಒಬ್ಬರು ಯುದ್ಧಮಾಡುವುದು ಯೋಗ್ಯವಾದದ್ದಲ್ಲ. ಧರ್ಮವನ್ನು ಬಿಟ್ಟು ನೀವಿಬ್ಬರೂ ನಡೆದಿರಿ. ನಿಮಗೆ ಪರಾಜಯವು ಆಯಿತು. ಇನ್ನುಮೇಲೆ ಬುದ್ಧಿಯನ್ನು ಕಲಿತುಕೊಳ್ಳಿ. ನಾವೇ ಬಲಶಾಲಿಗಳೆಂದು ದುರಹಂಕಾರವನ್ನುಬಿಡಿ" ಎಂದು ಹೇಳಿ, ಅವರಿಗೆ ತೇಜೋವಧೆಯನ್ನು ಮಾಡಿ, ಅವರನ್ನು ಅಲ್ಲಿಂದ ಹೊರಡಿಸಿದನು.

ಫೆಲಾಂಥಸ್ಸನೂ ಮತ್ತು ಹಿಪಿಯಾಸನೂ ಪರಾಜಿತರಾಗಿ ಹೊರಟು ಹೋದರು. ಇವರು ಸ್ವಸ್ವಹೃದಯವರು, ತನಗೆ ಮಿತ್ರರು, ಇವರನ್ನು ದಂಡಿಸಿದೆನಲ್ಲಾ ಎಂದು ಟಿಲಿಮಾಕಸ್ಸನಿಗೆ ಅನುತಾಪವು ಉಂಟಾಯಿತು. ಕೋಪತಾಪಗಳಿಗೆ ಅಧೀನನಾಗಿ, ಹಿಪಿಯಾಸನೊಡನೆ ಯುದ್ಧಮಾಡಿದ್ದು ತಪ್ಪೆಂದು ತೋರಿತು. ಸಂಚಾಯಿತರ ಮೂಲಕ ವ್ಯವಸ್ಥೆಯಾಗುವ ಕೆಲಸವನ್ನು ಮಾಡುವುದರಲ್ಲಿ ಪರಾಕ್ರಮವನ್ನು ತೋರಿಸುವ ಸಂಭವವು ಬರುವಂತೆ ಮಾಡಿಕೊಂಡೆನಲ್ಲಾ ಎಂದು ಅವನು ಅನುತಾಪವನ್ನು ಹೊಂದಿದನು. ಈ ವಿಷಯವು ಮೆಂಟರಿಗೆ ತಿಳಿದರೆ ಏನು ಗತಿ ಎಂಬ ಭಯವೂ ಅವನಿಗೆ ಉಂಟಾಯಿತು. ತಾನು ಅಪರಾಧ ಮಾಡಿದೆನೆಂಬ ಭಾವನೆಯಿಂದ ಅನಿರ್ವಚನೀಯವಾದ ಕ್ಲೇಶವೂ ಅವನಿಗೆ ಉಂಟಾಯಿತು. ಬಹಳವಾದ ಯಾತನೆಯಿಂದ ಸಂತಪಿಸುವ ರೋಗಿಗಳಂತೆ ಇವನು ನರಳುವುದಕ್ಕೆ ಉಪಕ್ರಮಿಸಿದನು. ಆತ್ಮನಿಂದೆಯನ್ನು ಮಾಡಿಕೊಳ್ಳುತ್ತಾ, ಯಾರನ್ನೂ ನೋಡದೆ, ಬಾಗಿಲನ್ನು ಹಾಕಿಕೊಂಡು ಎರಡು ದಿವಸಗಳ ವರೆಗೂ ಮನೆಯಲ್ಲಿ ಇದ್ದನು. ಈ ದೌರಾತ್ಮ್ಯವು ಮೆಂಟರಿಗೆ ತಿಳಿದರೆ ಏನು ಗತಿ? ಅವನಿಗೆ ಮುಖವನ್ನು ಹೇಗೆ

ತೋರಿಸುವೆನು ? ಸತ್ಪುರುಷರಾದ ಇತರರಿಗೆ ಮುಖವನ್ನು ಹೇಗೆ ತೋರಿಸಲಿ ? ಯೂಲಿಸಸ್ಸನ ಮಗನು ಹೀಗೆ ಅವಿವೇಕದಿಂದ ನಡೆದನೆಂದು ಜನಗಳು ಅಂದುಕೊಳ್ಳುವಂತಾಯಿತಲ್ಲಾ ! ನನ್ನ ಅವಿವೇಕದಿಂದ ನನ್ನ ತಂದೆಗೂ, ನನ್ನ ಗುರುವಾದ ಮೆಂಟರಿಗೂ ಅವಮಾನ ಉಂಟಾಯಿತಲ್ಲಾ ! ನನ್ನ ಸಂಗಡಕ್ಕೆ ಸೇರಿದ ಹಿಪಿಯಾಸನು ದುಡುಕಿ ನಡೆದಾಗ್ಯೂ ಸಾಂಕುಶವಾಗಿ ನಡೆಯದೆ, ದುರಾಗ್ರಹಪರವಶನಾಗಿ, ಅವನೊಡನೆ ಯುದ್ಧಮಾಡಿದ್ದು ಶುದ್ಧ ತಪ್ಪು ಎಂಬ ಭಾವನೆಯು ಟೆಲಿಮಾಕಸ್ಸನಿಗೆ ಉಂಟಾಯಿತು. ಇಷ್ಟರಲ್ಲಿಯೇ ಈ ಸಮಾಚಾರವು ನೆಸ್ಟರನಿಗೂ, ಫೈಲೋಕ್ಟೀಟಿಸ್ಸನಿಗೂ ತಿಳಿಯಿತು.

ಆಗ ಗ್ರೀಸ್ ದೇಶದ ಸೇನಾನಾಯಕರೆಲ್ಲಾ ಕೇವಲ ವಿಚಾರಪರರಾಗಿದ್ದರು. ಸೈನ್ಯಗಳು ಭಯಭ್ರಾಂತವಾಗಿದ್ದವು. ಮನೆಯ ಯಜಮಾನನು ಸತ್ತಾಗ ಮನೆಯಲ್ಲಿರತಕ್ಕವರ ಮನೋಭಾವಗಳು ಹೇಗಿರುವುದೋ ಹಾಗೆ ಮಿತ್ರಮಂಡಲಿಯವರ ಸ್ಥಿತಿಯು ಇದ್ದಿತು. ಹೀಗಿರುವಾಗ್ಯೆ ಸೈನ್ಯದಲ್ಲಿ ಗಲಭೆಯುಂಟಾಯಿತು. ಭಯಂಕರವಾದ ಶಬ್ದವು ಹುಟ್ಟಿತು. ರಥಗಳು ರಭಸವಾಗಿ ಬರುವುದಕ್ಕೆ ಉಪಕ್ರಮವಾಯಿತು. ಶಸ್ತ್ರಾಸ್ತ್ರಗಳ ಧ್ವನಿಯು ಉಂಟಾಯಿತು. ಕುದುರೆಗಳ ಹೇಷಾಕಾರವೂ, ಜನಗಳ ಕೂಗೂ ಹೆಚ್ಚಿದವು. ಕೊಲೆಗಳಿಗೆ ಉಪಕ್ರಮವಾಯಿತು. ಭಯಭ್ರಾಂತರಾಗಿ ಅನೇಕರು ಓಡುತ್ತಿದ್ದರು. ಅನೇಕರು ಘಾಯಗಳಿಂದ ಪೀಡಿತರಾಗಿ ಉತ್ಕ್ರಮಣಾವಸ್ಥೆಗೆ ಬಂದರು. ಧೂಳಿನಿಂದ ತುಂಬಿದ ಸುಂಟರ ಗಾಳಿಯು ಆಕಾಶವನ್ನು ಆವರಿಸಿತು. ಕೆಲವು ನಿಮಿಷಗಳೊಡನೆ ಈ ಧೂಳಿನ ಜತೆಗೆ ಮದ್ದಿನ ಹೊಗೆಯೂ ತುಂಬಿತು. ಉಸಿರು ಬಿಡುವುದು ಅಸಾಧ್ಯವಾಯಿತು. ಎಟ್ನಾ ಎಂಬ ಅಗ್ನಿಪರ್ವತದಿಂದ ಅಪ್ರತಿಹತವಾದ ಜ್ವಾಲೆಯು ಏಳುವಾಗ್ಯೆ ಸಮೀಪ ಪ್ರದೇಶಗಳೆಲ್ಲಾ ಹೇಗೆ ನಡಗುತ್ತವೋ ಹಾಗೆ ಸಕಲರೂ ಭಯಭ್ರಾಂತರಾದರು. ಪ್ರತಿಯೊಬ್ಬರೂ ನಡಗುತ್ತಿದ್ದರು. ಇದಕ್ಕೆ ಕಾರಣವನ್ನು ಪರಿಶೀಲಿಸುವುದಕ್ಕೂ ಅವಕಾಶವಿರಲಿಲ್ಲ. ಕ್ರಮೇಣ ಕಾರಣವು ಗೊತ್ತಾಯಿತು. ಅಡ್ರಾಸ್ಟಸ್ಸನು ಯಾರಿಗೂ ನಿರೀಕ್ಷಣೆಯಿಲ್ಲದಂತೆ ಮಿತ್ರಮಂಡಲಿಯವರ ಶಿಬಿರಕ್ಕೆ ಮುತ್ತಿಗೆಯನ್ನು ಹಾಕಿದನು. ಇವನು ಯುದ್ಧಕ್ಕೆ ಬರುವನೆಂದು ನಿರೀಕ್ಷಿಸಲ್ಪಟ್ಟಿರಲಿಲ್ಲ. ಸಮೀಪದಲ್ಲಿದ್ದ ಒಂದು ಪರ್ವತವನ್ನು ಸುತ್ತಿಕೊಂಡು ಬಂದು, ಗ್ರೀಸ್ ದೇಶೀಯ ಶಿಬಿರದ ಮೇಲೆ ಬಿದ್ದನು. ಈ ಪರ್ವ

ತದ ಘಾಟಿಗಳು ಗ್ರೀಸ್ ದೇಶೀಯರ ಸ್ವಾಧೀನದಲ್ಲಿದ್ದವು. ಆದಾಗ್ಯೂ ಈ ಘಾಟಿಗಳ ಮೂಲಕ ಶತ್ರು ಸೈನ್ಯವು ಬರುವುದೆಂಬ ನಿರೀಕ್ಷಣೆಯು ಇವರಿಗೆ ಇರಲಿಲ್ಲ. ಹೀಗೆ ಗ್ರೀಸ್ ಜನರು ಉದಾಸೀನರಾಗಿರುತ್ತಾರೆಂದು ಅಡ್ರಾಸ್ಟಸ್ಸನಿಗೆ ತಿಳಿಯಬಂದಿತು. ಇದೇ ಒಳ್ಳೆಯ ಸಮಯವೆಂದು ಗ್ರೀಸ್ ಜನರನ್ನು ಹತಮಾಡುವುದಕ್ಕೋಸ್ಕರ ಪ್ರಯತ್ನ ಮಾಡಿದರು. ಈ ಪ್ರಯತ್ನವು ಸಫಲವಾವಾಯಿತು. ನೆಸ್ಟರನೂ, ಫೈಲಾಕ್ಟೇಟಿಸ್ಸನೂ ಕೇವಲ ದೀರ್ಘದರ್ಶಿಗಳು. ಆದಾಗ್ಯೂ ಅಡ್ರಾಸ್ಟಸ್ಸನಿಂದ ವಿಪತ್ತು ಬರುವುದೆಂದು ಇವರಿಗೆ ತೋರಲಿಲ್ಲ. ಇದಲ್ಲದೆ ಮಿತ್ರಮಂಡಲಿಯವರೆಲ್ಲರೂ ಇವರ ಮಹಾನುಭಾವತೆಯನ್ನು ಕೊಂಡಾಡುತ್ತಿದ್ದರು. ಈ ಸ್ತುತಿಗಳಿಂದ ಪರವಶರಾಗಿ, ತಮಗೆ ಎದುರಿಲ್ಲವೆಂದು ತಿಳಿದುಕೊಂಡು, ಇವರು ವಿಶೇಷ ಉದಾಸೀನರಾಗಿದ್ದರು. ಅಡ್ರಾಸ್ಟಸ್ಸನು ಗ್ರೀಸ್ ಸೈನ್ಯಗಳನ್ನೆಲ್ಲಾ [illegible] ಮಾಡುತ್ತಿದ್ದ [illegible] ಇವರಿಗೆ ಜ್ಞಾನೋದಯವಾಯಿತು. ಮುಂದೆ ಮಾಡತಕ್ಕದ್ದೇನೆಂದು ಪರ್ಯಾಲೋಚಿಸುವುದಕ್ಕೆ ಉಪಕ್ರಮಿಸಿದರು. ಶಾಂತಚಿತ್ತರಾಗಿದ್ದಾಗ ಚನ್ನಾಗಿ ಪರ್ಯಾಲೋಚಿಸಿ, ಸಲಹೆಗಳನ್ನು ಕೊಡುವ ಶಕ್ತಿಯು ಇವರಿಗೆ ಇತ್ತು. ಅಡ್ರಾಸ್ಟಸ್ಸನು ಗ್ರೀಸ್ ಸೈನ್ಯಗಳನ್ನೆಲ್ಲಾ ಕೊಲ್ಲುತ್ತಾ, ಶಾಂತಿಗೆ ಅವಕಾಶವಿಲ್ಲದಂತೆ ಮಾಡುತ್ತಿದ್ದದ್ದರಿಂದ ಇವರಿಗೆ ಈ ವಿಪತ್ತನ್ನು ತಪ್ಪಿಸಿಕೊಳ್ಳುವ ಉಪಾಯವು ತೋರಲಿಲ್ಲ. ತಕ್ಷಣದಲ್ಲಿಯೇ ಒಂದು ಯುದ್ಧದ ಕೌನ್ಸಿಲ್ಲನ್ನು ಮಾಡಿದರು. ಅಡ್ರಾಸ್ಟಸ್ಸನು ಇಷ್ಟು ಧೈರ್ಯಮಾಡಿ, ಗ್ರೀಸ್ ಸೈನ್ಯದ ಮೇಲೆ ಬೀಳುವುದಕ್ಕೆ ಕಾರಣವೇನಿರಬಹುದೆಂದು ಪರ್ಯಾಲೋಚಿಸಿದರು. ಟೆಲಿಮಾಕಸ್ಸನಿಗೂ, ಫಾಲಂಥಸ್ಸನಿಗೂ ಆದ ಯುದ್ಧವೂ, ಗ್ರೀಸ್ ಸೈನ್ಯದಲ್ಲಿ ಯೋಧರಿಗೆ ಉಂಟಾಗಿರತಕ್ಕ ಪರಸ್ಪರ ವೈಮನಸ್ಯವೂ, ಇವರಲ್ಲಿ ಫೆಲಾಂಥಸ್ಸನೇ ಮೊದಲಾದವರೆಲ್ಲಾ ತನ್ನ ಕಡೆಗೆ ಸೇರದೆ ಇದ್ದಾಗ್ಯೂ, ತನಗೆ ಪ್ರತಿಕಕ್ಷಿಗಳಾಗುವುದಿಲ್ಲವೆಂಬ ಧೈರ್ಯವೂ ಅಡ್ರಾಸ್ಟಸ್ಸನ ಗೌರ ಕ್ಕೆ ಮುಖ್ಯ ಕಾರಣವೆಂದು ಗೋಚರವಾಯಿತು. ಗ್ರೀಸ್ ದೇಶದ ಶಿಬಿರಕ್ಕೆ ಅಡ್ರಾಸ್ಟಸ್ಸನ ಸೇನೆಯವರು ಬೆಂಕಿಯನ್ನು ಹಾಕಿದರು. ಜ್ವಾಲೆಯು ಆಕಾಶದವರೆಗೂ ಹರಡಿಕೊಂಡಿತು. ಗ್ರೀಸ್ ದೇಶದ ಯೋಧರು ಅನೇಕರು ಹತರಾದರು. ಫೆಲಾಂಥಸ್ಸನೂ, ಅವನ ಸೈನ್ಯದವರೂ ಗ್ರೀಸ್ ದೇಶದ ಸೈನ್ಯಗಳು ಹತವಾಗುತ್ತಿದ್ದಾಗ್ಯೂ ಮಿತ್ರಮಂಡಲಿಯು ಏನೂ ಸಹಾಯವನ್ನೂ ಮಾಡಲಿಲ್ಲ.

ಟೆಲಿಮಾಕಸ್ಸನ ಮೇಲಿನ ದ್ವೇಷದಿಂದ ಗ್ರೀಸ್ ದೇಶದ ಸೈನ್ಯಗಳು ನಾಶವಾಗುತ್ತಿದ್ದಾಗ್ಯೂ ನೋಡಿಕೊಂಡಿದ್ದನು. ಇವನ ಸಹೋದರನಾದ ಹಿಪಿಯಾಸನನು. ಅಡ್ರಾಸ್ಟಸ್ಸನು ಕೊಂದನು. ಇವನ ಬಳಿಯಲ್ಲಿಯೇ ಅವನು ಸತ್ತುಬಿದ್ದನ್ನು ಆಗಲೂ ಕೂಡ ಫೆಲಾಂಥಸ್ಸನು ಇತಿಕರ್ತವ್ಯತಾಮೂಢನಾಗಿ ದೇವರನ್ನು ಧ್ಯಾನ ಮಾಡುತ್ತಾ ನಿಂತನು. ಆಗ ಫೆಲಾಂಥಸ್ಸನಿಗೆ ಜ್ಞಾನೋದಯವಾಯಿತು. ಸ್ವವ್ಯೂಹದ ಕಲಹದಿಂದ ಇಷ್ಟು ಅನರ್ಥವಾಯಿತೆಂಬದಾಗಿಯೂ, ತನ್ನ ಸಹೋದರನೂ ಕೂಡ ಸತ್ತನೆಂಬದಾಗಿಯೂ, ಈ ಅನರ್ಥಗಳಿಗೆಲ್ಲಾ ತಾನೇ ಕಾರಣಭೂತನೆಂಬದಾಗಿಯೂ ಗೊತ್ತಾಯಿತು. ತಾನು ತಪ್ಪನ್ನು ಮಾಡಿ, ಆ ತಪ್ಪನ್ನು ಸಾಧಿಸುವುದಕ್ಕೋಸ್ಕರ ಟೆಲಿಮಾಕಸ್ಸನೊಡನೆ ಯುದ್ಧವನ್ನು ಮಾಡಿ, ಯುದ್ಧದಲ್ಲಿ ಪರಾಜಿತನಾಗಿ, ಮಿತ್ರಮಂಡಲಿಯವರಲ್ಲಿ ಐಕಮತ್ಯವಿಲ್ಲವೆಂದು ಪ್ರಕಾಶಪಡಿಸಿದ್ದರಿಂದ ಅಡ್ರಾಸ್ಟಸ್ಸನ ದೌರಾತ್ಮ್ಯಕ್ಕೆ ಕಾರಣವಾಯಿತೆಂಬದಾಗಿಯೂ, ಈಗ ಭೇದಭಾವಗಳನ್ನು ಬಿಟ್ಟು, ಟೆಲಿಮಾಕಸ್ಸನೊಡನೆ ಸೇರಿ, ಈ ದುರಾತ್ಮನನ್ನು ನಿಗ್ರಹಿಸಬೇಕೆಂಬದಾಗಿಯೂ ಇವನಿಗೆ ಮನೋಭಾವ ಉಂಟಾಯಿತು.

## ಹದಿನಾರನೆಯ ಅಧ್ಯಾಯ.

---

ಅಷ್ಟರಲ್ಲಿ ಫೆಲಾಂಥಸ್ಸನೊಡನೆ ಯುದ್ಧಮಾಡಿ, ಸ್ವವ್ಯೂಹದಲ್ಲಿ ಭೇದಭಾವಗಳನ್ನು ಹುಟ್ಟಿಸಿದ್ದಕ್ಕೋಸ್ಕರ ಏಕಾಂತವಾಗಿ ದುಃಖಿಸುತ್ತಿದ್ದ ಟೆಲಿಮಾಕಸ್ಸನಿಗೆ ಡಾನಿಯನ್ನರ ಪ್ರಭುವಾದ ಅಡ್ರಾಸ್ಟಸ್ಸನ ಅತ್ಯಾಚಾರಗಳು ಗೊತ್ತಾದವು. ತತ್ಕ್ಷಣದಲ್ಲಿಯೇ ಆಯುಧಪಾಣಿಯಾಗಿ ಪರಾಜಿತರಾಗಿ ಓಡುತ್ತಲಿರುವ ಗ್ರೀಸ್ ಯೋಧರಿಗೆ ಧೈರ್ಯವನ್ನು ಹೇಳುತ್ತಾ, ಅಡ್ರಾಸ್ಟಸ್ಸನು ಯಾವ ಭಾಗದಲ್ಲಿರುವನೋ ಅದನ್ನು ವಿಚಾರಿಸುತ್ತಾ, ಪ್ರಳಯಕಾಲದ ರುದ್ರನೋಪಾದಿಯಲ್ಲಿ ಎದುರಿಸಿದವರನ್ನೆಲ್ಲಾ ಸಂಹರಿಸುತ್ತಾ ನುಗ್ಗಿದರು. ಅಡ್ರಾಸ್ಟಸ್ಸನ ಕಡೆ ಅನೇಕ [illegible] ಯಮಭಟರಿಗೆ [illegible].

ಈ ವರ್ತಮಾನವನ್ನು ತಿಳಿದು ಟಿಲಿಮಾಕಸ್ಸನ ಸಹಾಯಕ್ಕೆ ಫಿಲಾಂಥಸ್ಸನೂ ಬಂದನು. ' ಟಿಲಿಮಾಕಸ್ಸನನ್ನು ನೋಡಿ, ನಮ್ಮಿಬ್ಬರ ಮನಸ್ತಾಪಗಳೂ ಈ ದುರಾತ್ಮನಾದ ಅಡ್ರಾಸ್ಟಸ್ಸನ ಅತ್ಯಾಚಾರಗಳಿಗೆ ಕಾರಣವಾಯಿತು. ನನ್ನ ಸಹೋದರನಾದ ಹಿಪಿಯಾಸನನ್ನು ಇವನು ಸಂಹರಿಸಿರುವನು. ನಿನ್ನ ಮೇಲೆ ಇದ್ದ ದ್ವೇಷವನ್ನು ಈಗ ನಾನು ಬಿಟ್ಟಿರುವೆನು. ಈ ದುರಾತ್ಮನನ್ನು ಸಂಹರಿಸುವ ವಿಷಯದಲ್ಲಿ ನಿನಗೆ ಸಹಾಯಭೂತನಾಗಿ ಬಂದಿರುವೆನು. ವಿವೇಕಹೀನನಾಗಿ ನಿನ್ನ ಜತೆಯಲ್ಲಿ ಯುದ್ಧವನ್ನು ಮಾಡಿದೆನು. ಆದಕ್ಕೆ ದೇವರು ನನಗೆ ಶಿಕ್ಷೆಯನ್ನು ಮಾಡಿದನು. ನನ್ನ ಪ್ರಾಣಕ್ಕೆ ಸಮಾನನಾದ ಸಹೋದರನು ಹತನಾದನು. ಇದಕ್ಕಿಂತ ಹೆಚ್ಚಾದ ಶಿಕ್ಷೆಯು ಬೇರೊಂದಿರುವಂತೆ ತೋರುವುದಿಲ್ಲ. ನೀನು ನನ್ನ ಅಪರಾಧವನ್ನು ಕ್ಷಮಿಸಿ, ಈ ದುರಾತ್ಮನನ್ನು ಸಂಹರಿಸುವುದರಲ್ಲಿ ನನಗೆ ಆಜ್ಞೆ ಮಾಡು. ಇವನನ್ನು ಯಮಪುರಿಗೆ ಕಳುಹಿಸುವೆನು ' ಎಂದು ಫಿಲಾಂಥಸ್ಸನು ಹೀಗೆ ಹೇಳಲು, ಟಿಲಿಮಾಕಸ್ಸನು ಈ ಅಡ್ರಾಸ್ಟಸ್ಸನ ದೌರಾತ್ಮ್ಯಕ್ಕೆ ತಾನೂ ಕೂಡ ಕಾರಣಭೂತನೆಂದು ತಿಳಿದುಕೊಂಡು, ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಫಿಲಾಂಥಸ್ಸನನ್ನು ಕೇಳಿಕೊಂಡನು.

ಆಗ ನೆಸ್ಟರೂ ಮತ್ತು ಫೈಲೋಕ್ಟೇಟಿಸ್ಸರೂ ಟಿಲಿಮಾಕಸ್ ಮತ್ತು ಫಿಲಾಂಥಸ್ರವರು ಯುದ್ಧಕ್ಕೆ ಅಭಿಮುಖವಾಗಿ ಬರುತ್ತಿರುವುದನ್ನು ಕೇಳಿ ಅವರ ಬಳಿಗೆ ಬಂದರು. ಅವರಿಬ್ಬರೂ ತಮಗೆ ಉಂಟಾಗಿದ್ದ ದ್ವೇಷವನ್ನು ಮರೆತು, ಪೂರ್ವಕ್ಕಿಂತಲೂ ಹೆಚ್ಚಾದ ಮೈತ್ರಿಯಿಂದ ಅಡ್ರಾಸ್ಟಸ್ಸನನ್ನು ನಿಗ್ರಹಿಸುವುದರಲ್ಲಿ ಉದ್ಯುಕ್ತರಾಗಿರುವುದನ್ನು ನೋಡಿ ತುಂಬಾ ಸಂತೋಷಪಟ್ಟರು. ಅಷ್ಟು ಹೊತ್ತಿಗೆ ಅನೇಕ ಗ್ರೀಸ್ ಜನಗಳು ಸತ್ತಿದ್ದರು. ಅನೇಕರು ಸಾಯುತ್ತಿದ್ದರು. ಜಯಲಕ್ಷ್ಮಿಯು ಅಡ್ರಾಸ್ಟಸ್ಸನ ಕಡೆ ಇರುವಂತೆ ತೋರಿತು. ಟಿಲಿಮಾಕಸ್ಸನು ಭಯಂಕರವಾದ ಸಿಂಹದಂತೆ ನುಗ್ಗುವುದನ್ನು ನೋಡಿ, ಅಡ್ರಾಸ್ಟಸ್ಸನೇ ಮೊದಲಾದವರಿಗೆ ಬಲವಾದ ಭಯವು ಉಂಟಾಯಿತು. ಈಶ್ವರನು ಭಯವನ್ನು ಹೇಗೆ ಹುಟ್ಟಿಸುವನೋ ಹಾಗೆ ಸಜ್ಜನರಿಗೆ ಭಯನಿವಾರಣೆಯನ್ನು ಮಾಡುವನು. ಅಧರ್ಮವನ್ನು ತಪ್ಪಿಸುವುದಕ್ಕೋಸ್ಕರ ಭಯವನ್ನುಂಟುಮಾಡುವನು. ಧರ್ಮಸಂಸ್ಥಾಪನೆಯಾದ ಕೂಡಲೆ ಭಯನಿವಾರಣೆ ಮಾಡುವನು. ಟಿಲಿಮಾಕಸ್,

ಫೆಲಾಂಥಸ್ ಇಬ್ಬರು ಸಜ್ಜನರು. ಅಲ್ಪ ವಿಷಯದಲ್ಲಿ ಇವರು ಜಗಳವನ್ನು ಆಡಿದರು. ಈ ಜಗಳಕ್ಕೆ ತಕ್ಕ ಶಿಕ್ಷೆಯು ಆಯಿತು. ಇವರಿಗೆ ಪಶ್ಚಾತ್ತಾಪ ಹುಟ್ಟಿತು. ಇಬ್ಬರೂ ಭೇದಭಾವಗಳನ್ನು ಬಿಟ್ಟು, ಪರಸ್ಪರ ಪ್ರೀತಿಯುಳ್ಳವರಾದರು, ಕೂಡಲೆ ಜಯಲಕ್ಷ್ಮೀ ಪ್ರಸನ್ನತೆಯು ಇವರಿಗೆ ಉಂಟಾಯಿತು. ಟೆಲಿಮಾಕಸ್ಸನು ಫೆಲಾಂಥಸ್ಸನೊಡನೆ ಸೇರಿ ಅಡ್ರಾಸ್ಟಸ್‌ನ ಬಳಿಗೆ ಹೋಗಲು, ಅವನಿಗೆ ಧೈರ್ಯವು ತಪ್ಪಿತು. ಆದಾಗ್ಯೂ ಅವನೂ, ಅವನ ಮಗನಾದ ಇಪಿಕ್ಲೀಸನೂ ಧೈರ್ಯದಿಂದ ಯುದ್ಧಮಾಡಿದರು. ಇವರ ಜತೆಗೆ ಫೈಲೋಕ್ಟೀಟೀಸನೂ, ನೆಸ್ಟರೂ ಸೇರಿದರು. ವೃದ್ಧರಾದಾಗ್ಯೂ ಇವರೂ ಯುವಕರಂತೆ ಯುದ್ಧಮಾಡಿದರು. ಎಲ್ಲರ ಯುದ್ಧವೂ ಒಂದು ವಿಧವಾಗಿತ್ತು. ಎಲ್ಲರಿಗೂ ಜಯಪರಾಜಯಗಳು ಒಂದಾಗುತ್ತಲೂ ಒಂದು ಬರುತ್ತಿದ್ದವು. ಟೆಲಿಮಾಕಸ್ಸನು ಪರಾಜಯದ ಸ್ವರೂಪವನ್ನೇ ಅರಿತವನಲ್ಲ. ಇವನನ್ನು ಸಂಹರಿಸುತ್ತೇವೆಂದು ಅನೇಕ ಯೋಧರು ಮುಂದಾಳುಗಳಾಗಿ ಬಂದರು. ಎಲ್ಲರೂ ನಿಮಿಷಾರ್ಧದಲ್ಲಿ ಹತರಾದರು. ಟೆಲಿಮಾಕಸ್ಸನು ಅಡ್ರಾಸ್ಟಸ್ಸನಿಗೆ ಅಭಿಮುಖನಾಗಿ ಹೊರಟನು. ಅಡ್ರಾಸ್ಟಸ್ಸನ ಮಗನಾದ ಇಪಿಕ್ಲೀಸನು ಟೆಲಿಮಾಕಸ್ಸನ ಪೌರುಷವನ್ನೂ, ಅವನ ಅಪ್ರತಿಹತವಾದ ಸಾಮರ್ಥ್ಯವನ್ನೂ ನೋಡಿ, ' ಇವನನ್ನು ಜಯಿಸುವುದಕ್ಕೆ ನನ್ನ ತಂದೆಯು ಸಮರ್ಥನಲ್ಲ, ತಂದೆಯು ಹತನಾದದ್ದನ್ನು ನೋಡಿ ವ್ಯಥೆಪಡುವುದಕ್ಕಿಂತ ಮೊದಲು ನನ್ನ ಪ್ರಾಣವನ್ನು ಒಪ್ಪಿಸುತ್ತೇನೆ ' ಎಂದು ಯುದ್ಧಕ್ಕೆ ನಿಂತನು. ಇಪಿಕ್ಲೀಸನು ಯುವಕನಾಗಿಯೂ, ಸುಂದರನಾಗಿಯೂ, ಮನೋಹರವಾದ ಆಕೃತಿವುಳ್ಳವನಾಗಿಯೂ ಇದ್ದನು. ಅಡ್ರಾಸ್ಟಸ್ಸನನ್ನು ನೋಡಿ, ಟೆಲಿಮಾಕಸ್ಸನು ಹೇಳಿದ್ದೇನೆಂದರೆ:—

" ನಾನು ನಿನ್ನೊಡನೆ ಯುದ್ಧ ಮಾಡುವುದಕ್ಕೆ ಬಂದಿರುವೆನು. ಈ ಹುಡುಗನನ್ನು ಏತಕ್ಕೆ ಬಲಿಯಾಗಿ ಕೊಡುತ್ತೀಯೆ? " ಎಂದು ಹೇಳಲು, ' ಇಪಿಕ್ಲೀಸನು ನಾನೇ ನನ್ನ ತಂದೆಯೆಂದು ತಿಳಿದುಕೊ. ನನ್ನನ್ನು ಜಯಿಸಿದರೆ ನೀನು ನನ್ನ ತಂದೆಯನ್ನು ಜಯಿಸಿದ ಹಾಗಾಯಿತು ' ಎಂದು ಹೇಳಿ ಮೇಲೆ ಬಿದ್ದನು. ಅಡ್ರಾಸ್ಟಸ್ಸನನ್ನು ಕೊಲ್ಲಬೇಕೆಂದು ಫೆಲಾಂಥಸ್ಸನು ಅವನೊಡನೆ ಯುದ್ಧಕ್ಕೆ ತೊಡಗಿದನು. ಇಪಿಕ್ಲೀಸನು ಅತ್ಯಂತ ಪರಾಕ್ರಮದಿಂದ ಟೆಲಿಮಾಕಸ್ಸನೊಡನೆ ಯುದ್ಧಮಾಡಿ, ಅಡ್ರಾಸ್ಟಸ್ಸನ ಮಗ್ಗುಲಲ್ಲಿ ಹತನಾಗಿ ಬಿದ್ದನು. ಅಡ್ರಾಸ್ಟಸ್ಸನಿಗೂ, ಫೆಲಾಂಥ

ಸ್ಸನಿಗೂ ಆಗ ಯುದ್ಧವಾಗುತ್ತಿತ್ತು. ಅಡ್ರಾಸ್‌ಟಸ್ಸನು ಫೆಲಾಂಥಸ್ಸನನ್ನು ಕೆಡವಿ ಸಂಹರಿಸುವುದಕ್ಕೆ ಪ್ರಯತ್ನ ಮಾಡಿದಾಗ, ಇಪಿಕ್ಲೀಸನು ಬಿದ್ದದ್ದನ್ನು ನೋಡಿ, ಅಡ್ರಾಸ್‌ಟಸ್ಸನು ಶೋಕಮೋಹಪರವಶನಾದನು. ಈ ಕಾಲಕ್ಕೆ ಸರಿಯಾಗಿ ಅಡ್ರಾಸ್‌ಟಸ್ಸನನ್ನು ಸಂಹರಿಸಬೇಕೆಂಪು ಫೆಲಾಂಥಸ್ಸನೂ ಮತ್ತು ಹಿಪಿಯಾಸನೂ ಅಡ್ರಾಸ್‌ಟಸ್ಸನ ಮೇಲೆ ಬಿದ್ದರು. ಅವನು ಪುತ್ರಶೋಕವನ್ನೂ ಕೂಡ ಮರೆತು, ವೀರಾವೇಶದಿಂದ ಯುದ್ಧಮಾಡಿ, ಫಲಾಂಥಸ್ಸನನ್ನೂ, ಹಿಪಿಯಾಸನನ್ನೂ ಹೊಡೆದು ಕೆಡವಿದನು. ಹಿಪಿಯಾಸನು ದೇಹವನ್ನು ಬಿಟ್ಟನು. ಫಲಾಂಥಸ್ಸನೊಡನೆ ಯುದ್ಧಮಾಡುವಾಗ ಟೆಲಿಮಾಕಸ್ಸನು ಫೆಲಾಂಥಸ್ಸನ ಸಹಾಯಕ್ಕೆ ಬಂದು, ಅಡ್ರಾಸ್‌ಟಸ್ಸನಿಗೆ ಬಲವಾದ ಏಟುಗಳನ್ನು ಹಾಕಿದನು. ಅವನು ಪರಾಜಯ ಭಯದಿಂದ ಅಲ್ಲಿಂದ ತಪ್ಪಿಸಿಕೊಂಡು ಬೇರೆ ಕಡೆಗೆ ಓಡಿಹೋದನು. ಅಷ್ಟರಲ್ಲಿಯೇ ಫೆಲಾಂಥಸ್ಸನನ್ನು ಬಿಟ್ಟು ತನ್ನ ಮಗನನ್ನು ಕೊಂದ ಟೆಲಿಮಾಕಸ್ಸನನ್ನು ಮೊದಲು ಸಂಹರಿಸಬೇಕೆಂದು ಉದ್ದೇಶಮಾಡಿ, ಅವನೊಡನೆ ಯುದ್ಧಕ್ಕೆ ಉಪಕ್ರಮಮಾಡಿದನು. ಈ ಮಧ್ಯೆ ಡಾನಿಯರ್ಸ್‌ರಿಗೂ, ಗ್ರೀಸ್‌ಜನಗಳಿಗೂ ಭಯಂಕರವಾದ ಯುದ್ಧವು ಆಯಿತು. ಉಭಯ ಪಕ್ಷದಲ್ಲಿಯೂ ವೀರಾವೇಶದಿಂದ ಯುದ್ಧವು ನಡೆಯುತ್ತಿತ್ತು. ಶಸ್ತ್ರಾಸ್ತ್ರಗಳಿಂದ ಯೋಧರು ತುಂಡುತುಂಡಾಗಿ ಬೀಳುತ್ತಿದ್ದರು. ಆಗ್ನೇಯಾಸ್ತ್ರಗಳ ಹಾವಳಿಯು ಬಹಳ ಬಲವಾಗಿತ್ತು. ಇವುಗಳನ್ನೆಲ್ಲಾ ನೋಡಿ, ಟೆಲಿಮಾಕಸ್ಸನ ಹೃದಯವು ತುಂಬಾ ಸಂತಪಿಸುತ್ತಿತ್ತು. ಈ ಅಡ್ರಾಸ್‌ಟಸ್ಸನ ದೌರಾತ್ಮ್ಯವೇ ಈ ಅನರ್ಥಗಳಿಗೆ ಮುಖ್ಯ ಕಾರಣನೆಂದು ಭಾವಿಸಿ, ಅವನನ್ನು ಸಂಹರಿಸುವ ಪ್ರಯತ್ನದಲ್ಲಿದ್ದನು. ಅಷ್ಟರಲ್ಲಿಯೇ ಒಂದು ಅಭೂತಪೂರ್ವವಾದ ಮಳೆಯು ಉಪಕ್ರಮವಾಯಿತು. ಸಿಡಿಲುಗಳು ಬೀಳುವುದಕ್ಕೆ ಉಪಕ್ರಮವಾದವು. ಕತ್ತಲೆಯು ಕವಿತುಕೊಂಡಿತು ಇವರು ಶತ್ರುಗಳು, ಇವರು ಮಿತ್ರರು ಎಂದು ತಿಳಿದುಕೊಳ್ಳುವುದು ಅಸಾಧ್ಯವಾಯಿತು ಪ್ರಳಯ ಕಾಲದ ಗಾಳಿಯಂತೆ ಮಳೆ, ಗಾಳಿ, ಸಿಡಿಲಿನೊಡನೆ ಬೀಳುವ ಮಳೆಯು ಪ್ರಾರಂಭವಾಯಿತು ಟೆಲಿಮಾಕಸ್ಸನೊಡನೆ ಯುದ್ಧಮಾಡಿದರೆ ತನಗೆ ಜಯವಾಗುವುದಿಲ್ಲವೆಂದು ಅಡ್ರಾಸ್‌ಟಸ್ಸನು ತಿಳಿದುಕೊಂಡನು. ಈ ಮಳೆ, ಗಾಳಿ ಮೊದಲಾದವುಗಳು ಬಂದದ್ದು ತನಗೆ ದೇವರ ಸಹಾಯವೆಂದು ತಿಳಿದುಕೊಂಡು, ತನ್ನ ಸೈನ್ಯವನ್ನು ಹೊರಡಿಸಿಕೊಂಡು ಗುಡಿಹೋದನು ಟೆಲಿಮಾಕಸ್ಸನು ಫೆಲಾಂಥಸ್, ನೆಸ್ಟರ್, ಫೈಲೋಕ್ಟೇಟೀಸ್

ಮೊದಲಾದವರೊಡನೆ ಯುದ್ಧರಂಗದಲ್ಲಿ ಉತ್ಕ್ರಮಣಾವಸ್ಥೆಯಲ್ಲಿದ್ದ ಮಿತ್ರರನ್ನೂ, ಶತ್ರುಗಳನ್ನೂ ಆಸ್ಪತ್ರೆಗಳಿಗೆ ಸೇರಿಸಿ, ಔಷಧಪಥ್ಯಗಳನ್ನು ಮಾಡಿಸುವುದಕ್ಕೆ ಉಪಕ್ರಮ ಮಾಡಿದನು. ದೇಹವನ್ನು ಬಿಟ್ಟವರಿಗೆಲ್ಲಾ ಉತ್ತರಕ್ರಿಯೆಗಳಿಂದ ಸಮಸ್ಕರ ಮಾಡಿಸಿದನು. ಯುದ್ಧದಲ್ಲಿ ಮಡಿದವರನ್ನು ನೋಡಿ ತುಂಬಾ ಸಂತಪ್ತ ಹೃದಯನಾಗಿ, ಜಿಲಿಮಾಕಸ್ಸನು ಹೇಳಿದ್ದೇನೆಂದರೆ:—

"ಯುದ್ಧದ ಕಷ್ಟಗಳು ಅನಿರ್ವಚನೀಯವಾದವುಗಳು. ಯುದ್ಧದಲ್ಲಿ ಶಸ್ತ್ರಾಸ್ತ್ರಗಳ ಪೆಟ್ಟನ್ನು ತಿಂದು, ತುಂಡುತುಂಡಾಗಿ ಗುರುತು ಹಿಡಿಯುವುದಕ್ಕೂ ಅಸಾಧ್ಯವಾಗುವಂತೆ ಸತ್ತೂ, ಸಾಯುತ್ತಲೂ ಬಿದ್ದಿರತಕ್ಕ ದೇಹಗಳನ್ನು ನೋಡಿದರೆ, ಇದನ್ನು ನೋಡುವುದಕ್ಕಿಂತಲೂ ಸಾಯುವುದು ಮೇಲೆಂದು ತೋರುವುದು. ಒಬ್ಬರನ್ನು ಒಬ್ಬರು ಕೊಲ್ಲುವುದಕ್ಕೆ ಏರ್ಪಾಡು ಮಾಡುವ ಪ್ರಭುಗಳ ಮನೋಭಾವವನ್ನೂ, ಅಧಿಕಾರಿಗಳ ಮನೋಭಾವವನ್ನೂ ನೋಡಿದರೆ, ಅವರು ಕೋಪತಾಪಗಳಿಗೆ ಹೇಗೆ ಅಧೀನರಾಗಿ, ಈ ದುಷ್ಕೃತ್ಯಗಳನ್ನು ಮಾಡುವರೋ ಅದು ಗೊತ್ತಾಗುವುದು. ಭೂತದಯೆಯು ಅವರಲ್ಲಿ ಹೇಗೆ ಲೇಶವೂ ಇರುವುದಿಲ್ಲವೋ ಅದೂ ಗೊತ್ತಾಗುವುದು. ಮನುಷ್ಯನ ಆಯುಸ್ಸು ಮಿತವಾದದ್ದು. ಅಮಿತವಾದ ಆಯುಸ್ಸನ್ನೂ ಕೂಡ ಪಾಪಕರ್ಮಗಳಿಗೆ ವಿನಿಯೋಗಿಸುವರು. ಹುಟ್ಟಿದವರಿಗೆ ಮರಣವು ಸಿದ್ಧವಾಗಿರುವುದು. ಸದರಿ ಮರಣವು ಯಾವಾಗ ಬರಬೇಕೋ ಅದಕ್ಕಿಂತ ಮುಂಚೆ ಬರುವಂತೆ ಜನಗಳು ಮಾಡಿಕೊಳ್ಳುವರು. ಜೀವಿಗಳಿಗೆ ಅನೇಕ ಕಷ್ಟಗಳು ಬರುವುವು. ಆ ಕಷ್ಟಗಳು ಇನ್ನೂ ಹೆಚ್ಚಿಕೊಳ್ಳುವಂತೆ ಮಾಡುವರು. ನಾವೆಲ್ಲರೂ ಜಗದೀಶ್ವರನ ಮಕ್ಕಳಾದ್ದರಿಂದ ಸಹೋದರರಾಗಿರುತ್ತೇವೆ. ಆದಾಗ್ಯೂ ದಾಯಾದಿಗಳಂತೆ ಒಬ್ಬರನ್ನು ಒಬ್ಬರು ಮೂಲೋತ್ಪಾಟನವನ್ನು ಮಾಡುವ ಪ್ರಯತ್ನವನ್ನು ಮಾಡುತ್ತೇವೆ. ನಮಗಿಂತಲೂ ಕಾಡುಮೃಗಗಳು ಉತ್ತಮ. ಸಿಂಹವು ಬೇರೆ ಸಿಂಹಗಳನ್ನು ಸಂಹರಿಸಬೇಕೆಂದು ಪ್ರಯತ್ನ ಮಾಡುವುದಿಲ್ಲ. ಹುಲಿಯು ಇತರ ಹುಲಿಗಳ ಮೇಲೆ ಯುದ್ಧಮಾಡುವುದಿಲ್ಲ. ಇವುಗಳು ತಮ್ಮ ಕ್ರೌರ್ಯವನ್ನು ಇತರ ಜಾತಿ ಮೃಗಗಳ ಮೇಲೆ ತೋರಿಸುವುವು. ಮನುಷ್ಯನಿಗೆ ತಿರ್ಯಗ್ಜಂತುಗಳಿಗಿರುವುದಕ್ಕಿಂತ ಹೆಚ್ಚಾದ ಬುದ್ಧಿಯೂ, ವಿವೇಕವೂ ಇರುವುವು. ಸಾರಾಚಾರ ವಿಚಾರ ಜ್ಞಾನವು ಮನುಷ್ಯನಿಗೆ ಇರುವುದು. ಆದಾಗ್ಯೂ ಅನೇಕ ಜನರು ಕಾಡುಮೃಗಗಳಿಗಿಂತಲೂ ಹೆಚ್ಚಾದ ಕ್ರೌರ್ಯದಿಂದಲೂ, ಪರ

ಸ್ಪರ ದ್ವೇಷದಿಂದಲೂ ನಡೆದುಕೊಳ್ಳುತ್ತಾರೆ. ಪ್ರಪಂಚದಲ್ಲಿ ಬೇಕಾದ ಹಾಗೆ ಜಮೀನಿರುವುದು. ಎಷ್ಟು ಜನಗಳು ವ್ಯವಸಾಯ ಮಾಡುವುದಕ್ಕೆ ಸಿದ್ಧರಾದರೂ ಅವರು ಸಾಗುವಳಿ ಮಾಡುವಷ್ಟು ಜಮೀನು ಸಿಕ್ಕುವುದು. ಕಾಡುಗಳನ್ನೂ ಕೂಡ ಸಾಗುವಳಿಗೆ ಅನುಕೂಲವಾದ ಜಮೀನು ಮಾಡಬಹುದು. ಮರಳು ಕಾಡನ್ನು ಅನೇಕ ವಿಧವಾದ ಕೈಗಾರಿಕೆಗಳಿಗೆ ಉಪಯೋಗವಾಗುವಂತೆ ಮಾಡಬಹುದು ಜಲದ ಸಹಾಯದಿಂದ ವಿದ್ಯುಚ್ಛಕ್ತಿಯನ್ನೂ, ಸ್ಟೀಮನ್ನೂ ಮಾಡಿ, ಕೋಟ್ಯಂತರ ಜನಗಳು ಮಾಡುವ ಕೆಲಸವನ್ನು ಅವುಗಳ ಕೈಲಿ ಮಾಡಿಸಬಹುದು. ಅನೇಕ ವಿಧವಾದ ಕೈಗಾರಿಕೆಗಳನ್ನು ಅವುಗಳಿಂದ ಮಾಡಿಸಬಹುದು. ಭೂಮಿಯಲ್ಲಿ ನಾನಾವಿಧವಾದ ಲೋಹಗಳೂ, ವಜ್ರವೇ ಮೊದಲಾದ ನವರತ್ನಗಳೂ ಸಿಕ್ಕುತ್ತವೆ ಅವುಗಳನ್ನು ರೂಢಿಸಿ, ದೇಶದ ಸಂಪತ್ತನ್ನು ಹೆಚ್ಚಿಸಬಹುದು. ಸಮುದ್ರದಲ್ಲಿ ಅನೇಕ ವಿಧವಾದ ಭೋಗ್ಯವಸ್ತುಗಳು ಸಿಕ್ಕುತ್ತವೆ. ಅವುಗಳನ್ನು ರೂಢಿಸಬಹುದು. ಸಮುದ್ರದ ನೀರಿಗೆ ಕಟ್ಟೆ ಹಾಕಿ, ಜಲಪತನಗಳಿಂದ ಅನೇಕ ಕೋಟಿ ಜನಗಳು ಮಾಡುವ ಕೆಲಸವನ್ನು ಮಾಡಿಸಬಹುದು. ಹಾಲೆಂಡ್ ತೀರದಲ್ಲಿ 14 ಸಾವಿರ ಮಿಲ್ಲುಗಳು ಕೆಲಸ ಮಾಡುತ್ತವೆ. ಸಮುದ್ರ ತೀರದಲ್ಲಿರತಕ್ಕ ಜನಗಳಿಂದ ಜಲಶಕ್ತಿಯಿಂದಲೂ, ಸ್ಟೀಮ್‌ಶಕ್ತಿಯಿಂದಲೂ, ವಿದ್ಯುಚ್ಛಕ್ತಿ ಶಕ್ತಿಯಿಂದಲೂ ಆಗಬಹುದಾದ ಕೆಲಸಗಳನ್ನು ಮಾಡಿಸಿದರೆ, ಸಕಲರೂ ಅಷ್ಟೈಶ್ವರ್ಯರಾಗಿರಬಹುದು. ಹೀಗಿದ್ದಾಗ್ಯೂ ಜನಗಳು ಸಂಕುಚಿತಬುದ್ಧಿಯುಳ್ಳವರಾಗಿರುತ್ತಾರೆ. ಎಲ್ಲರಿಗೂ ಉಪಕಾರ ಮಾಡಿ, ತಾವೂ ಬದುಕಬೇಕೆಂಬ ಜನಗಳೇ ಅಪೂರ್ವ. ಇತರರು ನಾಶವಾಗಿ, ತಾವು ಬದುಕಬೇಕೆಂದು ಪ್ರಯತ್ನ ಮಾಡುತ್ತಾರೆ. ಅಧರ್ಮವನ್ನು ಬಯಿಸತಕ್ಕವರಿಗೆ ಅವರ ಮನೋವಾಕ್ಕಾಯಗಳಿಗೆ ಅನುಸಾರವಾಗಿ ಉಪಕಾರವನ್ನೂ, ಅಪಕಾರವನ್ನೂ ಮಾಡತಕ್ಕ ಯಮಧರ್ಮರಾಯನು ಇವರ ನಡೆನುಡಿಗಳನ್ನು ನೋಡಿ ನಗುತ್ತಲಿರುವನು. ಯುದ್ಧಕ್ಕೆ ಕಾರಣವನ್ನು ಪರಿಶೀಲಿಸಿದರೆ, ಸರಿಯಾದ ಕಾರಣವಿರುವುದೇ ಅಪೂರ್ವ. ಪ್ರಾಯಕವಾಗಿ ಕೋಪತಾಪಗಳು ಕಾರಣವಾಗಿರುವುದುಂಟು ಅನೇಕರಿಗೆ ತಾವೇ ಸರ್ವೋತ್ತಮರೆಂಬ ಭಾವನೆಯು ಇರುತ್ತದೆ. ಪರಿವಾರ ದೇವತೆಗಳು ಈ ಭಾವನೆಯನ್ನು ಹೆಚ್ಚಿಸುವರು. ತಮ್ಮ ತಪ್ಪುಗಳು ತಪ್ಪಲ್ಲವೆಂದು ತಿಳಿದುಕೊಳ್ಳುವರು. ಪ್ರತಿಕಕ್ಷಿಗಳ ತಪ್ಪುಗಳು ದೊಡ್ಡ ತಪ್ಪುಗಳೆಂಬದಾಗಿಯೂ, ಅವರು ಪರಮ ದ್ರೋಹಿ

ಗಳಿಂಬಡಾಗಿಯೂ ತಿಳಿದುಕೊಳ್ಳುವರು. ಸೌಹಾರ್ದದಿಂದಲೂ, ಪರಸ್ಪರ ಪ್ರೀತಿಯಿಂದಲೂ ಕಕ್ಷಿಪ್ರತಿಕಕ್ಷಿಗಳು ಸಾಕ್ಷಾತ್ತಾಗಿ ಕಲೆತು ಮಾತನಾಡುವುದಿಲ್ಲ. ಮಧ್ಯಸ್ಥಗಾರರು ಚಿಕ್ಕ ತಪ್ಪುಗಳನ್ನು ದೊಡ್ಡದಾಗಿ ಮಾಡಿ, ಪರಸ್ಪರ ದ್ವೇಷವನ್ನು ಹೆಚ್ಚಿಸಿ, ಇಬ್ಬರ ಜಗಳ ತಮಗೆ ಲಾಭವಾಗುವಂತೆ ಮಾಡಿಕೊಳ್ಳುವರು. ಬಂಧುಮಿತ್ರರನ್ನೂ ಕೂಡ ಅಗಲಿಸುವರು. ಅವರು ಪರಸ್ಪರ ದ್ವೇಷದಿಂದ ನಡೆಯುವಂತೆ ಮಾಡುವರು. ಯುದ್ಧಕ್ಕೂ, ಕ್ಷಾಮಕ್ಕೂ, ದ್ವೇಷಕ್ಕೂ ಅನೇಕರು ಬಲಿಯಾಗುವಂತೆ ಮಾಡುವರು. ಇವರ ಕೋಪತಾಪಗಳಿಗೆ ನಿರಪರಾಧಿಗಳಾದ ಕೋಟ್ಯಂತರ ಜನರು ಬಲಿಯಾಗುವರು. ಜನಗಳು ದುರ್ವಿಷಯಗಳಲ್ಲಿ ಬಿಳದೆ ಅರಿಷಡ್ವರ್ಗಗಳಿಗೆ ಅಧೀನರಾಗದೆ, ಕೋಪಬಂದಾಗ 10 ನಿಮಿಷಗಳಾದರೂ ಶಾಂತಿಯಿಂದ ಇದ್ದರೆ ಎಷ್ಟೋ ಯುದ್ಧಗಳು ತಪ್ಪುವುವು. ಎಷ್ಟೋ ಅನರ್ಥಗಳು ತಪ್ಪುವುವು ಶತ್ರುತ್ವದಿಂದ ಒಬ್ಬರನ್ನೊಬ್ಬರು ಮೂಲೋತ್ಪಾಟನ ಮಾಡಬೇಬೇಕೆಂದು ಪ್ರವರ್ತಿಸತಕ್ಕವರು ಮಿತ್ರತ್ವದಿಂದ ಒಬ್ಬರನ್ನೊಬ್ಬರು ಉದ್ಧರಿಸುವುದಕ್ಕೆ ಅವಕಾಶವಾಗುವುದು. ಪ್ರಭುಗಳೂ ಮತ್ತು ಅವರ ಮಂತ್ರಿಗಳೂ ತಮ್ಮ ಮನೋವಾಕ್ಕರ್ಮಗಳ ಫಲವನ್ನು ಪರ್ಯಾಲೋಚಿಸಿ ಕೆಲಸ ಮಾಡುತ್ತಾ ಬಂದರೆ, ಅನೇಕ ಭಯಂಕರವಾದ ಯುದ್ಧಗಳಿಗೆ ಎಂದಿಗೂ ಅವಕಾಶ ಬರುವುದಿಲ್ಲ. ಅಸಹನೆಯೂ, ಕೋಪತಾಪಗಳೂ, ದುರಾಶೆ, ಸಕಲರೂ ಸುಖವಾಗಿರಲಿ, ನಾನೂ ಅವರ ಸೇವೆಯಿಂದ ಸುಖವಾಗಿರುತ್ತೇನೆ ಎಂಬ ಭಾವನೆಯನ್ನು ಸಂಪಾದಿಸಿಕೊಳ್ಳದೆ ಇರುವುದು ಇವೇ ಈ ಯುದ್ಧವೇ ಮೊದಲಾದ ಅನರ್ಥಗಳಿಗೆ ಮುಖ್ಯ ಕಾರಣಗಳು ಎಂದು ಕೋಪತಾಪಗಳಿಗೆ ಅಧೀನರಾದವರ ದೌರಾತ್ಮ್ಯದಿಂದ ಉಂಟಾದ ಯುದ್ಧದಲ್ಲಿ ನೊಂದವರಿಗೆ ಚಿಕಿತ್ಸೆಗಳನ್ನು ಮಾಡುತ್ತಾ, ಗಂಜಿ, ನೀರು ಮೊದಲಾದವುಗಳನ್ನು ಕೊಡುವುದಕ್ಕೆ ಸರಿಯಾದ ಏರ್ಪಾಡನ್ನು ಮಾಡಿ, ವಿಶ್ರಮಿಸಿಕೊಳ್ಳುವುದಕ್ಕೋಸ್ಕರ ತನ್ನ ಡೇರೆಯೊಳಕ್ಕೆ ಹೋದನು.

ಕ್ರೀಟ್ ಡೇಶದ ಇಬ್ಬರು ದೊಡ್ಡಮನುಷ್ಯರು ತನ್ನ ಡೇರೆಯಲ್ಲಿದ್ದರು. ಇವರಿಬ್ಬರೂ ವೃದ್ಧರಾಗಿದ್ದರು. ಇವರಲ್ಲಿ ಒಬ್ಬನ ಹೆಸರು ಟ್ರಾಮೆಟೊಫೈಲಸ್ ಎಂಬುವುದು. ಇನ್ನೊಬ್ಬನ ಹೆಸರು ನಾಸೋಫ್ಯೂಗಸ್ ಎಂಬುವುದು. ಟ್ರಾಮೆಟೊಫೈಲಸ್ಸನು ಟ್ರಾಯ್ ಯುದ್ಧದಲ್ಲಿ ಚಿಕಿತ್ಸಕನಾಗಿದ್ದನು. ಘಾಯಗಳನ್ನು ವಾಸಿಮಾಡುವುದರಲ್ಲಿ ನಿಪುಣನಾದ ಇಸ್ಕ್ಯುಲೇಪಿಯಸ್ಸನ ಮಕ್ಕಳಲ್ಲಿ ವ್ಯಾಸಂಗ

ಮಾಡಿ ವೈದ್ಯಶಾಸ್ತ್ರವನ್ನು ತಿಳಿದುಕೊಂಡಿದ್ದನು. ಬಹಳ ಬಲವಾದ ಘಾಯಗಳಿಗೂ ಇವನು ಒಂದು ವಿಧವಾದ ಮುಲಾಮನ್ನು ಹಾಕುತ್ತಿದ್ದನು. ಬಹು ಶೀಘ್ರದಲ್ಲಿಯೇ ಅದರಿಂದ ಘಾಯವಾಸಿಯಾಗುತ್ತಿತ್ತು. ಇಸ್ಕುಲೇಪಿಯಸ್ಸನ ಗ್ರಂಥಗಳನ್ನು ಪರಿಶೀಲಿಸಿ, ಅವನು ಮಾಡುತ್ತಿದ್ದ ಸಕಲ ಚಿಕಿತ್ಸೆಗಳನ್ನೂ ನಾಸೋಫ್ರ್ಯಾಗಸ್ಸನು ಮಾಡುತ್ತಿದ್ದನು. ಇವರಿಬ್ಬರೂ ವಾಸಿಮಾಡದೆ ಇದ್ದ ರೋಗಗಳೇ ಇರಲಿಲ್ಲ. ರೋಗಿಯ ಬಳಿಗೆ ಹೋದ ಕೂಡಲೆ, ಕಣ್ಣನ್ನೂ, ದೇಹದ ಚರ್ಮವನ್ನೂ, ಶಾಖವನ್ನೂ, ಉಸಿರುಬಿಡುವುದನ್ನೂ, ಚಲನಮುಲಗಳ ಸ್ಥಿತಿಯನ್ನೂ ಪರಿಶೀಲಿಸಿ, ಈ ರೋಗಕ್ಕೆ ಇದೇ ಕಾರಣವೆಂದು ಗೊತ್ತುಮಾಡಿ, ರೋಗವನ್ನು ಸಿಮಿಷಾರ್ಧದಲ್ಲಿ ನಿಗ್ರಹಿಸುವ ಔಷಧಪ್ರಯೋಗಗಳನ್ನು ಇವರು ಮಾಡುತ್ತಿದ್ದರು ಸಕಲ ರೋಗಗಳಿಗೂ ಜನಗಳು ಮಾಡತಕ್ಕ ಪಾಪಕರ್ಮಗಳೇ ಮುಖ್ಯಕಾರಣವೆಂದು ಇವರು ಹೇಳುತ್ತಿದ್ದರು. ಮನೋವಾಕ್ಕರ್ಮಗಳಲ್ಲಿ ಮಾಡಲ್ಪಟ್ಟ ಪಾಪಗಳು ವ್ಯಾಧಿರೂಪವಾಗಿ ಪೀಡಿಸುವುವು. ಶಾರೀರಕ ಪಾಪಗಳೂ, ಮಾನಸಿಕ ಪಾಪಗಳೂ ಇವೆರಡೂ ಆಯುರಾರೋಗ್ಯ ಐಶ್ವರ್ಯ ಹಾನಿಗೆ ಮುಖ್ಯಕಾರಣಗಳು. ಆಹಾರ ವಿಹಾರಗಳಲ್ಲಿ ಕ್ಲುಪ್ತರಾಗಿರಬೇಕು. ಪರರಿಗೆ ಅಪಕಾರ ಮಾಡುವುದರಲ್ಲಿ ಪರಾಙ್ಮುಖರಾಗಿರಬೇಕು. ಸಾಧ್ಯವಾದರೆ ಉಪಕಾರವನ್ನು ಮಾಡಬಹುದು. ಅಪಕಾರವನ್ನು ಸ್ವಪ್ನದಲ್ಲಿಯೂ ಎಣಿಸಬಾರದು. ಎಲ್ಲಾ ಆಹಾರವಿಹಾರಗಳಲ್ಲಿಯೂ ಮಿತಿಯನ್ನು ಮೀರಬಾರದು. ‘ಅತಿ ಸರ್ವತ್ರ ವರ್ಜಯೇತ್’’ ಎಂಬ ವಿಧಿಗನುಸಾರವಾಗಿ ನಡೆಯಬೇಕು. ವಿಷಯಸುಖಗಳಲ್ಲಿ ಮಿತಿಮೀರಿ ನಡೆಯತಕ್ಕವರಿಗೆ ರಾಜಯಕ್ಷ್ಮವೇ ಮೊದಲಾದ ಅನೇಕ ರೋಗಗಳು ಬರುವುವು. ಸಕಾಲದಲ್ಲಿ ಸರಿಯಾದ ಚಿಕಿತ್ಸೆ ಮಾಡತಕ್ಕವರು ಸಿಕ್ಕದಿದ್ದರೆ ಅವುಗಳು ನರಕಕ್ಕೆ ಮಾರ್ಗದರ್ಶನ ಮಾಡುವುವು. ಆಹಾರವಿಹಾರಗಳಲ್ಲಿ ಮಿತಿಯಿಂದ ಮನಸ್ಸಿಗೂ, ದೇಹಕ್ಕೂ ಶಾಂತಿಯನ್ನುಂಟುಮಾಡಿಕೊಂಡು, ಧರ್ಮಮಾರ್ಗೈಕಪರಾಯಣರಾಗಿ ಯಾರು ಇರುವರೋ ಅವರಿಗೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳಾದ ಈತಿಬಾಧೆಗಳಾವುವೂ ಬರುವುದಿಲ್ಲ. ಅವರಿಗೆ ಅವರ ಧರ್ಮವೇ ಸಿದ್ಧೌಷಧಗಳಾಗಿರುವುವು. ಈ ಧರ್ಮದಿಂದಲೇ ಈ ಲೋಕದಲ್ಲಿ ಆಯುರಾರೋಗ್ಯೈಶ್ವರ್ಯಗಳೂ [illegible]ವಾದ ಮೋಕ್ಷವನ್ನು ಹೊಂದುವರು. ಈ ವಿಷಯಗಳನ್ನೆಲ್ಲಾ ಟ್ರಾಮೆಟೋಸ್ಟಿಲಸ್ ಮತ್ತು ನಾಸೋಫ್ರ್ಯಾಗಸ್ಸರೂ ಪರಿಪೂರ್ಣವಾಗಿ ತಿಳಿದುಕೊಂಡಿದ್ದರು. ಅವರನ್ನು

ನೋಡಿದ ಕೂಡಲೆ ಜಿಲಿಮಾಕಸ್ಸನಿಗೆ ಪರಮಾನಂದವಾಯಿತು. ಕರ್ತವ್ಯತಾಜ್ಞಾನವು ಉಂಟಾಯಿತು. ಅವರು ಯುದ್ಧದಲ್ಲಿ ಏಟುತಿಂದು, ಇನ್ನೂ ನರಳುತ್ತಿದ್ದ ಯೋಧರ ಬಳಿಗೆ ಕರೆದುಕೊಂಡು ಹೋದನು. ಆಹಾರ, ವಿಶ್ರಾಂತಿ ಮೊದಲಾದವುಗಳಿಗೂ ಮನಸ್ಸನ್ನು ಕೊಡದೆ, ಈ ವೈದ್ಯವಿದ್ಯಾವಿಶಾರದರ ಚಿಕಿತ್ಸೆಯು ಎಲ್ಲರಿಗೂ ದೊರೆಯುವಂತೆ ಮಾಡಿದನು. ತಾನೂ, ತನ್ನ ಪರಿವಾರ ದೇವತೆಗಳೂ ಇವರಿಗೆ ಬೇಕಾದ ನಾರುಬೇರುಗಳೇ ಮೊದಲಾದ ಔಷಧಗಳನ್ನು ಸರಬರಾಜು ಮಾಡುತ್ತಾ ನಿಂತರು. ಎಲ್ಲರಿಗೂ ಚಿಕಿತ್ಸೆಯನ್ನು ಮಾಡಿದ ಮೇಲೆ ಹಸಿವು ಮತ್ತು ದಾಹದ ಮೇಲೆ ಮನಸ್ಸು ಓಡಿತು. ತಮ್ಮ ಡೇರೆಗಳಿಗೆ ಹೋಗಿ, ಭೋಜನಾದಿಗಳನ್ನು ತೀರಿಸಿಕೊಂಡು, ಪುನಃ ಯುದ್ಧದಲ್ಲಿ ನೊಂದ ಜನಗಳ ಯೋಗಕ್ಷೇಮದಲ್ಲಿ ನಿರತರಾದರು. ಚಕ್ರವರ್ತಿಗಳಿಗೂ ಕೂಡ ದುರ್ಲಭವಾದ ಔಷಧಪಥ್ಯಗಳೂ, ಉಪಚಾರಗಳೂ ಈ ಯೋಧರಿಗೆ ಲಭ್ಯವಾದವು. ಅಂಗವಿಹೀನರಾಗಿ, ತಾಪತ್ರಯಪಡುತ್ತಿದ್ದವರಿಗೆ ನೋವು ನಿಂತಿತು. ಆಹಾರವು ರುಚಿಸಿತು. ನಿದ್ರೆಯಲ್ಲಿಯೂ, ವಿಶ್ರಾಂತಿಯಲ್ಲಿಯೂ ಆಸಕ್ತಿಯು ಹುಟ್ಟಿತು. ಪ್ರಜ್ಞೆಯು ಬಂದಿತು. ಈ ಮೂರು ಜನ ಮಹಾನುಭಾವರು ತಮ್ಮ ಕ್ಷೇಮಾರ್ಥವಾಗಿ ಮಾಡುತ್ತಿದ್ದ ಮೆಹನತ್ತನ್ನು ನೋಡಿ, ಇವರು ಮನುಷ್ಯರೇ! ಅಥವಾ ನಮ್ಮ ಭಾಗ್ಯಪರಿಪಾಕದಿಂದ ನಮ್ಮ ಸೇವೆಗೆ ಜಗದೀಶ್ವರನಿಂದ ಕಳುಹಿಸಲ್ಪಟ್ಟ ದೇವದೂತರೇ ಎಂದು ಪ್ರತಿ ಒಬ್ಬರೂ ಆಶ್ಚರ್ಯಪಡುತ್ತಿದ್ದರು. ರಾತ್ರಿ ವೇಳೆಯಲ್ಲಿ ಜಿಲಿಮಾಕಸ್ಸನು ಈ ಶಿಬಿರದಲ್ಲಿ ಗಸ್ತನ್ನು ತಿರುಗುತ್ತಿದ್ದನು. ಸತ್ತಿದ್ದವರ ಶವಗಳಿಗೆಲ್ಲಾ ಮಂತ್ರಾಗ್ನಿಯ ಮೂಲಕ ದಹನಕರ್ಮಗಳು ಮಾಡಲ್ಪಟ್ಟವು. ಶಿಬಿರವೆಲ್ಲಾ ನಿರ್ನಾಮವಾಗಿತ್ತು. ಆಗಾಗ್ಯೆ ನಿದ್ರೆಯ ಬಾಧೆಯು ಬರುತ್ತಿತ್ತು. ಅದಕ್ಕೆ ಅಧೀನನಾಗದೆ, ಸರ್ವರಿಗೂ ಲಘುವಾಗುವವರೆಗೂ ಅವರಿಗೆ ಯಾವ ವಿಪತ್ತೂ ಬರದಂತೆ ನೋಡಿಕೊಳ್ಳುವುದರಲ್ಲಿ ನಿರತನಾಗಿದ್ದನು. ನೆಸ್ಟರೂ ಮತ್ತು ಪೈಲೋಕ್ಟೇಟೀಸರೂ ಆಹಾರ ನಿದ್ರಾದಿಗಳ ಉಪೇಕ್ಷೆಯಿಂದ ಚಿಕಿತ್ಸಕರೊಡನೆ ಜಿಲಿಮಾಕಸ್ಸನು ಕ್ಲೇಶಪಡುವುದನ್ನು ನೋಡಿದರು. ಯುದ್ಧದಲ್ಲಿ ಮೃತರಾದ ಹೆಸಿಯನರು ಮೊದಲಾದವರನ್ನು ರುದ್ರಭೂಮಿಗೆ ತೆಗೆದುಕೊಂಡು ಹೋಗಿ, ಸಂಪ್ರದಾಯಕ್ಕೆ ಅನುಸಾರವಾಗಿ ಉತ್ತರಕ್ರಿಯೆಗಳನ್ನು ಮಾಡಿಸಿ, ಅವರಿಗೆ ಸದ್ಗತಿಯನ್ನು ಕೊಡೆಂದು ದೇವನ್ನು ಪ್ರಾರ್ಥನೆಯನ್ನು ಮಾಡಿ, ಬದುಕಿರತಕ್ಕವರೂ, ಸತ್ತವರೂ ಎಲ್ಲರೂ ತನ

ಆಪ್ತಬಂಧುಗಳಾಗಿದ್ದರೆ ಹೇಗೋ ಹಾಗೆ ಇವನು ಮಾಡುತ್ತಲಿರುವ ಕ್ರಿಯೆಗಳನ್ನು ಇವರು ನೋಡಿದರು. ಸತ್ತವರಿಗೆಲ್ಲರಿಗೂ ಸಮೀಪದ ಕಾಡುಗಳಲ್ಲಿದ್ದ ಮರಗಳನ್ನು ಕತ್ತರಿಸಿ, ಚಿತಿಯನ್ನು ಮಾಡಿ, ಮಂತ್ರಾಗ್ನಿಯಿಂದ ತಾನೇ ಸ್ವೀಕೃತ ಪುತ್ರನಾಗಿದ್ದರೆ ಹೇಗೋ ಹಾಗೆ ಉತ್ತರಕ್ರಿಯೆಗಳನ್ನು ಮಾಡಿದನು. ಹಿಪಿಯಾಸನಿಗೋಸ್ಕರ ಒಂದು ಚಿತಿಯನ್ನು ಮಾಡಿ, ಅವನ ಶವವನ್ನು ತೆಗೆದು, ಅದರ ಮೇಲಿಟ್ಟು, ಮಂತ್ರಾಗ್ನಿಯನ್ನು ಹಾಕಿ, ದೇವತಾಪ್ರಾರ್ಥನೆಯನ್ನು ಮಾಡುತ್ತಿರುವಾಗ, ಟೆಲಿಮಾಕಸ್ಸನು ಕಣ್ಣೀರುಗಳನ್ನು ಸುರಿಸುತ್ತಾ, ಗಂಧದ ಎಣ್ಣೆಯೇ ಮೊದಲಾದ ಸುಗಂಧ ದ್ರವ್ಯಗಳನ್ನು ಚಿತಿಯ ಮೇಲೆ ಹಾಕಿ, ಅಪ್ರತಿಹತವಾದ ವ್ಯಸನದಿಂದ ಹೇಳಿದ್ದೇನಂದರೆ:—

"ಈ ಹಿಪಿಯಾಸನು ಫೆಲಾಂಥಸ್ಸನ ಸಹೋದರನು. ಇವನೊಡನೆ ಯುದ್ಧ ಮಾಡಿ ಸಂಹರಿಸಬೇಕೆಂಬ ಯೋಚನೆಯು ನನ್ನ ಮನೋವಾಕ್ಕರ್ಮಗಳಲ್ಲಿಯೂ ಇರಲಿಲ್ಲ. ನಿರಪರಾಧಿಯಾದ ನನ್ನನ್ನು ಸಂಹರಿಸಬೇಕೆಂದು ಇವನು ಪ್ರಯತ್ನ ಮಾಡಿದನು. ದುರಾತ್ಮನಾದ ಅಡ್ರಾಸ್ಟಸ್ಸನಿಂದ ಇವನು ಮಡಿದನು. ಸಾಂಕುಶಪ್ರವರ್ತಕನಾಗಿ ಮಹಾಜನಗಳ ಆಜ್ಞೆಯಂತೆ ನಡೆಯಬೇಕೆಂದು ಶಾಂತಿಯಿಂದ ನಿನಗೂ, ನಿನ್ನ ಸಹೋದರನಿಗೂ ಹೇಳಿದೆನು. ಇದೂ ಕೂಡ ಅಪರಾಧವೆಂದು ಭಾವಿಸಿ, ನೀನು ನನ್ನನ್ನು ಸಂಹರಿಸುವುದಕ್ಕೆ ಬಂದೆ. ನಿನ್ನ ಶಸ್ತ್ರಾಸ್ತ್ರಗಳಿಂದ ನಾನು ಮಡಿದಿದ್ದರೆ ಚನ್ನಾಗಿತ್ತು. ಸಾಧ್ವಿಯರಲ್ಲಿ ಶಿರೋಮಣಿಯಾದ ನಿನ್ನ ಹೆಂಡತಿಯನ್ನು ನೋಡಿದರೆ, ಇನ್ನೂ ನನ್ನ ಪ್ರಾಣವು ಹೋಗಲಿಲ್ಲವಲ್ಲಾ ಎಂದು ವ್ಯಥೆಯು ಸಂಪ್ರಾಪ್ತವಾಗಿದೆ. ಜಗದೀಶ್ವರನೇ, ನನ್ನ ಮೇಲೆ ಅನುಗ್ರಹವನ್ನು ಇಟ್ಟು, ನನ್ನ ಆತ್ಮಕ್ಕೆ ಕ್ಷೇಮವನ್ನು ಉಂಟುಮಾಡು. ಸ್ವದೇಶೀಯನಾಗಿಯೂ, ನನ್ನ ಅಕೃತ್ರಿಮವಾದ ಸ್ನೇಹಕ್ಕೆ ಪಾತ್ರನಾಗಿಯೂ ಇದ್ದ ಈ ಹಿಪಿಯಾಸನನ್ನು ಅನುಸರಿಸಿ ಹೋಗುವುದಕ್ಕೆ ನನಗೆ ಅಪ್ಪಣೆಯನ್ನು ಕೊಡು, ನನ್ನಲ್ಲಿ ಅನುಗ್ರಹವನ್ನು ಮಾಡು" ಎಂದು ಹೇಳಿ ಉರಿಯುತ್ತಲಿರುವ ಸದರಿ ಚಿತೆಗೆ ಹಾರಿಬಿದ್ದನು. ದೇವರ ಮಹಿಮೆಯಿಂದಲೋ, ಮಿನರ್ವಳ ಪ್ರಸಾದದಿಂದಲೋ ಯಜ್ಞೇಶ್ವರನು ಇವನ ಭಾಗಕ್ಕೆ ಸಂತಾಪಹರವಾದ ಸರೋವರದಂತೆ ಪರಿಣಮಿಸಿತು. ಹಿಪಿಯಾಸನ ಬಂಧುಮಿತ್ರರೂ ಕೂಡ ಇವನಲ್ಲಿ ದ್ವೇಷವನ್ನು ಬಿಟ್ಟು, ಇವನು ದೇವತಾಂಶಸಂ

ಭೂತನೆಂದು ತಿಳಿದುಕೊಂಡು, ಚಿತಿಯಿಂದ ಇವನನ್ನು ಎಳೆದು, ಶೈತ್ಯೋಪಚಾರ ಗಳಿಂದ ಇವನನ್ನು ಆದರಿಸಿದರು. ಸಂತಾಪಾಗ್ನಿಯಿಂದ ಹೋಗಿದ್ದ ಪ್ರಜ್ಞೆಯು ಸ್ವಲ್ಪ ಹೊತ್ತಿನಲ್ಲಿ ಅವನಿಗೆ ಬಂದಿತು. ಇವನಿಗೆ ಪ್ರಜ್ಞೆಯು ಬಂದ ಕೂಡಲೆ, ಹಿಪಿಯಾಸನ ಪತ್ನಿಯು ಇವನನ್ನು ನೋಡಿ ಹೇಳಿದ್ದೇನಂದರೆ:—

"ನನ್ನ ಗಂಡನಿಗೆ ಸಹಾಯ ಮಾಡಿ, ಅವನಿಗೆ ಸದ್ಗತಿಯನ್ನು ಉಂಟುಮಾಡಿರುವಿ. ಅವನ ವಿಯೋಗ ದುಃಖದಿಂದ ದೇಹವನ್ನು ಬಿಡುವುದಕ್ಕೂ ಸಿದ್ಧನಾದೆ. ನೀನು ಬಹಳ ಧರ್ಮಿಷ್ಠನು. ಅವನ ಅಕಾಲಮರಣಕ್ಕೆ ನನ್ನ ದೌರ್ಭಾಗ್ಯವು ಕಾರಣವೇ ಹೊರತು, ಮತ್ತೆ ಬೇರೆ ಅಲ್ಲ. ಜಗದೀಶ್ವರನು ನಿನ್ನಲ್ಲಿ ಪ್ರಸನ್ನನಾಗಿರುವನು. ಇದಕ್ಕೆ ಧರ್ಮದಲ್ಲಿ ನಿನಗಿರತಕ್ಕ ನಿಸರ್ಗವಾದ ಭಕ್ತಿಯೇ ಮುಖ್ಯ ಕಾರಣ. ಪ್ರಪಂಚದಲ್ಲಿ ಧರ್ಮಸಂಸ್ಥಾಪನೆಗೆ ನೀನು ಹುಟ್ಟಿರುತ್ತೀಯೆ. ಜಗದೀಶ್ವರನ ಅನುಗ್ರಹದಿಂದ ದುಷ್ಟನಿಗ್ರಹ, ಶಿಷ್ಟಪರಿಪಾಲನವನ್ನು ಮಾಡಿ, ಪಾಪಮಯವಾದ ಈ ಲೋಕವನ್ನು ಸ್ವರ್ಗವಾಗುವಂತೆ ಮಾಡಿ ಧನ್ಯನಾಗು. ನಿನಗೆ ದೇವರು ಸಕಲ ಸನ್ಮಂಗಳಗಳನ್ನೂ ಮಾಡಲಿ." ಹೀಗೆ ಹೇಳಿ, ಹಿಪಿಯಾಸನ ಹೆಂಡತಿಯು ಸ್ಮಶಾನದಿಂದ ಹಿಂತಿರುಗುವುದಕ್ಕೆ ಉದ್ಯುಕ್ತಳಾದಳು. ಅವಳ ಕಂಕುಳಲ್ಲಿ ಸುಮಾರು ಒಂದು ವರ್ಷದ ಮಗುವನ್ನು ಎತ್ತಿಕೊಂಡಿದ್ದಳು. ಸದರಿ ಮಗುವು ಹಿಪಿಯಾಸನ ಪ್ರತಿಬಿಂಬವಾಗಿತ್ತು. ತಂದೆಯು ಸತ್ತನೆಂಬದಾಗಿಯೂ, ತಾಯಿಗೆ ಪತಿವಿಯೋಗ ದುಃಖವು ಇರುವುದೆಂಬದಾಗಿಯೂ ಆ ಮಗುವಿಗೆ ಪರಿಜ್ಞಾನವು ಇರಲಿಲ್ಲ. ಆದಾಗ್ಯೂ ದುಃಖಪರವಶಳಾದ ತಾಯಿಯನ್ನು ಈ ಮಗುವು ಸಮಾಧಾನ ಪಡಿಸುವಂತೆ ತೋರುತ್ತಿತ್ತು. ಇದು ನಿಜ. ಈ ಮಗುವನ್ನು ನೋಡಿ, ಪತಿವಿಯೋಗ ದುಃಖವನ್ನು ಸಹಿಸಿಕೊಳ್ಳುವ ಶಕ್ತಿಯು ಅವಳಿಗೆ ಸ್ವಲ್ಪಮಟ್ಟಿಗೆ ಉಂಟಾಯಿತು. ಚಿತಿಯಲ್ಲಿ ಬಿದ್ದು ಆತ್ಮಹತ್ಯವನ್ನು ಮಾಡಿಕೊಳ್ಳಬೇಕೆಂದು ಪ್ರಯತ್ನ ಮಾಡಿದಾಗ್ಯೂ, ನನ್ನ ದೌರ್ಭಾಗ್ಯದ ಬಲದಿಂದ ಇದೂ ಅಸಾಧ್ಯವಾಯಿತು. ಸ್ಮಶಾನದಿಂದ ಹಿಂತಿರುಗುವುದಕ್ಕೆ ಉಪಕ್ರಮಿಸಿದ ಈ ಸಾಧ್ವೀಮಣಿಯನ್ನು ನೋಡಿ ನಾನು ಹೇಳಿದ್ದೇನಂದರೆ:—

"ತಾಯಿ, ನಿನ್ನ ಶಾಂತಿಯನ್ನೂ, ಸೌಜನ್ಯವನ್ನೂ ನೋಡಿದರೆ, ನನಗೆ ಪರಮಾಶ್ಚರ್ಯವಾಗುತ್ತದೆ. ಏನೋ ಒಂದು ಕಾರಣದಿಂದ ನನ್ನನ್ನು ಅಗ್ನಿಯೂ ಕೂಡ ದಹಿಸಲಿಲ್ಲ. ಆದರೆ ಸಂತಾಪಾಗ್ನಿಯು ನನ್ನನ್ನು ದಹಿಸುತ್ತಲಿದೆ. ನಿನ್ನ

ಗಂಡನು ಈ ಪಾಪಮಯವಾದ ಲೋಕದ ಕ್ಲೇಶಗಳನ್ನು ಅನುಭವಿಸುವುದಕ್ಕೆ ನನ್ನನ್ನು ಬಿಟ್ಟು, ತಾನು ಜಗದೀಶ್ವರನ ಸಾನ್ನಿಧ್ಯದಲ್ಲಿ ಮೋಕ್ಷಸುಖವನ್ನು ಹೊಂದುವುದಕ್ಕೆ ಹೊರಟು ಹೋದನು. ಅವನು ಹೋದಾಗ್ಯೂ, ಈ ಮಗುವಿನ ರೂಪದಲ್ಲಿ ಅವನು ಬದುಕಿರುವನೆಂದು ತಿಳಿದುಕೊ. ಇವನೇ ಇವನ ತಂದೆಯೆಂದು ಭಾವಿಸಿ ಉಪಚರಿಸು. ತಂದೆಗಿಂತಲೂ ಹೆಚ್ಚಾದ ಗುಣಾತಿಶಯಗಳನ್ನು ಜಗದೀಶ್ವರನು ಇವನಿಗೆ ಅನುಗ್ರಹಿಸುವನು. ಈ ಕ್ಲೇಶವು ಕಾಲಕ್ರಮದಲ್ಲಿ ಕಡಮೆಯಾಗಿ, ನಿನ್ನ ಪುಣ್ಯಕರ್ಮಗಳಿಂದ ನಿನ್ನ ಗಂಡನಿಗೆ ಶಾಶ್ವತವಾದ ಕೀರ್ತಿಯನ್ನು ತರುವ ಪ್ರಯತ್ನವನ್ನು ಮಾಡು. ನಾನು ಜೇಷ್ಠಪುತ್ರನೆಂಬದಾಗಿಯೂ, ಇವನು ಕನಿಷ್ಠಪುತ್ರನೆಂಬದಾಗಿಯೂ ಭಾವಿಸಿ, ಯಾವಾಗ ಏನು ಆಜ್ಞೆಯನ್ನು ಮಾಡಿದಾಗ್ಯೂ, ಸದರಿ ಆಜ್ಞೆಯನ್ನು ಶಿರಸಾವಹಿಸಿ ಮಾಡುವುದಕ್ಕೆ ಸಿದ್ಧನಾಗಿರುತ್ತೇನೆ. ದೇವರು ನಿನಗೆ ಮಂಗಳವನ್ನು ಮಾಡಲಿ" ಎಂದು ಹೇಳಿ ಅಳಿಯನ್ನು ಕಳುಹಿಸಿಕೊಟ್ಟನು.

ಈ ಮಾತುಗಳನ್ನು ಕೇಳಿದ ಕೂಡಲೆ ಹಿಪಿಯಾಸನ ಪತ್ನಿಯು ಟೆಲಿಮಾಕಸ್ಸನ ಸೌಜನ್ಯವನ್ನು ನೋಡಿ, ಕಣ್ಣೀರುಗಳನ್ನು ವರೆಸಿಕೊಂಡು ನಿನಗೆ ಮಂಗಳವಾಗಲೆಂದು ಹೇಳಿ ಹೊರಟು ಹೋದಳು. ಇವರ ಸಂಭಾಷಣವನ್ನು ಕೇಳಿ, ದೇಹತ್ಯಾಗದ ವಿಷಯದಲ್ಲಿ ಟೆಲಿಮಾಕಸ್ ಮಾಡಿದ ಸಾಹಸಕೃತ್ಯವನ್ನು ನೋಡಿ, ಇವನ ಮಾತುಗಳು ಹೇಗೋ ಹಾಗೆ ಇವನ ಕಾರ್ಯವೂ ಕೂಡ ಅಮಾನುಷವಾಗಿರುವುದು. ಇವನು ಬಹಳ ಪರಾಕ್ರಮಶಾಲಿಯೆಂಬದಾಗಿಯೂ, ಪರಾಕ್ರಮಕ್ಕೆ ಅನುರೂಪವಾದ ಅಹಂಕಾರವೂ, ಸರ್ವರಲ್ಲಿಯೂ ತಿರಸ್ಕಾರಭಾವವೂ ಇರುವುದಿಲ್ಲವೆಂಬದಾಗಿಯೂ, ವಿನಯಾದಿ ಸದ್ಗುಣಗಳು ಇವನಲ್ಲಿ ವಿಶೇಷವಾಗಿ ಇರುವುದೆಂಬದಾಗಿಯೂ ಹೇಳುತ್ತಿದ್ದರು. ಇವನು ಮೂರ್ತೀಭವಿಸಿದ ಸತ್ಯ ಮತ್ತು ಧರ್ಮಸ್ವರೂಪನಾಗಿ ಇರುವನು. ಅಹಂಕಾರಾದಿಗಳು ಇವನಲ್ಲಿ ಇರುವುದಿಲ್ಲ. ಇವನು ವಿನೀತನು. ಭೂತದಯೆಯುಳ್ಳವನು. ದಯಾರ್ದ್ರಹೃದಯನು. ಇವನ ಧರ್ಮವೇ ಇವನನ್ನು ರಕ್ಷಿಸಿರುವುದು. ಧರ್ಮಕ್ಕೆ ಧರ್ಮವೇ ಪ್ರತಿಫಲವನ್ನು ತರುವುದೆಂದು ಹಿರಿಯರು ಹೇಳುವರು. ಅದಕ್ಕೆ ದೃಷ್ಟಾಂತವನ್ನು ಈಗ ನೋಡಿದೆವು. ಇಂಥಾ ಮಹಾನುಭಾವನಿಗೆ ತಂದೆಯಾದ ಯುಲಿಸಸ್ಸನೂ, ತಾಯಿಯಾದ ಪೆನಿಲೋಪಳೂ ಕೇವಲ ಪುಣ್ಯವಂತರು. ನಮ್ಮ

ಪುಣ್ಯಪರಿಪಾಕದಿಂದ ಈ ಮಹಾನುಭಾವನ ದರ್ಶನ ಫಲವು ನಮಗೆ ಲಭ್ಯವಾಯಿತು ಎಂದು ಹೇಳಿಕೊಂಡು ಫಿಲಾಂಥಸ್ಸನ ಬಳಿಗೆ ಹೋದರು. ಅವನು ನೆಲದ ಮೇಲೆ ಬಿದ್ದಿದ್ದನು. ಮೈಯೆಲ್ಲಾ ಘಾಯಗಳಾಗಿತ್ತು. ದೇಹವನ್ನು ಬಿಡುವ ಸ್ಥಿತಿಯಲ್ಲಿ ಆತನು ಇದ್ದನು. ಈ ಸಮಾಚಾರವನ್ನು ಕೇಳಿದ ಕೂಡಲೆ ಜಿಲಿಮಾಳಸ್ಸನು ಟ್ರಾಮೆಟೋಫೈಲಸ್ ಮತ್ತು ನಾಸೋಫ್ಯಾಗಸ್‌ರನ್ನು ಕರೆದು ಕೊಂಡು ಹೋಗಿ ಚಿಕಿತ್ಸೆಯನ್ನು ಮಾಡಿಸಿದನು. ಇವರ ಚಿಕಿತ್ಸೆಯಿಂದ ಸ್ವಲ್ಪ ಕಾಲದಲ್ಲಿಯೇ ಅವನಿಗೆ ಪ್ರಜ್ಞೆಯು ಬಂದಿತು. ತಣ್ಣಗಾಗಿದ್ದ ಕೈಕಾಲುಗಳು ಕಾವುಳ್ಳದ್ದಾದವು ಪಥ್ಯವನ್ನು ತೆಗೆದುಕೊಳ್ಳುವುದಕ್ಕೆ ಶಕ್ತಿಯು ಬಂದಿತು. ದೇಹದ ಮೇಲೆ ಪರಿಪೂರ್ಣವಾಗಿ ಪ್ರಜ್ಞೆಯು ಬಂದ ಕೂಡಲೆ, ಅಪಾರವಾದ ವ್ಯಸನವು ಅವನಿಗೆ ಬಂದಿತು. ಈ ವ್ಯಸನದಲ್ಲಿ ತನ್ನಲ್ಲಿ ತಾನೇ ಹೇಳಿಕೊಂಡದ್ದೇನೆಂದರೆ:—

“ಪ್ರಾಣಪ್ರಿಯನಾದ ಹಿಪಿಯಾಸನೇ, ನೀನು ದೇಹವನ್ನು ಬಿಟ್ಟೆ. ಇನ್ನು ನಾನು ಬದುಕಿ ಪ್ರಯೋಜನವಿಲ್ಲ. ಈ ನನ್ನ ಕಣ್ಣುಗಳಿಂದ ನಿನ್ನನ್ನು ನೋಡುವುದು ಅಸಾಧ್ಯವಾಯಿತು. ಈ ಕಿವಿಗಳಿಂದ ನಿನ್ನ ಮಾತುಗಳನ್ನು ಕೇಳುವ ಸಂಭವವು ತಪ್ಪಿತು. ಸಂತೋಷದಿಂದ ನಿನ್ನನ್ನು ಆಲಂಗಿಸುವ ಸುಖವು ತಪ್ಪಿತು. ನನ್ನ ಮನೋಗತಗಳನ್ನು ನಿನಗೆ ತಿಳಿಸಿ, ನಿನ್ನ ಅಭಿಪ್ರಾಯವನ್ನು ತಿಳಿದುಕೊಳ್ಳುವ ಸಂಭವವು ತಪ್ಪಿತು. ಇನ್ನು ಮೇಲೆ ನನ್ನ ಕಷ್ಟಸುಖಗಳಲ್ಲಿ ನಿನ್ನ ಹಾಗೆ ಭಾಗಿಗಳಾಗತಕ್ಕವರು ಯಾರು? ಎಲೈ ಜಗದೀಶ್ವರನೇ, ನನಗೆ ಈ ಭ್ರಾತೃವಿಯೋಗವನ್ನು ಏತಕ್ಕೆ ಮಾಡಿಸಿದೆ? ಇವನ ಜತೆಯಲ್ಲಿಯೇ ನನ್ನನ್ನೂ ಕರೆದುಕೊಳ್ಳದೆ, ನಾನು ಈ ಲೋಕದಲ್ಲಿರುವಂತೆ ಏಕೆ ಮಾಡಿದಿ? ಹಿಪಿಯಾಸನನ್ನು ಬಿಟ್ಟು ಫಿಲಾಂಥಸ್ಸನು ಇರುವುದು ಧರ್ಮವೇ? ಎಲೈ ಹಿಪಿಯಾಸನೇ, ನೀನು ಸತ್ತ ಮೇಲೆ ನಿನ್ನ ಶತ್ರುಗಳನ್ನು ಸಂಹರಿಸಬೇಕು ಅಥವಾ ನಾನು ನಿನ್ನ ಜತೆಗೆ ಬರಬೇಕು. ನಿನಗೆ ಉತ್ತರಕ್ರಿಯೆಗಳನ್ನು ಮಾಡಿ, ಅನಂತರ ದೇಹವನ್ನು ಬಿಡಲೆಂದು ದೇವರೇನಾದರೂ ನನ್ನನ್ನು ಬದುಕಿಸಿರುವನೇ? ದಯಾರಹಿತನಾದ ಅತ್ರಾಸ್‌ಟಸ್ಸನು ನಿನ್ನ ಮರಣಕ್ಕೆ ಕಾರಣಭೂತನು. ಇವನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಮಾಡುವ ಶಕ್ತಿಯು ನನಗಿರುವುದಿಲ್ಲ. ದೇವರೇ ಇವನಿಗೆ ಶಿಕ್ಷೆಯನ್ನು ಮಾಡುವನು”

ಈ ರೀತಿಯಲ್ಲಿ ಅತ್ಯಗತವಾದ ವ್ಯಾಕುಲದಲ್ಲಿ ಕ್ಲೇಶಪಡುವುದನ್ನು ನೋಡಿ, ಟ್ರಾ

ಮೆಟೋಕ್ಷೈಲಸ್ಸನೂ, ನಾಸೋಫ್ಯೂಗಸ್ಸನೂ ಇವನಿಗೆ ಸಮಾಧಾನವನ್ನುಂಟುಮಾಡಿದ ಹೊರತು, ರೋಗವು ಪರಿಪೂರ್ಣವಾಗಿ ವಾಸಿಯಾಗುವುದಿಲ್ಲವೆಂದು ಯೋಚಿಸುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಟೆಲಿಮಾಕಸ್ಸನು ಅಲ್ಲಿಗೆ ಬಂದನು. ಅವನನ್ನು ನೋಡಿದ ಕೂಡಲೆ ಫೆಲಾಂಥಸ್ಸನಿಗೆ ಅಪ್ರತಿಹತವಾದ ಸಂತಾಪವು ಉಂಟಾಯಿತು. ಸಂತಾಪಕ್ಕೆ ಟೆಲಿಮಾಕಸ್ಸನಿಗೂ, ಹಿಪಿಯಾಸನಿಗೂ ಆಗಿದ್ದ ಮನಸ್ತಾಪವೇ ಮುಖ್ಯಕಾರಣ. ಆದರೆ ಅಡ್ರಾಸ್ಟಸ್ಸನು ಇವನನ್ನು ಕೊಲ್ಲುವ ಸಮಯಕ್ಕೆ ಟೆಲಿಮಾಕಸ್ಸನು ಬಂದು ಫೆಲಾಂಥಸ್ಸನ ಪ್ರಾಣವನ್ನು ಉಳಿಸಿದನು. ಅಡ್ರಾಸ್ಟಸ್ಸನನ್ನು ತನ್ನ ಶಸ್ತ್ರಾಸ್ತ್ರಗಳಿಂದ ಬಲವಾಗಿ ನೋಯಿಸಿ ಓಡಿಸಿದನು. ಟೆಲಿಮಾಕಸ್ಸನ ಸಹಾಯವು ಬರದೆ ಇದ್ದಿದ್ದರೆ, ಅಡ್ರಾಸ್ಟಸ್ಸನು ಫೆಲಾಂಥಸ್ಸನನ್ನು ಸಂಹರಿಸುತ್ತಿದ್ದನು. ತನಗೆ ಆದ ಉಪಕಾರ ಸ್ಮರಣೆಯೂ, ಸಹೋದರನಿಗೆ ಆದ ಅಪಕಾರ ಸ್ಮರಣೆಯೂ ಎರಡೂ ಫೆಲಾಂಥಸ್ಸನಲ್ಲಿ ಉತ್ಕಟಾವಸ್ಥೆಗೆ ಬಂದಿತು. ಟೆಲಿಮಾಕಸ್ಸನನ್ನು ನೋಡಿ ಅವನು ಹೇಳಿದ್ದೇನಂದರೆ:—

"ಎಲೈ ಯೂಲಿಸಸ್ಸನ ಮಗನೇ, ನನ್ನ ತಮ್ಮನಿಗೆ ನೀನು ಉಪಕಾರ ಮಾಡಿರುವಿ. ಆದರಿಂದ ನೀನು ಕೃತಜ್ಞತೆಗೆ ಪಾತ್ರನಾಗಿರುವಿ. ದುರಾತ್ಮನಾದ ಅಡ್ರಾಸ್ಟಸ್ಸನು ನನ್ನನ್ನು ಕೊಲ್ಲುತ್ತಿದ್ದನು. ಆ ಸಮಯಕ್ಕೆ ಬಂದು ಪ್ರಾಣದಾನವನ್ನು ಮಾಡಿರುವಿ. ಇದರಿಂದ ನನ್ನ ಪ್ರೀತಿಗೆ ಪಾತ್ರನಾಗಿರುವಿ. ನನ್ನ ಸಹೋದರನ ಶವವು ದುಷ್ಟಜಂತುಗಳ ಪಾಲಾಗದೆ, ಮಂತ್ರಾಗ್ನಿಯಿಂದ ಅವನಿಗೆ ಸದ್ಗತಿಯಾಗುವಂತೆ ನೀನು ಮಾಡಿರುವಿ. ನಿನ್ನನ್ನು ದ್ವೇಷಿಸಬೇಕೋ, ಪ್ರೀತಿಸಬೇಕೋ ಎರಡೂ ನನಗೆ ಗೊತ್ತಾಗುವುದಿಲ್ಲ. ಅದು ಹೇಗಾದರೂ ಆಗಲಿ. ನೀನು ನಮಗೆ ಬಹಳ ಉಪಕಾರ ಮಾಡಿರುತ್ತೀಯೆ. ಜಗದೀಶ್ವರನು ನಿನ್ನ ಧರ್ಮಕ್ಕೆ ಅನುರೂಪವಾದ ಫಲವನ್ನು ಕೊಡಲಿ. ಇನ್ನು ಜೀವಿಸುವುದಕ್ಕೆ ನನಗೆ ಇಷ್ಟವಿಲ್ಲ. ಈ ಕಷ್ಟವನ್ನು ಅನುಭವಿಸಲಾರೆ. ದೇಹವನ್ನು ಬಿಡುವುದಕ್ಕೆ ಸಿದ್ಧನಾಗಿರುತ್ತೇನೆ. ಹಿಪಿಯಾಸನಿಗೆ ಸದ್ಗತಿಯಾಗುವಂತೆ ಯಾವ ದಹನ ಸಂಸ್ಕಾರ ಕ್ರಿಯೆಗಳನ್ನು ಮಾಡಿದೆಯೋ ಅದನ್ನು ನನಗೂ ಮಾಡಿ, ನನಗೆ ಸದ್ಗತಿಯನ್ನುಂಟುಮಾಡು" ಎಂದು ಹೇಳಿ, ಅತ್ಯಂತ ವ್ಯಸನದಿಂದ ಮೂರ್ಛೆಯನ್ನು ಹೊಂದಿದನು. ಟೆಲಿಮಾಕಸ್ಸನು ಮೌನದಿಂದ ಶಿಲಾಪ್ರತಿಮೆಯಂತೆ ನಿಂತಿದ್ದನು. ಸ್ವಲ್ಪ ಹೊತ್ತಿಗೆ ಫೆಲಾಂಥಸ್ಸನಿಗೆ ಪ್ರಜ್ಞೆಯು ಬಂದಿತು. ಹಿಪಿಯಾಸನ ಅಸ್ಥಿಗಳುಳ್ಳ

ಪಾತ್ರೆಯು ಪಿಲಿಪೋಕಸ್ಸನ ಕೈಯ್ಯಲ್ಲಿತ್ತು. ಅದನ್ನು ನೋಡಿ, ಈ ನನ್ನ ಸಹೋದರನು ಅಸ್ತಿಗಳ ಜತೆಯಲ್ಲಿ ನನ್ನ ಅಸ್ತಿಗಳೂ ಸೇರುವ ಸಂಭವವನ್ನು ನಾನು ನಿರೀಕ್ಷಿಸುತ್ತೇನೆ. ನನ್ನ ಸಹೋದರನಿಗೆ ಅಪರಾಧವನ್ನು ಮಾಡಿದ ಅಡ್ರಾಸ್ಟಸ್ಸನಿಗೆ ನಾನು ಶಿಕ್ಷೆಯನ್ನು ಮಾಡುವುದಿಲ್ಲ. ಈ ಕೆಲಸವನ್ನು ದೇವರು ಮಾಡಲಿ ಅಥವಾ ನಿನ್ನಿಂದ ಮಾಡಿಸಲಿ ಎಂದು ಹೇಳಿ ಪುನಃ ಮೋಹಪರವಶನಾದನು.

ಕೂಡಲೆ ಪಿಲಿಪೋಕಸ್ಸನು ಟ್ರಾಮೆಟೋಫೈಲಸ್, ನಾಸೋಫ್ಯೂಗಸ್‌ರನ್ನು ಕರೆದು, ಥಾಲಂಥಸ್ಸನಿಗೆ ಚಿಕಿತ್ಸೆಯನ್ನು ಮಾಡಬೇಕೆಂದು ಪ್ರಾರ್ಥಿಸಿದನು. ತಾನೂ ಅವರ ಜತೆಯಲ್ಲಿ ಸೇರಿ ಔಷಧಪಥ್ಯಗಳಿಗೆ ಏರ್ಪಾಡು ಮಾಡಿಸಿದನು. ಈ ವೈದ್ಯರು ಬಹಳ ಶ್ರದ್ಧೆಯಿಂದ ಥಲಾಂಥಸ್ಸನ ಚಿಕಿತ್ಸೆಗೆ ಉಪಕ್ರಮ ಮಾಡಿದರು. ಪಿಲಿಪೋಕಸ್ಸನು ಅವರ ಜತೆಯಲ್ಲಿ ಕೆಲಸ ಮಾಡುವುದಲ್ಲದೆ ಮಿತ್ರಮಂಡಲಿಯವರ ಸೈನ್ಯದಲ್ಲಿ ಪರಸ್ಪರ ಪ್ರೀತಿಯೂ, ಐಕಮತ್ಯವೂ ಇರುವಂತೆ ಮಾಡುವುದಕ್ಕೆ ಬಹಳ ಮೆಹನತ್ತನ್ನು ಮಾಡಿದನು. ಅಧಿಕಾರಿಗಳನ್ನೂ ಯೋಧರನ್ನೂ ಒಬ್ಬೊಬ್ಬರನ್ನಾಗಿ ನೋಡುತ್ತಾ, ಮಿತ್ರಭಾವದಿಂದಲೂ, ಸೌಹಾರ್ದದಿಂದಲೂ ಅವರ ಕರ್ತವ್ಯಗಳನ್ನು ಅವರಿಗೆ ತಿಳಿಸುತ್ತಾ, ಎಲ್ಲರಿಗೂ ಪರಮಾಪ್ತನಾಗಿ ಪರಿಣಮಿಸಿದನು. ಈ ಕೆಲಸವನ್ನು ಮಾಡುವುದರಲ್ಲಿ ಕೇವಲ ನಿರತನಾಗಿ ಆಹಾರ ನಿದ್ರೆಗಳಲ್ಲಿಯೂ ಕೂಡ ಉದಾಸೀನನಾಗಿದ್ದನು. ಅಹೋರಾತ್ರಿಗಳಲ್ಲಿಯೂ ಈತನಿಗೆ ಕೆಲಸಗಳು ಇರುತ್ತಿದ್ದವು. ನಿದ್ರೆಯ ಕಾಲದಲ್ಲಿಯೂ ಇವನ ಸಲಹೆಗಳನ್ನು ತೆಗೆದುಕೊಳ್ಳುವುದಕ್ಕೆ ಅಧಿಕಾರಿಗಳು ಬರುತ್ತಿದ್ದರು. ಸ್ವಲ್ಪವೂ ಬೇಜಾರಿಲ್ಲದೆ ಯಾರು ಯಾವ ಕೆಲಸಕ್ಕೆ ಬಂದಾಗ್ಯೂ, ಆ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದ್ದನು. ಶಿಬಿರವನ್ನೆಲ್ಲಾ ದಿನಕ್ಕೆ ನಾಲ್ಕೈದಾವರ್ತಿ ಇನ್ಸ್‌ಪೆಕ್ಷನ್ ಮಾಡುತ್ತಾ, ಯಾರು ಯಾವ ಕೆಲಸವನ್ನು ಮಾಡುವುದರಲ್ಲಿ ಉಪೇಕ್ಷೆ ಮಾಡುವರೋ ಅದನ್ನು ತಾನು ಹೋಗಿ ಮಾಡುತ್ತಿದ್ದನು. ಇದನ್ನು ನೋಡಿ ಅಧಿಕಾರಿಗಳು ನಾಚಿಕೊಂಡು, ಯಾವಾಗ ತಮ್ಮ ಕೆಲಸವನ್ನು ನೋಡುವುದಕ್ಕೆ ಬರುವನೋ ಎಂದು ಭಯಪಡುತ್ತಾ, ತಮ್ಮ ಕೆಲಸಗಳನ್ನು ಕಾಲಕ್ಕೆ ಸರಿಯಾಗಿ ಅತ್ಯಂತ ಶ್ರದ್ಧೆಯಿಂದ ಮಾಡುವುದಕ್ಕೆ ಉಪಕ್ರಮಿಸಿದನು. ಆಹಾರ ನಿದ್ರಾದಿಗಳಲ್ಲಿ ಬಹಳ ಮಿತಿಯಾಗಿದ್ದುಕೊಂಡು, ಮಿತ್ರಮಂಡಲಿಯವರ ಸೇವೆಯಲ್ಲಿ ಅತ್ಯಂತ ಉತ್ಸಾಹಶಾಲಿಯಾಗಿದ್ದನು. ಪ್ರತಿ ಒಬ್ಬ ಯೋಧನ ಯೋಗ

ಕ್ಷೇಮಚಿಂತೆಯನ್ನು ಮಾಡುತ್ತಾ, ಎಲ್ಲರ ಕಷ್ಟವೂ ತನ್ನ ಕಷ್ಟವೆಂದು ಭಾವಿಸಿ, ಅವರ ಸಹಾಯಕ್ಕೆ ಅಪ್ರಾರ್ಥಿತವಾಗಿ ಹೋಗುತ್ತಿದ್ದನು. ಸೈನಿಕರ ನೆಮ್ಮದಿಗೆ ಸಾಧಕವಾದ ಅನ್ನವಸ್ತ್ರಗಳೇ ಮೊದಲಾದವುಗಳ ಸರಬರಾಜಿಗೆ ಗಮನವನ್ನು ಕೊಡುತ್ತಿದ್ದನು. ಅಧಿಕಾರಿಗಳಿಗೂ, ಯೋಧರಿಗೂ ಈ ಭಾಗದಲ್ಲಿ ನ್ಯೂನಾತಿರಿಕ್ತಗಳಾದರೆ ಅವರನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದು ಕಷ್ಟವೆಂದು ಇವನಿಗೆ ಚೆನ್ನಾಗಿ ಗೊತ್ತಾಗಿತ್ತು. ಇದಕ್ಕೋಸ್ಕರ ಈ ಭಾಗದಲ್ಲಿ ಯಾವ ನ್ಯೂನತೆಗಳೂ ಇರದಂತೆ ಏರ್ಪಾಡುಮಾಡಿಕೊಂಡಿದ್ದನು. ಸಿವಿಲ್ ಮತ್ತು ಮಿಲಿಟರಿ ಇಲಾಖೆಯವರಿಗೆಲ್ಲಾ ದುಂದುಗಾರಿಕೆಗೆ ಸ್ವಲ್ಪವೂ ಅವಕಾಶವಿಲ್ಲದಂತೆ ಅವರ ಮಹತ್ತಿಗೆ ಅನುರೂಪವಾದ ಸಹಾಯಮಾಡುತ್ತಾ, ತನ್ನ ಮಿತ್ರಭಾವದಿಂದಲೂ, ಉಪಚಾರೋಕ್ತಿಗಳಿಂದಲೂ ಅವರ ಸಂಬಳದ ಬೆಲೆಯು ಒಂದಕ್ಕೆ ಹತ್ತರಷ್ಟಾಗುವಂತೆ ಮಾಡಿಕೊಂಡಿದ್ದನು. ಸಕಲ ಜನಗಳೂ ಕೂಡ ಈತನು ತಮಗೆ ಪರಮ ಮಿತ್ರನಾಗಿದ್ದರೆ ಹೇಗೋ ಹಾಗೆ ಭಾವಿಸುತ್ತಿದ್ದರು. ಒಬ್ಬ ಮನುಷ್ಯನು ಅನೇಕ ಸಾವಿರ ನೌಕರರನ್ನು ಇಷ್ಟು ಶ್ರದ್ಧೆಯಿಂದ ಕೆಲಸ ಮಾಡುವಂತೆ ಟೆಲಿಮಾಕಸ್ಸನು ಮಾಡಿದ್ದ ಏರ್ಪಾಡುಗಳನ್ನು ನೋಡಿ, ಇವನ ಚರ್ಯೆಗಳು ಅಮಾನುಷವಾದವುಗಳೆಂದು ನೆಸ್ಟರು ಮೊದಲಾದವರೂ ಕೂಡ ಆಶ್ಚರ್ಯಪಡುತ್ತಿದ್ದರು. ಈ ಮಧ್ಯೆ ಟ್ರಾಪಿಟೋಫೈಲಸ್ ಮತ್ತು ನಾಸೋಫ್ಯೂಗಸ್‌ರವರ ಚಿಕಿತ್ಸೆಯಿಂದಲೂ, ಟೆಲಿಮಾಕಸ್ಸನ ಉಪಚಾರಗಳಿಂದಲೂ ಫೆಲಾಂಥಸ್ಸನಿಗೆ ಆರೋಗ್ಯವಾಯಿತು. ಸಂಪೂರ್ಣವಾಗಿ ಆರೋಗ್ಯವಾಯಿತೆಂದು ಗೊತ್ತಾದ ಕೂಡಲೆ, ಟೆಲಿಮಾಕಸ್ಸನು ಅವನ ಸಹೋದರನ ಅಸ್ತಿಗಳನ್ನು ಅವನಿಗೆ ಒಪ್ಪಿಸಿ ಹೇಳಿದ್ದೇನೆಂದರೆ:—

"ಕಾಲಮಹಿಮೆಯಿಂದ ನಿನ್ನ ಸಹೋದರನಿಗೂ, ನನಗೂ ಮನಸ್ತಾಪ ಉಂಟಾಯಿತು. ನನ್ನ ವಿಷಯದಲ್ಲಿ ನಿನಗೆ ಅಸಮಾಧಾನ ಉಂಟಾಗುವುದಕ್ಕೂ ಇದೇ ಕಾರಣವಾಯಿತು. ದುರಾತ್ಮನಾದ ಅಡ್ರಾಸ್ಟಸ್ಸನಿಂದ ನಿನ್ನ ತಮ್ಮನು ಸತ್ತನು. ನೀನು ಅನೇಕ ಘಾಯಗಳನ್ನು ಹೊಂದಿ, ಲೋಕಾಂತರ ಪ್ರವೇಶಕ್ಕೆ ಅಭಿಮುಖನಾಗಿದ್ದಿ. ಅಡ್ರಾಸ್ಟಸ್ಸನು ನಿಮಗೆ ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಹೊಂದಬೇಕಾಗಿತ್ತು. ಏನೋ ಒಂದು ಕಾರಣದಿಂದ ಅವನು ಶಿಕ್ಷೆಯನ್ನು ತಪ್ಪಿಸಿಕೊಂಡಿರುವನು, ದುರಾತ್ಮರಿಗೆ ಶಿಕ್ಷೆಯು ತಪ್ಪುವುದಿಲ್ಲ. ನಮ್ಮಿಂದ ಅವನು ತಪ್ಪಿಸಿಕೊಂಡನು. ಮನುಷ್ಯ ಶಿಕ್ಷೆಯು ತಪ್ಪಿದಾಗ್ಯೂ,

ಜಗದೀಶ್ವರನ ಶಿಕ್ಷೆಯು ತಪ್ಪುವುದಿಲ್ಲ. ಇದನ್ನು ಚನ್ನಾಗಿ ನಂಬು. ಘಾಯದಿಂದ ಪೀಡಿತನಾಗಿ, ಸ್ವರ್ಗಾಭಿಮುಖವಾಗಿದ್ದಾಗ, ವೈರಾಗ್ಯವನ್ನು ವಹಿಸಿ, ಅಡ್ರಾಸ್ಟಸ್ಸನಿಗೆ ಶಿಕ್ಷೆಯನ್ನು ಮಾಡಬೇಕೆಂದು ದೇವರಿಗೂ, ನನಗೂ ಒಪ್ಪಿಸಿದೆ. ಈಗ ದೈವಯೋಗದಿಂದ ನಿನಗೆ ಆರೋಗ್ಯವಾಗಿರುವುದು. ಮಿತ್ರಮಂಡಲಿಯವರಿಗೋಸ್ಕರ ನೀನು ಮಾಡತಕ್ಕ ಕೆಲಸಗಳು ಬಾಕಿ ಇರುವುವು. ನೀನು ಅಶಕ್ತನಾಗಿದ್ದಾಗ, ನಿನಗೆ ಪ್ರತಿನಿಧಿಯಾಗಿ ಎಲ್ಲರನ್ನೂ ಹತೋಟಿಯಲ್ಲಿಟ್ಟುಕೊಂಡಿದ್ದೆನು. ಈಗ ನಿನ್ನ ಜವಾಬ್ದಾರಿಯನ್ನು ವಾಪಸು ಪರಿಗ್ರಹಿಸು. ಧರ್ಮದಿಂದ ನಡೆ. ಸದರಿ ಧರ್ಮವು ನಿನಗೆ ಜಗದೀಶ್ವರನ ಪ್ರಸನ್ನತೆಯನ್ನು ಉಂಟುಮಾಡುವುದು. ನಾನು ನನ್ನ ತಂದೆಯನ್ನು ಹುಡುಕುವ ಕೆಲಸಕ್ಕೆ ಬಂದು, ಸದರಿ ಕೆಲಸವನ್ನು ನಾನು ನನ್ನ ಮಾತೃಶ್ರೀಯವರಿಗೆ ಮಾಡಿರತಕ್ಕ ಪ್ರತಿಜ್ಞೆಯನ್ನು ಮರೆತು, ನಿಮ್ಮ ದೇಶದಲ್ಲಿ ಧರ್ಮಸಂಸ್ಥಾಪನೆಯನ್ನು ಮಾಡುವುದೂ ಕೂಡ ನನ್ನ ಕೆಲಸವೆಂದು ಭಾವಿಸಿ ನಿಲ್ಲಬೇಕಾಯಿತು. ದೈವಯೋಗದಿಂದ ನಿನಗೆ ಆರೋಗ್ಯವಾಯಿತು. ನನಗೆ ಹೋಗುವುದಕ್ಕೆ ಅಪ್ಪಣೆಯನ್ನು ಕೊಡು" ಈ ರೀತಿಯಲ್ಲಿ ಟೆಲಿಮಾಕಸ್ಸನು ಹೇಳಲು, ಫಿಲಾಂಥಸ್ಸನು ಅವನಿಗೆ ವಿಜ್ಞಾಪಿಸಿದ್ದೇನೆಂದರೆ:—

"ಎಲೈ ಟೆಲಿಮಾಕಸ್ಸನೇ, ನೀನು ಮಾಡಿದ ಅದ್ಭುತವಾದ ಕೆಲಸವನ್ನು ನೋಡಿದರೆ, ನನಗೆ ಬಹಳ ವಿಸ್ಮಯವಾಗುತ್ತದೆ. ನೀನು ಹೇಳಿದ ಮಾತುಗಳೆಲ್ಲಾ ನಿಜವಾದವುಗಳು. ನಿನ್ನ ಮಹಾನುಭಾವತೆಯನ್ನು ತಿಳಿದುಕೊಳ್ಳುವುದಕ್ಕೆ ನನ್ನ ಸಹೋದರನಿಗೆ ಶಕ್ತಿಯಿರಲಿಲ್ಲ. ನಿನಗೆ ಪ್ರತಿಕಕ್ಷಿಯಾದನು. ನೀನು ಅವನನ್ನು ಪ್ರೀತಿಸಿದಾಗ್ಯೂ, ನಿನ್ನನ್ನು ಅವನು ದ್ವೇಷಿಸಿದನು. ಈ ದ್ವೇಷಕ್ಕೆ ಪ್ರತಿಫಲವಾಯಿತು. ದುರಾತ್ಮನಾದ ಅಡ್ರಾಸ್ಟಸ್ಸನಿಂದ ಅವನು ಕೊಲ್ಲಲ್ಪಟ್ಟನು. ನಾನೂ ಕೂಡ ನಿನ್ನಲ್ಲಿ ಶತ್ರುತ್ವವನ್ನು ಮಾಡಿದೆನು. ಈ ಯುದ್ಧದಲ್ಲಿ ನನಗೆ ಪರಾಜಯವಾದದ್ದಲ್ಲದೆ, ಮೈಯೆಲ್ಲಾ ಘಾಯಗಳಾಗಿದ್ದುವು. ದೇಹವನ್ನು ಬಿಡುವುದಕ್ಕೆ ನಾನು ಸಿದ್ಧನಾಗಿದ್ದೆನು. ಈ ವೈದ್ಯರ ಚಿಕಿತ್ಸೆಯಿಂದಲೂ, ನಿನ್ನ ಸಹಾಯದಿಂದಲೂ ನಾನು ಬದುಕಿದೆನು. ನಿನಗೆ ನನ್ನ ಕೃತಜ್ಞತೆಯನ್ನು ಹೇಗೆ ತೋರಿಸಬೇಕೋ ಅದೂ ಕೂಡ ನನಗೆ ತಿಳಿಯದು. ನಿನ್ನ ಸಹವಾಸ ಸುಖವನ್ನೂ, ಪ್ರಯೋಜನವನ್ನೂ ಯಾವಜ್ಜೀವವೂ ಹೊಂದಬೇಕೆಂದು ನಾನು ಸಂಕಲ್ಪ ಮಾಡಿರುವೆನು. ಈ ಸಂಕಲ್ಪವು ನೆರವೇರುವಂತೆ ಮಾಡಿ, ನನ್ನನ್ನು ಕೃತಾರ್ಥನನ್ನಾಗಿ

ಮಾಡು. ನನ್ನ ದೇಶವನ್ನೂ, ಕೋಶವನ್ನೂ, ನನ್ನ ಪ್ರಾಣವನ್ನೂ, ಸರ್ವಸ್ವವನ್ನೂ ನಿನಗೆ ಒಪ್ಪಿಸಿದೇನೆ."

ಈ ರೀತಿಯಲ್ಲಿ ಫೆಲಾಂಥಸ್ಸನು ಹೇಳಲು, ಟಿಲಿಮಾಕಸ್ಸನು ಅವನಿಗೆ ಹೇಳಿದ್ದೇನೆಂದರೆ:—"ನೀನು ಮಿತ್ರಮಂಡಲಿಯ ಮುಖಂಡನಾಗಿ ಮಾಡತಕ್ಕ ಕೆಲಸಗಳು ಬಹಳವಾಗಿರುತ್ತವೆ. ಅದನ್ನು ಉದಾಸೀನ ಮಾಡುವುದು ನಿನಗೆ ಶ್ರೇಯಸ್ಕರವಲ್ಲ. ನಾನು ನನ್ನ ತಾಯಿಗೆ ಮಾಡಿರತಕ್ಕ ಪ್ರತಿಜ್ಞೆಯನ್ನು ಸಲ್ಲಿಸುವುದಕ್ಕೋಸ್ಕರ ಮಾಡತಕ್ಕ ಕೆಲಸಗಳು ಬಹಳವಾಗಿರುತ್ತವೆ. ಅವುಗಳನ್ನು ಮಾಡದಿದ್ದರೆ, ನಾನು ಮಾತೃದ್ರೋಹಿಯಾಗುತ್ತೇನೆ ಈ ಸಂದರ್ಭದಲ್ಲಿ ನಾವು ಇಬ್ಬರೂ ನಮ್ಮ ಕೆಲಸಗಳನ್ನು ಮಾಡಿ ಕೃತಾರ್ಥರಾಗಬೇಕು. ನಾವಿಬ್ಬರೂ ನಮ್ಮ ನಮ್ಮ ಕರ್ತವ್ಯಗಳನ್ನು ಮಾಡುವುದಕ್ಕೆ ಬೇರೆ ಬೇರೆ ಸ್ಥಳಗಳಲ್ಲಿ ಕೆಲಸಮಾಡಬೇಕಾಗಿರುವುದು. ನಿನ್ನ ಕೆಲಸವನ್ನು ನೀನು ಮಾಡು. ನನ್ನ ಕೆಲಸಗಳನ್ನು ಮಾಡುವುದಕ್ಕೆ ನಾನು ಹೋಗುತ್ತೇನೆ ನಮ್ಮ ಕರ್ತವ್ಯಗಳನ್ನು ಮಾಡುವುದಕ್ಕೆ ನಾವು ದೂರದಲ್ಲಿರಬೇಕಾದಾಗ್ಯೂ, ನಮ್ಮ ದೇಹಗಳು ಬೇರೆ ಬೇರೆ ದೇಶಗಳಲ್ಲಿ ಇದ್ದಾಗ್ಯೂ, ನಮ್ಮ ಮನಸ್ಸು ಒಂದಾಗಿರುವುದೇನಸಾಧ್ಯವಲ್ಲ. ಕಾಗದಪತ್ರಗಳ ಮೂಲಕ ನಾವು ಒಬ್ಬರಿಗೊಬ್ಬರು ಸಹಾಯಭೂತರಾಗಿರಬಹುದು. ನಾವು ಅವಲಂಬಿಸಿರತಕ್ಕ ಕೆಲಸಗಳು ಶೀಘ್ರದಲ್ಲಿಯೇ ಪೂರೈಸುವುವು ಅನಂತರ ಸಹವಾಸಸುಖವನ್ನು ನಾವು ಅನುಭವಿಸುವುದಕ್ಕೆ ಯಾವ ಪ್ರತಿಬಂಧಕವೂ ಇರುವುದಿಲ್ಲ. ನನ್ನ ಆಖೈರು ಪ್ರಾರ್ಥನೆಯು ಒಂದಿರುವುದು. ಅದು ಏನೆಂದರೆ, ಎಂಥಾ ಕಷ್ಟಕಾಲ ಬಂದಾಗ್ಯೂ ಸತ್ಯವನ್ನೂ, ಧರ್ಮವನ್ನೂ ನಾವು ಬಿಡಬಾರದು. ಈ ಸಂಕಲ್ಪಕ್ಕೆ ಯಾವ ಪ್ರತಿಬಂಧಕವೂ ಬರದಂತೆ ಮಾಡಿಕೊಂಡರೆ ನಾವು ಕೃತಾರ್ಥರಾಗುತ್ತೇವೆ" ಈ ರೀತಿಯಲ್ಲಿ ಟಿಲಿಮಾಕಸ್ಸನು ಹೇಳಲು, ಅದಕ್ಕೆ ಫಲಾಂಥಸ್ಸನು ಸಮ್ಮತಿಸಿದನು. ಅನೇಕ ವಿಧವಾದ ಸತ್ಕಾರಗಳನ್ನು ಅವನಿಗೆ ಮಾಡಿ ಅವನನ್ನು ಕಳುಹಿಸಿಕೊಟ್ಟನು.

---

# ಹದಿನೇಳನೆಯ ಅಧ್ಯಾಯ.

ಫೆಲಾಂಥಸ್ಸನ ಕರ್ತವ್ಯವನ್ನು ಅವನಿಗೆ ತಿಳಿಸಿ, ಅವನ ಅಪ್ಪಣೆಯನ್ನು ತೆಗೆದು ಕೊಂಡು ಟೆಲಿಮಾಕಸ್ಸನು ತನ್ನ ತಂದೆಯು ಎಲ್ಲಿರುವನೋ ಅದನ್ನು ಗೊತ್ತುಮಾಡುವುದಕ್ಕೋಸ್ಕರ ಹೊರಡುವುದಕ್ಕೆ ಸಿದ್ಧನಾದನು. ಯುದ್ಧದಲ್ಲಿ ಪರಾಜಿತನಾದ ಅಡ್ರೇಸ್ಟಸ್ಸನು ಔಲೆ ಬೆಟ್ಟದ ತಪ್ಪಲಿಗೆ ಹೋಗಿ, ತಾನು ನಿರೀಕ್ಷಿಸುತ್ತಿದ್ದ ಉಪಸೈನ್ಯಗಳನ್ನು ಎದುರುನೋಡುತ್ತಿದ್ದನು. ಟೆಲಿಮಾಕಸ್ಸನು ಪ್ರಯಾಣ ಮಾಡುವುದಕ್ಕೆ ಮುಂಚೆ ಫೆಲಾಂಥಸ್ಸನ ಸೈನ್ಯದಲ್ಲಿ ಐಕಮತ್ಯವೂ, ಉತ್ಸಾಹವೂ, ದೇಶಾಭಿಮಾನವೂ ಪರಿಪೂರ್ಣವಾಗಿರುವಂತೆ ಮಾಡಿ, ಮಾರನೇ ದಿವಸ ಪ್ರಯಾಣ ಮಾಡುವುದಕ್ಕೆ ತನ್ನ ಹಡಗಿನ ಎಜಮಾನನಿಗೆ ಸಿದ್ಧಮಾಡಿಕೊಳ್ಳಬೇಕೆಂದು ಅಜ್ಞೆ ಮಾಡಿದನು. ಆ ರಾತ್ರೆ ಇವನಿಗೆ ದುಸ್ವಪ್ನಗಳಾದವು. ಯೂಲಿಸಸ್ಸನು ಸ್ವರ್ಗಸ್ಥನಾದಂತೆ ಸ್ವಪ್ನವಾಯಿತು. ಬಹಳ ವಿಷಾದದಿಂದ ಎಚ್ಚರವನ್ನು ಹೊಂದಿ, "ನನ್ನ ತಂದೆಯನ್ನು ಈ ವರ್ಷವು ಪೂರೈಸು ವುದರೊಳಗಾಗಿ ಕರೆದುಕೊಂಡು ಬರುವೆನೆಂದು ನಾನು ಹೇಳಿದೆನು. ಈ ಸ್ವಪ್ನವು ನಿಜವಾದ ಪಕ್ಷದಲ್ಲಿ, ನಮ್ಮ ತಾಯಿ ಗತಿಯೇನು ? ಪಾತಿವ್ರತ್ಯಭಂಗವಾಗುವುದಾದರೆ, ನಿಮಿಷಾರ್ಧದಲ್ಲಿ ಪ್ರಾಣ ಬಿಡುವುದಕ್ಕೆ ಸಾಧಕವಾದ ವಿಷವನ್ನು ಅವಳು ಇಟ್ಟುಕೊಂಡಿರುವಳು. ಮಹಾತ್ಮರಾದ ಮಾತಾಪಿತೃಗಳನ್ನು ಕಳೆದುಕೊಂಡು ಬದುಕುವುದು ಹೇಗೆ ? ಚಿಕ್ಕ ವಯಸ್ಸಿನಲ್ಲಿಯೇ ನನ್ನನ್ನು ಬಿಟ್ಟು, ತಂದೆಯು ಟ್ರಾಯ್ ಯುದ್ಧಕ್ಕೆ ಹೊರಟು ಹೋದನು. ಅದು ಮೊದಲುಗೊಂಡು ಅವನ ಮಾರ್ಗವನ್ನೇ ಅನುಸರಿಸಿ ಸಂಚಾರ ಮಾಡುತ್ತಲಿದೇನೆ. ನನ್ನ ಇಷ್ಟಾರ್ಥಸಿದ್ಧಿಯು ಆಗುವುದೋ ಇಲ್ಲವೋ ಎಂಬ ಸಂದೇಹವು ಈಗ ನನಗೆ ಉಂಟಾಗಿದೆ. ಮುಂದೆ ಬರತಕ್ಕ ವಿಪತ್ತುಗಳು ಸ್ವಪ್ನದಲ್ಲಿ ತೋರುವುದೂ ಉಂಟು ಸ್ವಪ್ನಗಳು ಸುಳ್ಳಾಗುವುದೂ ಉಂಟು. ಅದು ಹೇಗಾದರೂ ಇರಲಿ. ವಾಸ್ತವಾಂಶವು ಗೊತ್ತಾಗುವವರೆಗೂ ನನ್ನ ತಂದೆಯು ಬದುಕಿರುವನೆಂಬ ಪ್ರತ್ಯಯದಿಂದಲೇ ನಾನು ಕೆಲಸ ಮಾಡಬೇಕು. ಅವನು ಬದುಕಿದ್ದರೆ ಅವನ ದರ್ಶನ ಸುಖವನ್ನು ಹೊಂದುವೆನು ಅವನನ್ನು ಕರೆದು ಕೊಂಡು ಹೋಗಿ, ಶತ್ರುಗಳನ್ನು ನಿಗ್ರಹಿಸಿ, ನಮ್ಮ ತಾಯಿಗೆ ಸಂತೋಷವನ್ನು ಉಂಟುಮಾಡುವೆನು. ಅವನು ಕಾಲಾಧೀನನಾಗಿದ್ದರೆ ಇಥಾಕಾ ಪಟ್ಟಣಕ್ಕೆ

ಹಿಂತಿರುಗಿ ಶತ್ರುಗಳೊಡನೆ ಯುದ್ಧಮಾಡಿ, ಅವರನ್ನು ಓಡಿಸಿ, ನಮ್ಮ ತಾಯಿಗೆ ಅಭಯವನ್ನುಂಟುಮಾಡುವೆನು. ಇದು ಅಸಾಧ್ಯವಲ್ಲ. ನಮ್ಮ ತಾಯಿಗೂ, ನನಗೂ ದೈವಬಲವಿರುವುದು. ನಾವು ಮನೋವಾಕ್ಕರ್ಮಗಳಲ್ಲಿ ಪರಿಶುದ್ಧರಾಗಿ ರುವೆವು. ದೇವರ ದಯೆಯು ನಮಗೆಂದಿಗೂ ತಪ್ಪುವುದಿಲ್ಲ. ಪತಿವ್ರತಾ ಶಿರೋಮಣಿಗಳ ಕಣ್ಣೀರು ಒಂದು ತೊಟ್ಟು ನೆಲಕ್ಕೆ ಬಿದ್ದಾಗ್ಯೂ, ಅದು ಹಾಗೆ ನೆಲಕ್ಕೆ ಬೀಳುವಂತೆ ಮಾಡಿದವರನ್ನು ಮಾತ್ರವೇ ಅಲ್ಲದೆ, ಅವರ ದೇಶವನ್ನೂ, ಅವರ ಕೋಶವನ್ನೂ, ಅವರ ಪುತ್ರಮಿತ್ರಕಳತ್ರಾದಿಗಳನ್ನೂ, ಅವರ ಸರ್ವಸ್ವವನ್ನೂ ಸುಟ್ಟು ಬೂದಿ ಮಾಡುವುದು. ಇದರಲ್ಲಿ ನನಗೆ ಪರಿಪೂರ್ಣವಾದ ನಂಬಿಕೆಯು ಇರುವುದು. ನಮ್ಮ ತಂದೆಯು ಸತ್ತಿರುವುದಿಲ್ಲ. ನಮ್ಮ ಶತ್ರುಗಳಿಗೆ ಜಯ ವಾಗುವುದಿಲ್ಲ. ಪರಿಣಾಮದಲ್ಲಿ ನಾವೇ ಜಯಶೀಲರಾಗುವೆವು ದೇವರ ಸಂಕ ಲ್ಪವೂ ಹೀಗೆಯೇ ಇರಬೇಕು. ಇದನ್ನು ಪರೀಕ್ಷಿಸುತ್ತೇನೆ. ನಮ್ಮ ತಂದೆಯು ಮೂರು ಲೋಕಗಳಲ್ಲೆಲ್ಲಿದ್ದಾಗ್ಯೂ ಅದನ್ನು ಗೊತ್ತುಮಾಡುತ್ತೇನೆ."

ಈ ರೀತಿಯಲ್ಲಿ ಸಂಕಲ್ಪ ಮಾಡಿ, ತಂದೆಯನ್ನು ಹುಡುಕುವುದಕ್ಕೆ ಹೊರ ಟನು. ಭೂಮಿಯ ಮೇಲೆ ಎಲ್ಲಾ ದೇಶಗಳನ್ನೂ ತಿರುಗಿದನು. ಅವನು ಎಲ್ಲಿ ಯೂ ಸಿಕ್ಕಲಿಲ್ಲ. ದೇಹವನ್ನು ಬಿಟ್ಟು ನರಕವನ್ನಾಗಲಿ, ಸ್ವರ್ಗವನ್ನಾಗಲಿ ಪ್ರವೇ ಶಿಸಿರುವನೋ ಏನೋ ಎಂಬ ಸಂದೇಹ ಉಂಟಾಯಿತು. ಯಮಧರ್ಮನನ್ನು ಕು ರಿತು ತಪಸ್ಸು ಮಾಡಿ, ಅವನ ಪ್ರಸನ್ನತೆಯ ಮಹಿಮೆಯಿಂದ ನರಕವನ್ನು ಪ್ರವೇಶ ಮಾಡಿದನು. ಈ ನರಕವು ಎಲ್ಲಿ ನೋಡಿದಾಗ್ಯೂ ತಮೋಮಯವಾಗಿತ್ತು. ಕಪ್ಪ ಗಿರತಕ್ಕ ನೀರುಳ್ಳ ಒಂದು ದೊಡ್ಡ ನದಿಯು ಈ ಪ್ರಾಂತ್ಯದಲ್ಲಿ ಹರಿಯುತ್ತಿತ್ತು. ಒಂದು ದೊಡ್ಡ ಪರ್ವತಾಗ್ರದಲ್ಲಿ ಯಮಪುರಿಯು ಕಟ್ಟಲ್ಪಟ್ಟಿತ್ತು. ಈ ಪರ್ವತದ ತಪ್ಪಲಲ್ಲಿ ದುಷ್ಪ್ರವೇಶವುಳ್ಳ ಒಂದು ಗುಹೆಯು ಇತ್ತು. ಈ ಗುಹೆಯೊಳಗೆ ಹೋಗುವುದಕ್ಕೆ ಜನಗಳು ಹೆದರುತ್ತಿದ್ದರು. ತಿರ್ಯಗ್ಜಂತುಗಳೂ ಕೂಡ ಈ ಗುಹೆಯ ಬಳಿಗೆ ಹೋಗುತ್ತಿರಲಿಲ್ಲ. ಈ ಗುಹೆಯಿಂದ ಗಂಧಕದ ವಾಸನೆಯುಳ್ಳ ಹೊಗೆಯು ಮೇಲಕ್ಕೇಳುತ್ತಿತ್ತು. ಇದರ ಸಮೀಪದಲ್ಲಿ ಯಾವ ಗಿಡಗಳೂ ಬೆಳೆದಿ ರಲಿಲ್ಲ. ಗರಿಕೆಯೂ ಕೂಡ ಎಲ್ಲಿಯೂ ದೃಷ್ಟಿಪಥಕ್ಕೆ ಬೀಳುತ್ತಿರಲಿಲ್ಲ. ಈ ಪ್ರಾಂತ್ಯವೆಲ್ಲಾ ಭಯಂಕರವಾದ ಸ್ಮಶಾನದಂತೆ ಕಾಣುತ್ತಿತ್ತು. ದವಸವನ್ನು ಬೆಳೆಯತಕ್ಕ ಪೈರುಗಳಾಗಲಿ, ದ್ರಾಕ್ಷಿಯನ್ನು ಬೆಳೆಯತಕ್ಕ ಬಳ್ಳಿಗಳಾಗಲಿ, ಫಲ

ಗಳನ್ನು ಬಿಡತಕ್ಕ ಗಿಡಗಳಾಗಲಿ ಎಲ್ಲಿಯೂ ಕಾಣಬರಲಿಲ್ಲ. ನದೀನದಿಗಳ ಅಧಿದೇವತೆಗಳು ರೋದನವನ್ನು ಮಾಡುವಂತೆ ದಶದಿಕ್ಕುಗಳಿಂದಲೂ ಆರ್ತಸ್ವರಗಳು ಬರುತ್ತಿದ್ದವು. ನೆಲದ ಮೇಲೆ ಮುಳ್ಳುಗಳು ಬೇಕಾದಹಾಗಿದ್ದವು. ಆದರೆ ಮುಳ್ಳಿನ ಗಿಡಗಳೆಲ್ಲೂ ಕಾಣಬರಲಿಲ್ಲ. ಒಣಗಿದ ಮರಗಳಿದ್ದವು. ಯಾವುದರಲ್ಲಿಯೂ ಎಲೆಗಳೂ, ಪುಷ್ಪಗಳೂ, ಫಲಗಳೂ ಇರಲಿಲ್ಲ. ಅದು ಘೋರಾರಣ್ಯದಂತೆ ಕಾಣುತ್ತಿತ್ತು. ಮನೋಹರವಾಗಿ ಗಾನಮಾಡುವ ಪಕ್ಷಿಗಳ್ಯಾವುವೂ ಇರಲಿಲ್ಲ. ರಣಹದ್ದುಗಳೂ, ಗೂಬೆಗಳೂ ಎಲ್ಲೆಲ್ಲಿಯೂ ಹಾರುತ್ತಲೂ, ಭಯಂಕರವಾದ ಶಬ್ದಗಳನ್ನು ಮಾಡುತ್ತಲೂ ಇದ್ದವು. ಈ ಗುಹೆಯಿಂದ ಬರತಕ್ಕ ಹೊಗೆಯು ಮೇಘಗಳಂತೆ 9 ದಿಕ್ಕುಗಳನ್ನೂ ಆವರಿಸಿಕೊಂಡಿದ್ದವು ಯಮನನ್ನೂ, ಅವನ ದೂತರನ್ನೂ ಪ್ರಸನ್ನರಾಗಿ ಮಾಡಿಕೊಳ್ಳುವುದಕ್ಕೆ ಅನೇಕ ಬಲಿಗಳು ಕೊಡಲ್ಪಡುತ್ತಿದ್ದವು.

ಮಿನರ್ವಳ ಆಶೀರ್ವಾದ ಬಲದಿಂದ ಯಮದೂತರಿಂದಲೂ, ಅಲ್ಲಿಗೆ ಬರತಕ್ಕವರನ್ನು ಹಿಂಸಿಸುವ ದುಷ್ಟಜಂತುಗಳಿಂದಲೂ ಟೆಲಿಮಾಕಸ್ಸನಿಗೆ ಯಾವ ಬಾಧಕವೂ ಆಗಲಿಲ್ಲ. ಜಗದೀಶ್ವರನಾದ ಜೂಪಿಟರನು ಟೆಲಿಮಾಕಸ್ಸನಿಗೆ ಯಾವ ಬಾಧೆಯೂ ಆಗದಂತೆ ನರಕವನ್ನು ತೋರಿಸುವುದಕ್ಕೆ ತನ್ನ ದೂತನಾದ ಮರ್ಕ್ಯುರಿಯನ್ನು ಕಳುಹಿಸಿದ್ದನು. ಆತನು ಜ್ಯೂಪಿಟರನ ಅಭಿಪ್ರಾಯವನ್ನು ತಿಳಿಸಲು, ನರಕದ ವಿದ್ಯಮಾನ್ಯಗಳನ್ನೆಲ್ಲಾ ಟೆಲಿಮಾಕಸ್ಸನಿಗೆ ತಿಳಿಸುವುದಕ್ಕೆ ಏರ್ಪಾಡು ಮಾಡಿದನು. ಪ್ರಥಮತಃ ಈ ಟೆಲಿಮಾಕಸ್ಸನು ಪತಿವ್ರತೆಯಾದ ದಯಾನ್ನಳ ಬಳಿಗೂ, ಪ್ರಸಿದ್ಧಳಾದ, ಭಯಂಕರಳಾದ ಹೆಕೆಟಿಯ ಬಳಿಗೂ ಹೋಗಿ, ಅವರಿಗೆ ವಂದನೆಯನ್ನು ಮಾಡಿದನು. ಅವರಿಬ್ಬರೂ ಇವನಲ್ಲಿ ಪ್ರಸನ್ನರಾಗಿ,, ಇವನ ಇಷ್ಟಾರ್ಥಸಿದ್ಧಿಯಾಗಲೆಂದು ಹರಸಿದರು. ಅಲ್ಲಿಂದ ಅವನು ಆ ಗುಹೆಯ ಬಳಿಗೆ ಹೋದನು. ಗುಹೆಯು ಅಂತರ್ಗತವಾದ ಪ್ರಳಯಾಗ್ನಿಯ ರಭಸದಿಂದ ಆ ಪ್ರಾಂತ್ಯವೆಲ್ಲಾ ನಡುಗುತ್ತಿತ್ತು. ಬೆಂಕಿಯ ಮಳೆಯು ದೇಹದ ಮೇಲೆ ಸುರಿದಂತಾಯಿತು. ಆದರೂ ಟೆಲಿಮಾಕಸ್ಸನು ಧೈರ್ಯವನ್ನು ತಂದುಕೊಂಡು ಆಕಾಶದ ಕಡೆಗೆ ತಿರುಗಿ "ಎಲೈ ಜಗದೀಶ್ವರನೇ, ಭೂಮಿಯಲ್ಲಿರತಕ್ಕವರಿಗೆ ದುಷ್ಟನಿಗ್ರಹ, ಶಿಷ್ಟಪರಿಪಾಲನೆಯಲ್ಲಿ ನಿನಗಿರುವ ಸ್ಥಿರಸಂಕಲ್ಪವು ಯಾರಿಗೂ ಗೊತ್ತಾಗುವುದಿಲ್ಲ. ಅವರವರ ಕರ್ಮಗಳಿಗನುಸಾರವಾದ ಫಲವನ್ನು ನೀನು ಕೊಡುವಿ ಎಂಬುದು ನಾನು ಬಲ್ಲೆನು. ಆದರೆ ಈ ಗುಹೆಯಲ್ಲಿ ಆಗತಕ್ಕ ಶಬ್ದವನ್ನು ನೋಡಿ

ದರೆ, ಕೋಟ್ಯಂತರ ಸಿಡಿಲುಗಳ ಶಬ್ದವನ್ನೂ ಕೂಡ ಇದು ಮೀರಿಸಿರುವುದು. ಈ ನರಕದ ಜ್ವಾಲೆಯಿಂದ ಹೊರಟ ಹೊಗೆಯು ಈ ನರಕವು ಕತ್ತಲೆಯಾಗಿರುವಂತೆ ಮಾಡಿರುವುದು. ಈ ಜ್ವಾಲೆಯು ಎಷ್ಟು ಭಯಂಕರವಾದದ್ದೋ ಅದನ್ನು ಊಹಿಸುವುದು ಸಾಧ್ಯವೇ ಹೊರತು, ವರ್ಣಿಸುವುದಸಾಧ್ಯ. ಅತ್ಯಂತ ದುಷ್ಟವಾದ ಪಾಪಗಳನ್ನು ಮಾಡಿದನರು ಈ ಭಯಂಕರವಾದ ಅಗ್ನಿಯಲ್ಲಿ ಹಾಕಲ್ಪಡುವರೆಂದು ತಿಳಿಯಬರುತ್ತದೆ. ಪಾಪಿಷ್ಠರಾದನರಿಗೆ ಈ ನರಕ ದರ್ಶನವನ್ನು ಮಾಡಿಸಿದರೆ, ಮುಂದೆ ಅವರೆಂದಿಗೂ ಪಾಪವನ್ನು ಮಾಡಲಾರರೆಂದು ತೋರುತ್ತದೆ. ''

ಹೀಗೆ ತನ್ನಲ್ಲಿ ತಾನೇ ಅಂದುಕೊಂಡು, ಈ ಭಯಂಕರವಾದ ಗುಹೆಯನ್ನು ಪ್ರವೇಶಿಸಬೇಕೆಂದು ಸಂಕಲ್ಪ ಮಾಡಿದನು. ಕ್ರೀಟ್ ದೇಶದಿಂದ ಇಬ್ಬರು ಭೃತ್ಯರು ಇವನ ಜತೆಯಲ್ಲಿ ಬಂದಿದ್ದರು. ಅವರು ಬಹಳ ಧೈರ್ಯಶಾಲಿಗಳು. ಸಿಂಹ ಶಾರ್ದೂಲಗಳೇ ಮೊದಲಾದ ಯಾವ ದುಷ್ಟ ಜಂತುಗಳಿಗೂ ಇವರು ಹೆದರುತ್ತಿರ ಲಿಲ್ಲ. "ಈ ಗುಹೆಯನ್ನು ಪ್ರವೇಶಿಸುತ್ತೇನೆ, ಧೈರ್ಯವಿದ್ದರೆ ನೀವೂ ಬರಬಹುದು '' ಎಂದು ಅವರಿಗೆ ಟೆಲಿಮಾಕಸ್ಸನು ಹೇಳಿದನು. ಕೂಡಲೆ ಅವರ ಮುಖವು ಬಾಣಂತಿಯ ಮುಖದಂತೆ ಬೆಳ್ಳಗಾಯಿತು. ದೇಹದಿಂದಲೆಲ್ಲಾ ಬೆವರು ಸುರಿಯುವುದಕ್ಕುಪಕ್ರಮವಾಯಿತು. ನಡಗುವುದಕ್ಕುಪಕ್ರಮಿಸಿದರು. ಈ ಗುಹೆಯನ್ನು ಪ್ರವೇಶಿಸಿದವರು ಪ್ರಳಯಾಗ್ನಿಯಲ್ಲಿ ದಗ್ಧರಾಗಿ, ಭಸ್ಮವಾಗುವರೇ ಹೊರತು, ಹಿಂತಿರುಗುವುದು ಅಸಾಧ್ಯವೆಂದು ಅವರು ಗೊತ್ತುಮಾಡಿಕೊಂಡರು. 'ಮಾಡಿದ ಸಂಕಲ್ಪದಂತೆ ಟೆಲಿಮಾಕಸ್ಸನು ನಡೆಯುವನು. ಅವನ ಜತೆಯಲ್ಲಿ ಧೈರ್ಯವಾಗಿ ಹೋಗುವುದು ಉತ್ತಮವೇ? ಹಿಂದುಳಿಯುವುದು ಉತ್ತಮವೇ' ಎಂದು ಅವರು ಪರ್ಯಾಲೋಚಿಸುವುದಕ್ಕೆ ಉಪಕ್ರಮಿಸಿದರು ಟೆಲಿಮಾಕಸ್ಸನು "ಬೇಕಾದರೆ ಬರಲಿ, ಬೇಡದಿದ್ದರೆ ಹಿಂದಿರುಗಲಿ'' ಎಂದು ನಿಷ್ಕರ್ಷೆ ಮಾಡಿ ಒರೆಯಿಂದ ಕತ್ತಿಯನ್ನು ಹಿರಿದು ಗುಹೆಯೊಳಕ್ಕೆ ನುಗ್ಗಿದನು. ಮೊದಲು ಹೊಗೆಯಿಂದ ಮುಚ್ಚಲ್ಪಟ್ಟ ಒಂದು ಬೆಳಕು ಕಾಣಬಂತು ಭೂತಪ್ರೇತಗಳು ಇವನೆದುರಿಗೆ ಬಂದವು. ತನ್ನ ಕತ್ತಿಯಿಂದ ಅವುಗಳನ್ನು ಸಂಹರಿಸುವುಕ್ಕೆ ಪ್ರಯತ್ನ ಮಾಡಲು, ಅವುಗಳು ದಾರಿಯನ್ನು ಬಿಟ್ಟವು. ಸ್ವಲ್ಪ ದೂರ ಹೋದ ಮೇಲೆ ಯಮಲೋಕದ ಯಾತನೆಯಿಂದ ಪಾಪಿಷ್ಠರ ಕಣ್ಣೀರುಗಳು ನದಿಯಂತೆ ಪ್ರವಹಿಸುತ್ತಿದ್ದವು ಈ ನದಿಗೆ 'ಸ್ಟಿಕ್ಸ್' ಎಂಬದಾಗಿ ಹೆಸರು. ಈ ನದಿಯ ಪ್ರವಾಹದಲ್ಲಿ ಭಯಂಕರವಾದ ಸುಳಿಗಳು

ಇವನ ದೃಷ್ಟಿಪಥಕ್ಕೆ ಬಿದ್ದವು. ಈ ನದಿಯ ನೀರು ಉರಿಯುತಕ್ಕ ಬೆಂಕಿಗೆ ಸಮಾನವಾಗಿದ್ದಿತು. ಪಾಪಿಷ್ಠರಾಗಿದ್ದು ದೇಹವನ್ನು ಬಿಟ್ಟವರು ಈ ಸುಳಿಗಳಲ್ಲಿ ಅನಿರ್ವಚನೀಯವಾದ ಯಾತನೆಗಳನ್ನು ಅನುಭವಿಸುತ್ತಿದ್ದರು. ಅವರವರ ಪಾಪಗಳಿಗನುರೂಪವಾದ ಶಿಕ್ಷೆಯು ಪೂರೈಸಿದ ಮೇಲೆ ದೋಣಿಗಳಲ್ಲಿ ಅವರನ್ನು ದಡಕ್ಕೆ ಸೇರಿಸಿ ಚಿಕಿತ್ಸೆಗಳಿಂದ ಸುಟ್ಟುಹೋಗಿದ್ದ ಶರೀರವನ್ನು ಪೂರ್ವದ ಸ್ಥಿತಿಗೆ ತರುವುದಕ್ಕೆ ಆಸ್ಪತ್ರೆಯ ಏರ್ಪಾಡುಗಳು ಮಾಡಲ್ಪಟ್ಟಿದ್ದವು. ಯಾತನೆಯಿಂದ ಸಂಕಟಪಡುತ್ತಿರುವ ಜನಗಳ ಹಿಂಸೆಯನ್ನು ನೋಡಿ, ಟೆಲಿಮಾಕಸ್ಸನ ಮನಸ್ಸು ವಿಶೇಷವಾಗಿ ತಲ್ಲಣಿಸಿತು. ಬಹಳ ದುಃಖಪಡುತ್ತಿದ್ದ ಒಬ್ಬ ಮನುಷ್ಯನ ಲಿಂಗಶರೀರವನ್ನು ನೋಡಿ, ಈ ದುಸ್ಸಹವಾದ ಯಾತನೆಯನ್ನು ಪಡುವುದಕ್ಕೆ ಕಾರಣವೇನು ? "ನೀನು ಯಾವ ಪಾಪವನ್ನು ಮಾಡಿ ಈ ಅವಸ್ಥೆಗೆ ಬಂದೆ" ಎಂಬದಾಗಿ ಟೆಲಿಮಾಕಸ್ಸನು ಅವನನ್ನು ಕೇಳಿದನು. ಅದಕ್ಕವನು ಹೇಳಿದ್ದೇನಂದರೆ:—"ನಾನು ಬ್ಯಾಬಿಲನ್ ಚಕ್ರಾಧಿಪತ್ಯದ ಚಕ್ರವರ್ತಿಯಾಗಿದ್ದೆನು. "ನಾಬೋಫರ್ಜನ್" ಎಂಬದಾಗಿ ನನ್ನ ಹೆಸರು. ನನ್ನ ಹೆಸರನ್ನು ಹೇಳಿದ ಮಾತ್ರದಿಂದಲೇ ಪ್ರಪಂಚದ ಎಲ್ಲಾ ಜನಗಳೂ ಭಯದಿಂದ ನಡುಗುತ್ತಿದ್ದರು. ಬ್ಯಾಬಿಲನ್ನಿನ ಮಹಾಜನಗಳೆಲ್ಲರೂ ನಾನೇ ಜಗದೀಶ್ವರನಾಗಿದ್ದರೆ ಹೇಗೋ ಹಾಗೆ ನನ್ನನ್ನು ಪೂಜಿಸುತ್ತಿದ್ದರು. ನನ್ನಂತೆ ಚಿನ್ನದ ವಿಗ್ರಹಗಳನ್ನು ಮಾಡಿ, ಇಥಿಯೋಪಿಯಾ ದೇಶದಲ್ಲಿ ಧೂಪದೀಪ ನೈವೇದ್ಯಾದಿಗಳಿಂದ ನನ್ನನ್ನು ಪೂಜಿಸುತ್ತಿದ್ದರು. ನನ್ನ ಮಾತಿಗೆ ಯಾರೂ ಪ್ರತಿ ಹೇಳುತ್ತಿರಲಿಲ್ಲ. ಪ್ರತಿಭಟಿಸಿದವರನ್ನು ನಾನು ಕಲ್ಲುಗಾಣಕ್ಕೆ ಹಾಕಿ ಅರೆಸಿಬಿಡುತ್ತಿದ್ದೆನು. ಸರ್ವರೂ ನನ್ನ ಕಿವಿಗೂ, ಮನಸ್ಸಿಗೂ ಇಂಪಾಗುವಂತೆ ಸ್ತುತಿಸುತ್ತಿದ್ದರು. ಅಸಾಧಾರಣವಾದ ಆರೋಗ್ಯವೂ, ಅತ್ಯುತ್ಕಟವಾದ ಪ್ರಾಯವೂ ಕುಬೇರನ ಸಂಪತ್ತೂ, ದೇವೇಂದ್ರನ ವೈಭವವೂ ನನಗೆ ಹಸ್ತಗತವಾಗಿತ್ತು. ಒಬ್ಬ ಸುಂದರಿಯನ್ನು ನಾನು ಪ್ರೀತಿಸಿದೆನು. ಅವಳಿಗೆ ನನ್ನಲ್ಲಿ ಪ್ರೀತಿಯು ಇರಲಿಲ್ಲ. ನನ್ನಲ್ಲಿ ಪ್ರೀತಿ ಇರುವಂತೆ ಅಭಿನಯಿಸಿ, ಅವಳು ನನಗೆ ವಿಷಪ್ರಯೋಗವನ್ನು ಮಾಡಿದಳು. ನಿನ್ನೇ ದಿವಸ ನನ್ನ ಶರೀರವು ದಹನಮಾಡಲ್ಪಟ್ಟಿತು. ನನ್ನಲ್ಲಿ ಅನುರಕ್ತರಾಗಿದ್ದವರೆಲ್ಲಾ ಅಳುತ್ತಾ, ನನ್ನ ಚಿತಿಯಲ್ಲಿಯೇ ಬಿದ್ದು ಸಾಯಬೇಕೆಂದು ಪ್ರಯತ್ನವನ್ನು ಮಾಡಿದರು. ನನಗೆ ಒಂದು ದೊಡ್ಡ ಗೋರಿಯನ್ನು ಕಟ್ಟಿ, ಅಲ್ಲಿ ನನ್ನ ಮೂಳೆಗಳನ್ನು ಹೂತು ಒಂದು ಬೃಂದಾವನವನ್ನು ಏರ್ಪಡಿಸಿರುವರು. ನನ್ನ

ಲ್ಲಿ ಅನುರಕ್ತರಾದವರು ಲಕ್ಷಕ್ಕೆ ಒಬ್ಬರಿದ್ದರೆ ಇರಬಹುದು. ನಾನು ದೇಹವನ್ನು ಬಿಟ್ಟದ್ದರಿಂದ ಅರಿಷ್ಟನಿವಾರಣೆಯಾಯಿತೆಂದು ಉಳಿದವರೆಲ್ಲರೂ ತಿಳಿದುಕೊಂಡಿರುವರು. ನನ್ನ ಪುತ್ರಮಿತ್ರಕಳತ್ರಾದಿಗಳೂ ಕೂಡ ನನ್ನ ಅಕಾಲಮರಣಕ್ಕೋಸ್ಕರ ವ್ಯಸನಪಡುತ್ತಲಿಲ್ಲ. ಐಶ್ವರ್ಯಮದದಿಂದಲೂ, ಅಧಿಕಾರಮದದಿಂದಲೂ ಕೊಬ್ಬಿ ಮಾಡಬಾರದ ಕೆಲಸಗಳನ್ನು ಮಾಡುತ್ತೇವೆ. ಮೋಹಪರವಶರಾಗಿರುವಾಗ ನಮ್ಮ ಪಾಪಗಳ ಪರಿಣಾಮ ಫಲವನ್ನು ತಿಳಿದುಕೊಳ್ಳುವುದಕ್ಕೆ ನಮಗೆ ಶಕ್ತಿ ಇರುವುದಿಲ್ಲ. ಕೆಟ್ಟ ಮೇಲೆ ಬುದ್ಧಿಯು ಬರುವುದು. ಅದರಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಪದವಿಯು ಎಷ್ಟು ದೊಡ್ಡದಾದರೆ ಅಷ್ಟು ದೊಡ್ಡ ಪುಣ್ಯಪಾಪಗಳನ್ನು ಮಾಡುವುದಕ್ಕೆ ಅದು ಸಾಧಕವಾಗುತ್ತದೆ. ದೊಡ್ಡ ಪುಣ್ಯಕ್ಕೆ ದೊಡ್ಡ ಫಲವು ಬರುವುದು. ದೊಡ್ಡ ಪಾಪಕ್ಕೆ ದೊಡ್ಡ ಶಿಕ್ಷೆಯು ಆಗುವುದು. ಚಕ್ರವರ್ತಿಯಾಗಿ ಅದ್ವಿತೀಯವಾದ ಪದವಿಗೆ ಬಂದು, ಅದ್ವಿತೀಯವಾದ ಪಾಪಗಳನ್ನು ಮಾಡಿ, ಅತ್ಯಂತ ದುಸ್ಸಹವಾದ ಪಾಪಫಲವನ್ನು ನಾನು ಅನುಭವಿಸಬೇಕಾಗಿ ಇರುವುದು. ಪ್ರಭುಪದವಿಯು ಲೇಶವೂ ಅಪೇಕ್ಷಣೀಯವಾದದ್ದಲ್ಲ. ಗೃಹಸ್ಥರಾದವರು ತಮ್ಮ ಕುಟುಂಬಕ್ಕೆ ಸೇರಿದ ಜನಗಳ ಯೋಗಕ್ಷೇಮಚಿಂತೆಯನ್ನು ಮಾಡುವುದರಲ್ಲಿ ಶ್ರದ್ಧೆಯಿಂದ ಕೆಲಸ ಮಾಡಿದರೆ ಸಾಕು. ಅವರ ಜವಾಬ್ದಾರಿಯನ್ನು ನಿರ್ವಹಿಸಿ ಕೃತಕೃತ್ಯರಾಗಬಹುದು. ಪ್ರಭುವಿನ ಜವಾಬ್ದಾರಿಯು ಇಂಥಾದ್ದಲ್ಲ. ಕೋಟ್ಯಂತರ ಪ್ರಜೆಗಳ ಯೋಗಕ್ಷೇಮಚಿಂತೆಯು ಪ್ರಭುವಿಗೆ ಸೇರಿದ್ದು. ಅದರಲ್ಲಾಗತಕ್ಕ ನ್ಯೂನಾತಿರಿಕ್ತಗಳಿಗೆ ಅವನು ಉತ್ತರವಾದಿಯಾಗಿರಬೇಕು. ಮನು ಮಾಂಧಾತರೇ ಮೊದಲಾದವರಂತೆ ಲೋಕಸೇವೆಗೋಸ್ಕರ ಆತ್ಮಯಜ್ಞವನ್ನು ಮಾಡಿಕೊಳ್ಳಬೇಕು. ಪ್ರಜೆಗಳು ಕೊಡತಕ್ಕ ಕಂದಾಯಕ್ಕೆ ಸರಿಯಾದ ಪ್ರತಿಫಲವು ಅವರಿಗೆ ಬರುವಂತೆ ಮಾಡಬೇಕು. ಪ್ರಜೆಗಳ ಕ್ಷೇಮಕ್ಕೋಸ್ಕರ ಪ್ರಭುವು ಬದುಕಿರಬೇಕು. ತನ್ನ ಸುಖಕ್ಕೋಸ್ಕರ ಪ್ರಜೆಗಳಿರುವರೆಂದು ತಿಳಿದುಕೊಂಡು ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ವರ್ಷೋತ್ಸವಗಳಲ್ಲಿ ವಿನೋದವಾಗಿ ಕಾಲಹರಣ ಮಾಡುತ್ತಾ, ಪ್ರಜೆಗಳ ಕ್ಷೇಮಾರ್ಥವಾಗಿ ಮಾಡಬೇಕಾದ ಕೆಲಸಗಳಲ್ಲಿ ಯಾರು ಉದಾಸೀನರಾಗಿರುವರೋ ಅವರ ನ್ಯೂನಾತಿರಿಕ್ತಗಳು ಮಹಾಪಾತಕಗಳಾಗಿ ಪರಿಣಮಿಸುವುವು. ಐಶ್ವರ್ಯ ಮತ್ತು ಅಧಿಕಾರರೂಪವಾದ ಸಿಪಾದ್ರಷ್ಯ ಸೇವನೆಯಿಂದಲೂ, ನಾನೇ ಇಂದ್ರ, ಚಂದ್ರ, ದೇವೇಂದ್ರನೆಂದು ನಂಬಳಕ್ಕೋ

ಸ್ಕರ ಹೊಗಳತಕ್ಕ ಭಟರ ಮೃಷಾಸ್ತುತಿಗಳಿಂದಲೂ, ಮೋಹಪರವಶನಾಗಿ, ಮಹಾ ಪಾಪಗಳನ್ನು ಮಾಡಿ ಈ ಗತಿಗೆ ಬಂದಿರುತ್ತೇನೆ" ಎಂದು ಹೇಳಿ ನಾಬೋಪರ್ ಜನು ಕಣ್ಣೀರುಗಳನ್ನು ಬಿಟ್ಟನು. ಅವನ ಜೊತೆಯಲ್ಲಿ ಚಿತಿಯಲ್ಲಿ ಬಿದ್ದು ದೇಹವನ್ನು ಬಿಟ್ಟು ಕೆಲವು ಜನ ಸೇವಕರು ಅವನ ಬಳಿಯಲ್ಲಿದ್ದರು. ಇವನ ಪಾಪಗಳಲ್ಲೆಲ್ಲಾ ಅವರೂ ಭಾಗಿಗಳಾಗಿದ್ದದ್ದರಿಂದ ಈ ಯಾತನೆಗಳನ್ನವರೂ ಅನುಭವಿಸುತ್ತಿದ್ದರು. ಅವರ ತಾಪತ್ರಯಗಳನ್ನು ನೋಡಿ ಯಮದೂತರು ಟೆಲಿಮಾಕಸ್ಸಿನ ಎದುರಿಗೆ ನಾಬೋಫರರ್ಜನ್ನು ಕುರಿತು ಹೇಳಿದ್ದೇನಂದರೆ, "ನೀನೂ ಒಬ್ಬ ಮನುಷ್ಯನೆಂಬ ಜ್ಞಾನವು ನಿನಗಿರಲಿಲ್ಲವೇ ? ನಿನಗೆ ಮಾತಾಪಿತೃಗಳಿರಲಿಲ್ಲವೇ ? ನಾನೇ ದೇವರೆಂಬದಾಗಿ ನೀನು ಹೇಗೆ ತಿಳಿದುಕೊಂಡೆ ? ನೀನೊಬ್ಬ ಮನುಷ್ಯನೆಂದು ತಿಳಿದುಕೊಂಡು ದೇವರಿಗೆ ಮಾಡತಕ್ಕ ಪೂಜೆಯನ್ನು ನಿನಗೆ ಮಾಡದಿದ್ದವರನ್ನು ನೀನು ಹೇಗೆ ಶಿಕ್ಷಿಸಿದೆ ? ನಿನ್ನ ಸ್ತುತಿಪಾಠಕರು ಈಗ ನಿನ್ನ ಸಹಾಯಕ್ಕೆ ಬರುವರೇ ? ನೀನು ಮಹಾ ಪಾಪಿಯು. ಗುಲಾಮರಿಗೆ ಈಗ ನೀನು ಗುಲಾಮನಾಗಿದ್ದೀಯೆ ಎಲ್ಲರೂ ಅವರ ಪಾಪಗಳನ್ನು ಅನುಭವಿಸಬೇಕು. ಈಗ ಆ ಅನುಭವವು ನಿನಗೆ ಬಂದಿರುವುದು, ಇದು ನಿನ್ನ ಕರ್ಮಫಲ,ನಡಿ" ಎಂದು ಇವನನ್ನು ಕುದಿಯುವ ಪ್ರವಾಹಕ್ಕೆ ನೂಕಿದರು. ಟೆಲಿಮಾಕಸ್ಸನು ಈ ಚಕ್ರವರ್ತಿಯು ಹೇಳಿದ್ದನ್ನು ಕೇಳಿದನು. ನಗುತ್ತಾ ಮಾಡುವ ದುಷ್ಕರ್ಮಫಲಗಳನ್ನು ಅಳುತ್ತಾ ಅನುಭವಿಸಬೇಕಾಗಿ ಬಂದಿರುವುದನ್ನು ನೋಡಿದ ಕೂಡಲೇ ಮೈನಾಸನ ಧರ್ಮಗಳು ಇವನ ಸ್ಮೃತಿಪಥಕ್ಕೆ ಬಂದವು. ಕರ್ಮಫಲವು ತಪ್ಪಿಸಿಕೊಳ್ಳಲಸಾಧ್ಯ. ಇದು ಅನುಭವಿಸಿತೀರಬೇಕು" ಎಂದು ಹೇಳಿದನು. ಅಷ್ಟರಲ್ಲಿಯೇ ಅಲ್ಲಿಗೆ ಒಂದು ದೋಣಿಯು ತಂದು ನಿಲ್ಲಿಸಲ್ಪಟ್ಟಿತು. ಯಮನ ಸನ್ನಿಧಿಗೆ ಅದರಲ್ಲಿ ಹೊರಡಬಹುದೆಂದು ಯಮದೂತರು ಟೆಲಿಮಾಕಸ್ಸನಿಗೆ ತಿಳಿಸಿದರು. ಯಮಭಟರಲ್ಲಿ ಮುಖಂಡನಾದ "ಚೇರನ್ನನು" -ಟೆಲಿಮಾಕಸ್ಸನನ್ನು ಕುರಿತು ಹೇಳಿದ್ದೇನಂದರೆ:—ಈ ನರಕಕ್ಕೆ ಪಾಪವನ್ನು ಮಾಡಿದ ಪ್ರೇತಗಳು ಮಾತ್ರ ಬರುವವು ಜಗದೀಶ್ವರನಾಜ್ಞೆಯಿಂದ ನಮ್ಮ ಪ್ರಭುವಾದ ಯಮಧರ್ಮನಿ (ಪ್ಲೂಟೋ) ಗೆ ನೀನು ಅತಿಥಿಯಾಗಿ ಬಂದಿರುವಿ. ತಮೋಮಯವಾದ ಈ ನರಕದಲ್ಲಿ ನಿನಗೆ ದಾರಿಯನ್ನು ತೋರಿಸಿ ಕರೆದುಕೊಂಡುಹೋಗುವುದಕ್ಕೋಸ್ಕರ ನಾನು ಕಳುಹಿಸಲ್ಪಟ್ಟಿರುತ್ತೇನೆ" ಎಂದು ಹೇಳಿ ನಮಸ್ಕಾರ ಮಾಡಿದನು. ಪ್ಲೂಟೋನ ಅರಮನೆಯ ಕಡೆಗೆ ಚೇರನ್ನನ ಜೊತೆಯಲ್ಲಿ ಟೆಲಿಮಾಕಸ್ಸನು ಹೊರಟನು. ಭೂಮಿಯ ಮೇಲೆ

ನಾನಾವಿಧವಾದ ಪ್ರಾಣಿವರ್ಗಗಳು ಹೇಗೆ ಕಾಣುವುವೋ ಹಾಗೆ ಈ ನರಕದಲ್ಲಿ ಪ್ರೇತವರ್ಗಗಳು ಕಾಣುತ್ತಾ ಬಂದವು. ಅವುಗಳನ್ನೆಲ್ಲಾ ನೋಡುತ್ತಾ, ಅರಮನೆಯ ಕಡೆಗೆ ದೋಣಿಯು ಹೊರಟಿತು. ಷೇರನ್ನನು ಪ್ಲೂಟೋನ ಸನ್ನಿಧಿಯಲ್ಲಿ ಟೆಲಿಮಾಕಸ್ಸನನ್ನು ಕರೆದುಕೊಂಡುಹೋಗಿ ನಿಲ್ಲಿಸಿ, "ಇವನೇ ಯೂಲಿಸಸ್ ಎಂಬ ಮಹಾತ್ಮನ ಕುಮಾರನು, ಇವನೇ ಟೆಲಿಮಾಕಸ್ಸನು" ಎಂದು ಹೇಳಿದನು. ಕೂಡಲೇ ಟೆಲಿಮಾಕಸ್ಸನು ಸಿಂಹಾಸನದ ಮೇಲೆ ಕೂತಿರತಕ್ಕ ಪ್ಲೂಟೋನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ "ನಿರ್ಭಾಗ್ಯಶಿಖಾಮಣಿಯಾದ ಟೆಲಿಮಾಕಸ್ಸನು ನಿನ್ನನ್ನು ವಂದಿಸುತ್ತಾನೆ" ಎಂದು ಹೇಳಿದನು. ದುಷ್ಟನಿಗ್ರಹವೇ ಪ್ಲೂಟೋವಿಗೆ ಮುಖ್ಯ ಧರ್ಮವಾಗಿತ್ತು. ಸಾಮಾನ್ಯವಾಗಿ ಯಾವಾಗಲೂ ಇವನು ಹುಬ್ಬು ಕಂಡುಹಾಕಿಕೊಂಡಿರುತ್ತಿದ್ದನು. ಇವನನ್ನು ನೋಡಿದ ಕೂಡಲೆ ಶಿಕ್ಷೆಯನ್ನು ಹೊಂದುವುದಕ್ಕೆ ಬಂದ ಪ್ರೇತಗಳಿಗೆ ಭಯದಿಂದ ಗರ್ಭನಿರ್ಭೇದವಾಗುತ್ತಿತ್ತು. ಅವನ ಪಕ್ಕದಲ್ಲಿ ರಾಸರ್‌ಪೀನ್ ಎಂಬ ಅವನ ಕುಟುಂಬವು ಕೂತಿದ್ದಳು. ಅವಳ ಸೌಂದರ್ಯವೂ, ಅವಳ ಅವಯವಸೌಷ್ಠವವೂ, ಅವಳ ಪಾತಿವ್ರತ್ಯವೂ, ಅವಳ ಧರ್ಮನಿಷ್ಠೆಯೂ, ಒಂದಕ್ಕಿಂತಲೂ ಒಂದು ಹೆಚ್ಚಾಗಿ ಅವಳ ಕಾಂತಿಯನ್ನು ಹೆಚ್ಚಿಸುತ್ತಿದ್ದವು ಯಮದೂತನು ಸಿಂಹಾಸನದ ಸಮೀಪದಲ್ಲಿ ತನ್ನ ಕತ್ತಿಯನ್ನು ಮಸೆಯುತ್ತಿದ್ದನು. ಪಾಪಕರ್ಮಗಳಿಗೆ ಸಾಧಕವಾದ ಸಂದೇಹ, ಅಸೂಯ, ದ್ವೇಷ, ದುರಾಶೆ, ರಾಜದ್ರೋಹ; ನಾಸ್ತಿಕತೆ, ಕಾಮ, ಕ್ರೋಧವೇ ಮೊದಲಾದ ಅರಿಷಡ್ವರ್ಗಗಳು ಇವುಗಳೆಲ್ಲಾ ಮೂರ್ತೀಭವಿಸಿರುವ ಅಧಿದೇವತೆಗಳಂತೆ ಪ್ಲೂಟೋನ ಸಿಂಹಾಸನದ ಉಭಯ ಪಾರ್ಶ್ವಗಳಲ್ಲಿಯೂ ಇದ್ದವು. ಅವುಗಳನ್ನು ನೋಡಿದಕೂಡಲೆ ಅಪರಾಧಿಗಳು ಮಾಡಿದ ಪಾಪಗಳ ವಿಷಯದಲ್ಲಿ ಸಾಕ್ಷಿಯನ್ನು ನುಡಿಯುವುದಕ್ಕೆ ಹಾಜರಾದ ದೇವತೆಗಳಂತೆ ಅವುಗಳು ಕಾಣುತ್ತಿದ್ದುವು. ಸ್ವರ್ಗದ ಮಾರ್ಗದಲ್ಲಿ ಈ ನರಕವು ಇರುವುದು. ಮಹಾತ್ಮರಾದವರು ಇಲ್ಲಿ ಪಾಪಿಷ್ಠರು ಅನುಭವಿಸುವ ಕಷ್ಟಗಳನ್ನು ನೋಡಿಕೊಂಡು ಸ್ವರ್ಗಕ್ಕೆ ಆರೋಹಣವನ್ನು ಮಾಡುವರು. ಟೆಲಿಮಾಕಸ್ಸನು ಪ್ಲೂಟೋನನ್ನು ನೋಡಿ ಹೇಳಿದ್ದೇನೆಂದರೆ:— "ನೀನು ಜಗದೀಶ್ವರನ ಅವತಾರವೆಂದು ನನಗೆ ತೋರುತ್ತದೆ. ಆತನು ಸ್ವರ್ಗದಲ್ಲಿದ್ದುಕೊಂಡು ಶಿಷ್ಟರಕ್ಷಣೆಯನ್ನು ಮಾಡುತ್ತಿರುವನು. ಅದೇ ಜಗದೀಶ್ವರನು ನಿನ್ನಂತೆ ಅವತರಿಸಿ ದುಷ್ಟನಿಗ್ರಹ ಮಾಡುತ್ತಿರುವಂತೆ ತೋರುತ್ತದೆ. ಆದುದ

ಲಿಂದ ನೀನೇ ಜಗದೀಶ್ವರನೆಂದು ಭಾವಿಸುತ್ತೇನೆ. ಶಿಷ್ಟಪರಿಪಾಲನೆಗೆ ದುಷ್ಟನಿಗ್ರಹ ವೇ ಪ್ರಥಮ ಸೋಪಾನವು. ಪ್ರಪಂಚದಲ್ಲಿ ದುಷ್ಟರೇ ಇರಕೂಡದೆಂದು ನಿನ್ನ ಸಂಕಲ್ಪವು ಇರುವಂತೆ ತೋರುತ್ತದೆ. ದುಷ್ಟನಿಗ್ರಹರೂಪವಾದ ಈ ನರಕ ಯಾತನೆಯು ಸರ್ವರಿಗೂ ತಿಳಿಯುವಂತೆ ಮಾಡಲ್ಪಟ್ಟರೆ ಸರ್ವರೂ ಪಾಪಕರ್ಮಗಳಲ್ಲಿ ಪರಾಂಗ್ಮುಖರಾಗುವರು. ಅನಂತರ ನಿನಗೆ ಕೆಲಸವೇ ಇರುವುದಿಲ್ಲ. ಕೆಲಸವಿ ಲ್ಲದಂತೆ ಮಾಡಿಕೊಳ್ಳಬೇಕೆಂದು ನೀನು ಮಾಡುತ್ತಿರುವ ಪ್ರಯತ್ನವು ತುಂಬಾ ಶ್ಲಾಘ್ಯವಾಗಿರುವುದು. ಈ ನಿನ್ನ ಉದ್ದೇಶವು ನೆರವೇರಲಿ'' ಈ ರೀತಿಯಲ್ಲಿ ಟೆಲಿ ಮಾಕಸ್ಸನು ಹೇಳಲು, ಅವನಿಗೆ ಪ್ಲೂಟೋ ಹೇಳಿದ್ದೇನೆಂದರೆ:—''ನೀನು ಜೀವ ವಂತನಾಗಿ ನಿನ್ನ ತಂದೆಯನ್ನು ಹುಡುಕುವುದಕ್ಕೆ ನರಕಪ್ರವೇಶವನ್ನು ಮಾಡಿ ರುವಿ. ಯೂಲಿಸಸ್‌ನ ಮಗನಾಗಿ, ಮಿನರ್ವಳ ಅನುಗ್ರಹಕ್ಕೆ ಪಾತ್ರನಾಗಿ ಇದ್ದೂ ಕೂಡ ಮಹಾತ್ಮನಾದ ನಿನ್ನ ತಂದೆಯು ನರಕದಲ್ಲಿರಬಹುದೆಂದು ನಿನಗೆ ಸಂದೇಹವುಂಟಾಗಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಶುಭ ವನ್ನು ಮಾಡತಕ್ಕವರಿಗೆ ಅಶುಭಫಲವಾದೀತೆಂದು ನ್ಯಾಯಧರ್ಮವಿಶಾರದ ನಾದ ನಿನಗೆ ಹೇಗೆ ತೋರಿತು? ನಿನ್ನ ತಂದೆಯು ಮನೋವಾಕ್ಕರ್ಮಗಳ ಲ್ಲೆಲ್ಲಾ ಧರ್ಮದ ಮೇರೆಗಳನ್ನು ಉಲ್ಲಂಘಿಸಿದವನಲ್ಲ. ಮನಸ್ಸಿನಲ್ಲೊಂದು ವಿಧವಾಗಿಯೂ, ವಾಚಾ ಮತ್ತೊಂದು ವಿಧವಾಗಿಯೂ, ಕರ್ಮದಲ್ಲಿ ಇನ್ನೊಂದು ವಿಧವಾಗಿಯೂ ಸ್ವಾರ್ಥಪರತೆಯಿಂದ ಪಾಪಕರ್ಮಗಳನ್ನು ಮಾಡತಕ್ಕವರಿಗೆ ಅವರ ಅಪರಾಧಕ್ಕೆ ಅನುರೂಪವಾದ ಶಿಕ್ಷೆಯನ್ನು ಮಾಡುವುದಕ್ಕೆ ಈ ನರಕವು ನಿರ್ಮಾ ಣವಾಗಿರುವುದು. ನಿನ್ನಂತೆಯೇ ನಿನ್ನ ತಂದೆಯೂ ಒಂದಾನೊಂದು ಕಾಲದಲ್ಲಿ ಪಾಪಕರ್ಮಫಲವನ್ನು ಅನುಭವಿಸುವವರನ್ನು ನೋಡುವುದಕ್ಕೋಸ್ಕರ ಇಲ್ಲಿಗೆ ಬರಬ ಹುದು. ಈಗ ನಿನ್ನ ತಂದೆಯು ಇಲ್ಲಿಗೆ ಬಂದಿಲ್ಲ. ಸ್ವರ್ಗಕ್ಕೂ ಅವನು ಹೋಗಿಲ್ಲ. ಭೂಮಿಯಲ್ಲಿಯೇ ಅವನು ಇರುವನು. ನರಕದರ್ಶನವು ನಿನಗೆ ಲಭ್ಯವಾಯಿತು. ಇಲ್ಲಿ ಪಾಪಿಷ್ಠರಿಗೆ ಆಗತಕ್ಕ ಶಿಕ್ಷೆಗಳನ್ನು ನೀನು ನೋಡಿರುವಿ. ಉತ್ತರೋತ್ತರ ಇವೆರಡೂ ನಿನಗೆ ಪ್ರಯೋಜನಕರಗಳಾಗುವುವು. ಕ್ರಮೇಣ ಇಥಾಕಾದ ಪ್ರಭು ತ್ವಕ್ಕೆ ನೀನು ಬರುವಿ. ಸುಳ್ಳುಗಾರರೂ, ಕೃತಘ್ನರೂ, ಉದರನಿಮಿತ್ತವಾಗಿ ಮೃಷಾಸ್ತುತಿಯನ್ನು ಮಾಡತಕ್ಕವರೂ, ನಿಂದಕರೂ, ಧರ್ಮದ್ರೋಹಿಗಳೂ, ಸಕಲ ವಿಧವಾದ ಪಾಪಿಷ್ಠರೂ ಪರಿಣಾಮದಲ್ಲಿ ಎಂತಹ ದುಸ್ಸಹವಾದ ಕಷ್ಟಕ್ಕೆ

ಗುರಿಯಾಗುವರೋ ಅದನ್ನು ನೀನು ಪ್ರತ್ಯಕ್ಷವಾಗಿ ನೋಡಿರುವಿ. ಪರೋಪಕಾರವು ಹೇಗೆ ಪುಣ್ಯವಾಗಿ ಪರಿಣಮಿಸುವುದೋ, ಪರಪೀಡೆಯು ಹೇಗೆ ಪಾಪವಾಗಿ ಪರಿಣಮಿಸುವುದೋ ಅದು ಸರಿಯಾಗಿ ತಿಳಿಯುವುದಕ್ಕೆ ಈ ನರಕಯಾತ್ರೆಯು ನಿನಗೆ ಸಾಧಕವಾಯಿತು. ಪ್ರಭುತ್ವವು ನಿಷಾದ್ರವ್ಯಕ್ಕೆ ಸಮಾನವಾದದ್ದು. ಅಧಿಕಾರ ಮದವೂ, ದ್ರವ್ಯಮದವೂ ಮಹಾತ್ಮರ ಬುದ್ಧಿಯನ್ನು ಕೆಡಿಸುವುವು. ಮುಂದೆ ನೀನು ಪ್ರಭುತ್ವಕ್ಕೆ ಬಂದಾಗ ಈ ತತ್ವಾರ್ಥಗಳನ್ನು ಬಾರಿಬಾರಿಗೂ ಸ್ಮರಿಸಿಕೊ. ದೇವರು ಪಾಪಪುಣ್ಯಗಳ ಸ್ವರೂಪವನ್ನು ತಿಳಿದುಕೊಳ್ಳುವ ಶಕ್ತಿಯನ್ನು ಸರ್ವರಿಗೂ ಕೊಟ್ಟಿರುವನು. ಪಾಪಪುಣ್ಯಗಳನ್ನು ಮಾಡುವ ಸ್ವಾತಂತ್ರ್ಯವನ್ನೂ ಕೂಡ ಸರ್ವರಿಗೂ ಕೊಟ್ಟಿರುವನು. ಯಾರು ಜಿತೇಂದ್ರಿಯರಾಗಿ, ಅರಿಷಡ್ವರ್ಗಳನ್ನು ಗೆಲ್ಲುವರೋ ಅವರು ಮೂರು ಲೋಕಗಳನ್ನೂ ಗೆಲ್ಲುವರು. ಯಾರು ಇಂದ್ರಿಯಪರವಶರಾಗಿ, ಅರಿಷಡ್ವರ್ಗಗಳಿಗೆ ಅಧೀನರಾಗಿ, ಪಾಪಕರ್ಮಗಳನ್ನು ಮಾಡುವರೋ ಅವರು ತಮ್ಮ ಪಾಪಕರ್ಮಫಲವನ್ನು ಅನುಭವಿಸಲು ನನ್ನ ಬಳಿಗೆ ಬರುವರು. "ಯಮನಿಗೆ ಕರುಣವಿಲ್ಲ" ಎಂಬ ನಾಣ್ನುಡಿಯನ್ನು ನೀನು ಕೇಳಿರಬಹುದು. ದುಷ್ಟನಿಗ್ರಹವನ್ನು ಮಾಡುವುದರಲ್ಲಿ ನಾನು ನಿರ್ಘೃಣನಾಗಿರಬೇಕಾಗಿರುತ್ತೆ. ನನ್ನ ಅಧೀನಕ್ಕೆ ನೀನು ಬರದಂತೆ ನಿನಗೆ ದೇವರು ಅನುಗ್ರಹಿಸಲೆಂದು ನಾನು ಕೋರುತ್ತೇನೆ. ನನ್ನ ದಿವ್ಯದೃಷ್ಟಿಯಿಂದ ನೀನು ಇಲ್ಲಿಗೆ ಬಂದ ಉದ್ದೇಶ್ಯವನ್ನು ನಾನೇ ತಿಳಿದುಕೊಂಡು ನಿನಗೆ ಬೇಕಾದ ಸಮಾಚಾರವನ್ನು ಹೇಳಿರುತ್ತೇನೆ" ಈ ರೀತಿಯಲ್ಲಿ ಪ್ಲೂಟೋ ಹೇಳಿದನು. ಈ ಮಾತುಗಳನ್ನು ಕೇಳಿದ ಕೂಡಲೆ, ತಂದೆಯು ಬದುಕಿರುವನೆಂಬ ಸಂತೋಷವೂ, ತಾಯಿಗೆ ತಾನು ಮಾಡಿದ ಪ್ರತಿಜ್ಞೆಯು ಸಫಲವಾಗುವ ಸಂಭವವು ಉಂಟಾಯಿತೆಂಬ ಸಂತೋಷವೂ ಇವನಿಗೆ ಪರಿಪೂರ್ಣವಾಗಿ ಉಂಟಾಯಿತು. ಮನುಷ್ಯನಿಗೆ ದುರ್ಲಭವಾದ ಪ್ಲೂಟೋನ ದರ್ಶನವೂ, ಅವನ ಹಿತೋಪದೇಶವೂ ತನಗೆ ಲಭ್ಯವಾಗುವುದಕ್ಕೆ ತನ್ನ ತಂದೆಯ ಧರ್ಮ, ತನ್ನ ಸೌಜನ್ಯ, ತನ್ನ ಮಾತಾಪಿತೃಭಕ್ತಿ, ತನ್ನ ಲೋಕಸೇವಾಧುರಂಧರತೆ, ತನ್ನ ಗುರುವಾದ ಮೆಂಟರನ ಮಹಿಮೆ, ತನ್ನಲ್ಲಿ ಮಿನರ್ವಳಿಗಿರತಕ್ಕ ಅಭಿಮಾನ, ಜಗದೀಶ್ವರನಿಗೆ ತನ್ನಲ್ಲಿರತಕ್ಕ ಪ್ರೀತಿ, ಇವುಗಳಲ್ಲಿ ಯಾವುದು ಕಾರಣವೋ ಎಂಬದಾಗಿ ಸಂದೇಹಪಟ್ಟನು. ಇವುಗಳೆಲ್ಲಾ ಕಾರಣವಾಗಿರಬಹುದೆಂದು ನಿಶ್ಚೈಸಿದನು. ಆಗ ಪ್ಲೂಟೋನನ್ನು ಕುರಿತು ಇವನು ಹೇಳಿದ್ದೇನಂದರೆ:—

" ಎಲೈ ಮಹಾತ್ಮನೇ, ಈ ನರಕದಲ್ಲಿ ಎಲ್ಲಿ ನೋಡಿದರೂ ಆರ್ತಸ್ವರವು ಕಿವಿಗೆ ಬೀಳುತ್ತಲಿರುವುದು. ಭೂಮಿಯ ಮೇಲೆ ಕಷ್ಟಪಡತಕ್ಕವರು ಹೇಗೋ ಹಾಗೆ ಸುಖಪಡತಕ್ಕವರನ್ನೂ ಕೂಡ ನಾವು ನೋಡುವೆವು. ಇಲ್ಲಿರತಕ್ಕವರಿಗೆ ಸುಖವು ಸ್ವಪ್ನದಲ್ಲಿಯೂ ದುರ್ಲಭವಾಗಿರುವಂತೆ ತೋರುತ್ತದೆ. ಇಲ್ಲಿ ರೋದನ ಮಾಡುತ್ತಿರುವವರ ಘೋರವಾದ ರೋದನಕ್ಕೆ ಕಾರಣವನ್ನು ತಿಳಿದುಕೊಳ್ಳಬೇಕೆಂದು ನನಗೆ ತುಂಬಾ ಆಶೆಯು ಇರುವುದು. ದಯವಿಟ್ಟು ಈ ಅತ್ಯಂತ ಭಯಂಕರವಾದ ಯಾತನೆಯನ್ನು ಪಡುತ್ತಲಿರುವವರು ಮಾಡಿದ ಅಪರಾಧವನ್ನು ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ. ದಯವಿಟ್ಟು ಇವರು ಎಂಥಾ ಪಾಪಗಳನ್ನು ಮಾಡಿ ಈ ಅವಸ್ಥೆಗೆ ಬಂದಿರುವರೋ ಅದನ್ನು ಹೇಳು " ಎಂದು ಪ್ರಾರ್ಥಿಸಿದನು.

ಸಮೀಪದಲ್ಲಿ ಬ್ಯಾಬಿಲನ್ ಚಕ್ರವರ್ತಿಯು ನರಕಯಾತನೆಗಳನ್ನು ಅನುಭವಿಸಲಾರದೆ ಘಟ್ಟಿಯಾಗಿ ಅಳುತ್ತಿದ್ದನು. ಪ್ಲೂಟೋ ಟಿಲಿಮಾಕಸ್ಸನಿಗೆ ಅವನನ್ನು ತೋರಿಸಿ, " ಇವನು ಬ್ಯಾಬಿಲನ್ ಚಕ್ರವರ್ತಿ. ಪ್ರಪಂಚದಲ್ಲಿರತಕ್ಕವರೆಲ್ಲರಿಗೂ ಇವನ ಹೆಸರು ಕಿವಿಗೆ ಬಿದ್ದ ಮಾತ್ರದಿಂದಲೇ ಗರ್ಭನಿರ್ಭೇದವಾಗುತ್ತಿತ್ತು. ಇವನ ಮಾತಿಗೆ ಯಾರೂ ಪ್ರತಿಯನ್ನು ಹೇಳುತ್ತಿರಲಿಲ್ಲ. ಪ್ರತಿಭಟಿಸಿದವರಿಗೆ ನಿಮಿಷಾರ್ಧದಲ್ಲಿ ಮರಣದಂಡನೆಯಾಗುತ್ತಿತ್ತು. ಇವನು ಸ್ವೇಚ್ಛಾಪ್ರವರ್ತಕನಾಗಿದ್ದನು. ನಿರಂಕುಶವಾಗಿ ನಡೆಯುತ್ತಿದ್ದನು. ಲೋಕದಲ್ಲಿರತಕ್ಕ ಸಕಲ ಸಂಪತ್ತೂ ತನ್ನ ಕ್ಷೇಮಕ್ಕೋಸ್ಕರ ಉತ್ಪತ್ತಿಯಾಗಿತ್ತೆಂದು ತಿಳಿದುಕೊಂಡಿದ್ದನು. ರೂಪವತಿಯರಾದ ಸಕಲ ಸ್ತ್ರೀಯರನ್ನೂ ಬಲಾತ್ಕಾರದಿಂದ ತನ್ನ ರಾಣಿವಾಸಕ್ಕೆ ಸೇರಿಸಿಕೊಳ್ಳುತ್ತಿದ್ದನು. ಪ್ರತಿಭಟಿಸಿದವರನ್ನು ಕಲ್ಲುಗಾಣಕ್ಕೆ ಹಾಕಿ ಅರೆಸುತ್ತಿದ್ದನು. ಪ್ರಭುತ್ವ ಮಾಡತಕ್ಕವರು ಪ್ರಜೆಗಳ ಕ್ಷೇಮಾರ್ಥವಾಗಿ ತಮ್ಮ ಅಧಿಕಾರವನ್ನೂ, ಸಂಪತ್ತನ್ನೂ, ಸಕಲ ಶಕ್ತಿಗಳನ್ನೂ ವಿನಿಯೋಗಿಸಬೇಕು. ಈ ಭಾವನೆಯು ಇವನಿಗೆ ಇರಲಿಲ್ಲ. ಸಂತೋಷದಿಂದ ಮಾಡಿದ ಪಾಪಕರ್ಮಗಳನ್ನು ಈಗ ಅಳುತ್ತಾ ಅನುಭವಿಸುತ್ತಲಿದಾನೆ " ಎಂದು ಹೇಳಿದನು. ಅವನ ಸಮೀಪದಲ್ಲಿ ಮತ್ತೆ ಕೆಲವರು ಬಹಳವಾದ ಯಾತನೆಯನ್ನು ಪಡುತ್ತಿದ್ದರು. ಅವರನ್ನು ಟಿಲಿಮಾಕಸ್ಸನಿಗೆ ತೋರಿಸಿ, "ಈ ದುರಾತ್ಮರೆಲ್ಲಾ ಈ ಚಕ್ರವರ್ತಿಯ ಸ್ತುತಿಪಾಠಕರು. ಇವರು ಇವನ ಮಂತ್ರಿಗಳಾಗಿದ್ದರು. ಇವನು ಮಾಡಿದ ಅಪರಾಧಗಳನ್ನು ಆಚ್ಛಾದಿಸಿ, ಆ ಅಪರಾಧಗಳೇ ಧರ್ಮಗಳಾಗಿದ್ದರೆ ಹೇಗೋ ಹಾಗೆ ಇವರು

ಸ್ತೋತ್ರಮಾಡುತ್ತಿದ್ದರು. ಸಾಮಾನ್ಯವಾಗಿ ಪ್ರಭುಗಳು ಉನ್ಮತ್ತರಾಗಿರುವರು. ಆಗಾಗ್ಯೆ ಅವರಿಗೆ ಎಚ್ಚರವನ್ನು ಹೇಳಿ, ಪಾಪಕರ್ಮಗಳಿಗೆ ಬಿಳದಂತೆ ಮಾಡುವುದು ಮಂತ್ರಿಗಳಿಗೆ ಮುಖ್ಯ ಕರ್ತವ್ಯ. ಈ ಕರ್ತವ್ಯವನ್ನು ಇವರು ಮಾಡಲಿಲ್ಲ. ಸ್ವಾರ್ಥಪರತೆಯಿಂದ ಈ ಚಕ್ರವರ್ತಿಯು ಮಾಡಿದ ಪಾಪಗಳನ್ನೆಲ್ಲಾ ಧರ್ಮಗಳೆಂದು ಇವರು ವರ್ಣಿಸುತ್ತಾ, ಅವನು ಪಾಪಕರ್ಮಗಳಲ್ಲಿ ನಿಸ್ಸೀಮನಾಗುವಂತೆ ಅವರು ಮಾಡುತ್ತಿದ್ದರು.'' ಈ ದುಷ್ಕರ್ಮದ ಫಲವನ್ನು ಇವರು ಅನುಭವಿಸುತ್ತಲಿದಾರೆ. ಹೀಗೆ ಹೇಳಿ ಸ್ವಲ್ಪ ಮುಂದಕ್ಕೆ ಹೋಗಲು, ನಿನಿವಿ ದೇಶದ ಚಕ್ರವರ್ತಿಯು ಉರಿಯುತ್ತಲಿರುವ ಗಂಧಕದ ಜ್ವಾಲೆಯಲ್ಲಿ ಸಿಕ್ಕಿ, ಘೋರವಾದ ಯಾತನೆಯನ್ನು ಪಡುತ್ತಿದ್ದನು. ಅದನ್ನು ನೋಡಿದ ಕೂಡಲೆ, ಟೆಲಿಮಾಕಸ್ಸನಿಗೆ ಬಹಳ ಕನಿಕರ ಉಂಟಾಯಿತು. "ಇವನು ಯಾರು? ಇವನ ವೃತ್ತಾಂತವೇನು?'' ಎಂದು ಕೇಳಲು, ಪ್ಲೂಟೋ ಹೇಳಿದ್ದೇನಂದರೆ:—

"ಈ ದುರಾತ್ಮನು ನಿನಿವಿ ದೇಶದ ಚಕ್ರವರ್ತಿಯು. ಇವನು ಈ ಅಖಂಡ ಬ್ರಹ್ಮಾಂಡದ ಸೃಷ್ಟಿಸ್ಥಿತಿಪ್ರಳಯಗಳಿಗೆ ಕಾರಣಭೂತನಾದ ದೇವರು ಇರುವುದಿಲ್ಲವೆಂಬದಾಗಿಯೂ, ಪುಣ್ಯಪಾಪಗಳಿಗೆ ಅನುರೂಪವಾದ ಫಲವು ಉಂಟಾಗುವುದೆಂದು ಗೊಡ್ಡು ವೈದಿಕರು ಸ್ವಾರ್ಥಪರತೆಯಿಂದ ಹೇಳುವರೆಂಬದಾಗಿಯೂ, ಅದು ನಿಜವಲ್ಲವೆಂಬದಾಗಿಯೂ, ಸಕಲ ವಿಷಯಗಳೂ ಭೋಗಾರ್ಥವಾಗಿ ಉಂಟಾಗಿರುವುವೆಂಬದಾಗಿಯೂ, ಅಭಕ್ಷ್ಯಭೋಜನಗಳೂ, ಅಪೇಯಪಾನಗಳೂ, ಅಗಮ್ಯಾಗಮನಗಳೂ ಇರುವುದಿಲ್ಲವೆಂಬದಾಗಿಯೂ, ಬೇಕಾದ ತಿಂಡಿಗಳನ್ನು ತಿನ್ನಬಹುದೆಂಬದಾಗಿಯೂ, ಬೇಕಾದ ಸಾರಾಯನ್ನು ಕುಡಿಯಬಹುದೆಂಬದಾಗಿಯೂ, ಬೇಕಾದ ಭೋಗ್ಯವಸ್ತುಗಳನ್ನು ಅನುಭವಿಸಬಹುದೆಂಬದಾಗಿಯೂ, ಅನುಭವಿಸುವುದರಲ್ಲಿ ಮಾಡಲ್ಪಡತಕ್ಕ ನಿಷೇಧಗಳು ಉಪಾದೇಯವಲ್ಲವೆಂಬದಾಗಿಯೂ ತಿಳಿದುಕೊಂಡು, ಧರ್ಮವಿಧಿಗಳನ್ನು ಉಲ್ಲಂಘಿಸಿ, ತನ್ನ ಪ್ರಜೆಗಳಲ್ಲಿ ಬಹು ಮಂದಿಗೆ ಅನಿರ್ವಚನೀಯವಾದ ಕ್ಲೇಶವನ್ನುಂಟುಮಾಡಿದ್ದಲ್ಲದೆ, ಅವರಿಗೆ ಅತ್ಯಂತ ಭಯಂಕರವಾದ ಶಿಕ್ಷೆಗಳನ್ನು ಮಾಡಿಸಿದನು. ಅದರ ಫಲವನ್ನು ಈಗ ಅನುಭವಿಸುತ್ತಲಿದಾನೆ.'' ಎಂದು ಹೇಳಿದನು. ಅಲ್ಲಿಂದ ಸ್ವಲ್ಪ ಮುಂದಕ್ಕೆ ಹೋಗಲು, ಬೆಳ್ಳಗೆ ಕಾದಿರುವ ಸ್ತ್ರೀಪುರುಷ ರೂಪವಾದ ಕಬ್ಬಿಣದ ಪ್ರತಿಮೆಗಳನ್ನು ಆಲಂಗಿಸಿಕೊಳ್ಳುವುದಕ್ಕೆ ದುರಾತ್ಮರಾದ ಕೆಲವು ಜನ ಸ್ತ್ರೀಪುರುಷರು ತರಲ್ಪಟ್ಟರು. ಇದೇನೆಂದು ಟೆಲಿಮಾಕಸ್ಸನು

ಪ್ರೀತಿಗೆ ಮಾತ್ರವೇ ಅಲ್ಲದೆ ಜಗದೀಶ್ವರನ ಅಭಿಮಾನಕ್ಕೂ ಪಾತ್ರನಾಗಿರುವಿ. ಜಿತೇಂದ್ರಿಯರಲ್ಲಿ ಶಿಖಾಮಣಿಯಾಗಿರುವಿ. ದುರಾಶಾಪಿಶಾಚಗಳು ನಿನ್ನ ಸಮೀಪಕ್ಕೆ ಬಂದರೆ ಸುಟ್ಟು ಬೂದಿಯಾಗುವುವು. ಅಧೋಗತಿಗೆ ಕಾರಣಗಳಾದ ದುರ್ವಿಷಯಾಸಕ್ತಿಯನ್ನು ನೀನು ಗೆದ್ದಿರುವಿ. ದೇವತೆಗಳಿಗೆ ಸಹಜವಾದ ಸದ್ವಿಷಯಾಸಕ್ತಿಯನ್ನು ಹೊಂದಿರುವಿ. ದೇಹಾಂತರ್ಗತವಾದ ಶತ್ರುಗಳನ್ನು ಗೆದ್ದಿರುವಿ. ದೇವೇಂದ್ರ ಪದವಿಗೆ ಅರ್ಹನಾಗಿರುವಿ. ಧರ್ಮವು ಪ್ರಭುಗಳಿಗೆ ಪ್ರಭುವಾದದ್ದು. ಧರ್ಮಮಾರ್ಗೋಲ್ಲಂಘನವನ್ನು ಯಾರು ಮಾಡುವುದಿಲ್ಲವೋ ಅವರೇ ನಿಜವಾದ ಪ್ರಭುಗಳು. ಧರ್ಮವನ್ನು ಉಲ್ಲಂಘಿಸಿ ನಡೆಯತಕ್ಕವರು ಚಕ್ರವರ್ತಿಗಳಾದರೂ, ಗುಲಾಮಗಿರಿಗಿಂತಲೂ ಕಡೆ. ಧರ್ಮಿಷ್ಟರಾದ ಗುಲಾಮರೂ ಕೂಡ ಚಕ್ರವರ್ತಿಗಳಿಗೂ ದುರ್ಲಭವಾದ ಪುಣ್ಯಲೋಕವನ್ನು ಹೊಂದುವರು. ಇದಕ್ಕೆ ನನ್ನ ನಾಯಿಯೇ ದೃಷ್ಟಾಂತ. ಧರ್ಮಿಷ್ಟರ ಸಹವಾಸದಲ್ಲಿದ್ದು, ಈ ನಾಯಿಯು ಧರ್ಮದೀಕ್ಷೆಯನ್ನು ಹೊಂದಿತು. ಆ ಧರ್ಮದ ಫಲವನ್ನು ಹೊಂದುವುದಕ್ಕೆ ನಮ್ಮನ್ನು ಅನುಸರಿಸಿ ಬರುತ್ತಲಿದೆ. ನೀನು ಸರ್ವಜ್ಞನಾದಾಗ್ಯೂ ಸದ್ಗತಿಗೆ ಮೂಲ ಮಂತ್ರವು ಯಾವುದೆಂದು ಕೇಳುತ್ತೀಯೆ? ನಿನ್ನ ಆಚರಣೆಯಲ್ಲಿರುವ ಮೂಲ ಮಂತ್ರವನ್ನು ನಾನು ನಿನಗೆ ಹೇಳಬೇಕಾಗಿದೆ. ಮನೋವಾಕ್ಕರ್ಮಗಳಲ್ಲಿ ಧರ್ಮದಿಂದ ನಡೆಯತಕ್ಕವರು ಪುಣ್ಯವಂತರು. ಧರ್ಮದ ಮೇರೆಗಳನ್ನು ಉಲ್ಲಂಘಿಸತಕ್ಕವರು ಪಾಪಿಷ್ಠರು ಪಾಪಿಷ್ಠರು ಅನುಭವಿಸತಕ್ಕ ಕಷ್ಟಗಳನ್ನು ಈ ನರಕದಲ್ಲಿ ನೋಡಬಹುದು. ಪುಣ್ಯವಂತರು ಅನುಭವಿಸತಕ್ಕ ಸುಖವನ್ನು ಸ್ವರ್ಗದಲ್ಲಿ ನೋಡಬಹುದು ಸದ್ಗತಿಪ್ರಾಪ್ತಿಗೂ, ದುರ್ಗತಿಯ ನಿವಾರಣೆಗೂ ಅತ್ಯಂತ ಸುಲಭವಾದ ಉಪಾಯಗಳೂ ಕೂಡ ಮಹಾತ್ಮರಿಂದ ಹೇಳಲ್ಪಟ್ಟಿರುವುವು. ಇದು ನಿನಗೆ ತಿಳಿಯದ್ದಲ್ಲ. ಆದಾಗ್ಯೂ ಧರ್ಮಶಾಸ್ತ್ರಜ್ಞರು ಹೇಳಿರುವುದನ್ನು ನಿನ್ನ ಜ್ಞಾಪಕಕ್ಕೆ ಬರುವುದಕ್ಕೋಸ್ಕರ ಹೇಳುತ್ತೇನೆ. ಪರೋಪಕಾರವೇ ಸ್ವರ್ಗಕ್ಕೆ ಸೋಪಾನ. ಪರಪೀಡೆಯೇ ನರಕಕ್ಕೆ ಸೋಪಾನ ದೇಹವನ್ನು ಎತ್ತಿದವರು ಜಿತೇಂದ್ರಿಯರಾಗಿ ಸ್ವರ್ಗವನ್ನು ಪಡೆಯುವರು. ದುರ್ವಿಷಯಗಳಿಗೆ ಅಧೀನರಾಗಿ, ಅರಿಷಡ್ವರ್ಗಗಳಿಗೆ ಗುಲಾಮರಾಗಿ ನರಕವನ್ನು ಪಡೆಯುವರು. ಇದು ನಿನಗೆ ತಿಳಿದ ವಿಷಯವಾದಾಗ್ಯೂ ನೀನು ಅಪೇಕ್ಷಿಸಿದ್ದರಿಂದ ಪುನಃ ಅದು ನಿನ್ನ ಸ್ಮೃತಿಪಥಕ್ಕೆ ಬರಲೆಂದು ಶ್ರುತಪಡಿಸಿರುವೆನು ನೀನು ನಿನ್ನ ತಂದೆಯನ್ನು ಹುಡುಕಿಕೊಂಡು ಇಲ್ಲಿಗೆ ಬಂದಿರುವಿ ನಿನ್ನ ತಂದೆಯು ಭೂಮಿಯಲ್ಲಿಯೇ ಇರುವನು ಶೀಘ್ರದಲ್ಲಿಯೇ ಅವನನ್ನು ನೋಡುವ ಸುಖವು ನಿನಗೆ ಉಂಟಾಗುವುದು. ನಿನಗೆ ಮಂಗಳವಾಗಲಿ ” ಎಂದ [illegible] ಸ್ವರ್ಗಾಭಿಮುಖವಾಗಿ ಹೊರಟನು.



